# ಶ್ರೀಮದ್ಭಾಗವತ

## ದ್ವಾದಶಸ್ಕಂಧ



ಪ್ರಕಾಶನ : ವಿಶ್ವಮಧ್ವ[redacted]ತ್ತರಾದಿಮಠ

ಅನುವಾದ ಹಾಗೂ ಸಂಪಾದನೆ

**ಪಂ. ಪೂ. ಗುತ್ತಲ ರಂಗಾಚಾರ್ಯರು**

ಕುಲಪತಿಗಳು [illegible]

ವಿಶ್ವಮಧ್ವಮಹಾಪರಿಷತ್ ಗ್ರಂಥಮಾಲಾ - 83

# ಶ್ರೀಮದ್ಭಾಗವತ

## ದ್ವಾದಶಸ್ಕಂಧ

*ಅನುವಾದ ಹಾಗೂ ಸಂಪಾದನೆ*
ಪಂ.ಪೂ.ಗುತ್ತಲ ರಂಗಾಚಾರ್ಯರು
ಕುಲಪತಿಗಳು, ಶ್ರೀಜಯತೀರ್ಥವಿದ್ಯಾಪೀಠ

ಸಹ ಸಂಪಾದನೆ :
ಪಂ. ವೆಂಕಟೇಶಾಚಾರ್ಯ ಬಿ.ಆರ್

ಪ್ರಕಾಶನ :
ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಉತ್ತರಾದಿಮಠ
ವಿಶ್ವಮಧ್ವಮಹಾಪರಿಷತ್, ಬೆಂಗಳೂರು - ೪

**Srimad Bhagavata Dwadasha Skandha**
A highly scholarly yet simple translation in Kannada with word by word meaning, summary and detailed in-depth notes based on Bhavata Tatparya of Sri Madhwacharya a deptly summarizing all available commentaries on the subject by **Sudha Visharada Pandita Poojya Rangacharya Guttal**, Kulapati of Sri Jayateertha Vidyapitha.

Published by : **Vishva Madhwa Maha Parishat**

Copies : 1000

First Edition : April 2011

No.of Pages : 16+288



**Price.** : [In India] **Rs. 150**

**Copies can be had from :**

**Vishva Madhwa Maha Parishat**
Research Center, #11, 2nd Floor,
Uttaradimath Building. Uttaradi Math Road,
Shankarpuram, Basavanagudi
BANGALORE - 4 Phone : 080 26603692

Type Setting : V.M.M.P Research wing.

Cover Design : **Gopalakrishna**

Printed by : **Jayanta Printer BNG - 23. Phone : 9141632233**



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ, ಶ್ರೀಜಯತೀರ್ಥವಿದ್ಯಾಪೀಠದ
ಸಂಸ್ಥಾಪಕರಾದ ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥಶ್ರೀಪಾದಂಗಳವರ
ಅಡಿದಾವರೆಗಳಲ್ಲಿ ಭಕ್ತಿಪೂರ್ವಕ ಸಮರ್ಪಣೆ



ಶ್ರೀಮಜ್ಜಗದ್ಗುರುಮಧ್ವಾಚಾರ್ಯಮೂಲಮಹಾಸಂಸ್ಥಾನಶ್ರೀಮದುತ್ತರಾದಿಮಠಾಧೀಶರಾದ,

ಶ್ರೀ 1008 ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ ಅಡಿದಾವರೆಗಳಲ್ಲಿ

ಭಕ್ತಿಪೂರ್ವಕ ಸಮರ್ಪಣೆ

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ
ಶ್ರೀಮದುತ್ತರಾದಿಮಠಾಧೀಶರಾದ
ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥಶ್ರೀಪಾದಂಗಳವರ

## "ಅನುಗ್ರಹ ಸಂದೇಶ"

**ಶ್ಲೋಕಾರ್ಧಂ ಶ್ಲೋಕಪಾದಂ ವಾ ನಿತ್ಯಂ ಭಾಗವತೋದ್ಭವಮ್ ।**
**ಯಃ ಪಠೇತ್ ಪ್ರಾತರುತ್ಥಾಯ ಸ ಜೀವನ್ನೇವ ಮುಕ್ತಿಗಃ ॥**

ಎಂಬ ಉಕ್ತಿಯಂತೆ ಧರ್ಮದ ರಕ್ಷಣೆಗಾಗಿ ಅವತರಿಸಿದ ಶ್ರೀಕೃಷ್ಣನ ಪ್ರತಿಮೆಯಂತಿರುವ, ಅಜ್ಞಾನಾಂಧಕಾರಕ್ಕೆ ಸೂರ್ಯನಂತೆ ಇರುವ 'ಶ್ರೀಮದ್ಭಾಗವತ' ಗ್ರಂಥದ ಒಂದು ಶ್ಲೋಕದ ಅರ್ಧಭಾಗವನ್ನು ಅಥವಾ ಪಾದವನ್ನು ಪಠಿಸಿದರೂ ಮಹಾಫಲವಿದೆ. ಆದರೆ ಅರ್ಥಾನುಸಂಧಾನವಿದ್ದಾಗ ಮಾತ್ರ ಅಧಿಕವಾದ ಲಾಭ. ಆದರೆ ಭಾಗವತದ ಒಂದೊಂದು ಶ್ಲೋಕಗಳೂ ಕಬ್ಬಿಣದ ಕಡಲೆಗಳಂತೆ. ಶ್ರೀಮದಾಚಾರ್ಯರ ಭಾಗವತತಾತ್ಪರ್ಯ, ವಿಜಯಧ್ವಜತೀರ್ಥರು, ಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀನಿವಾಸತೀರ್ಥರೇ ಮೊದಲಾದವರ ವ್ಯಾಖ್ಯಾನಗಳ ಉಪಕಾರವಿಲ್ಲದೇ ಶ್ರೀಮದ್ಭಾಗವತ ಅರ್ಥವಾಗುವುದು ಅಸಾಧ್ಯ. ಈ ನಿಟ್ಟಿನಲ್ಲಿ ಶ್ರೀಮದ್ಭಾಗವತ ಹಾಗೂ ಶ್ರೀಮದ್ಭಾಗವತತಾತ್ಪರ್ಯಕ್ಕೆ ಉಪಲಬ್ಧವಿರುವ ಮುದ್ರಿತ ಹಾಗು ಅಮುದ್ರಿತ ಸಕಲಟೀಕಾಟಿಪ್ಪಣಿಗಳ ಅಭಿಪ್ರಾಯಗಳನ್ನು ಹಾಗು ಅದಕ್ಕನುಗುಣವಾಗಿ ಶ್ರೀಮದ್ಭಾಗವತದ ಪದಪದಾರ್ಥ ಹಾಗು ವಿಶೇಷಾರ್ಥಗಳನ್ನು ಭಾಗವತದ ಅಧ್ಯಯನ ಹಾಗು ಪಾಠಪ್ರವಚನಾಸಕ್ತರಾದ ಎಲ್ಲ ಜಿಜ್ಞಾಸುಗಳಿಗೆ ತಿಳಿಸುವುದಕ್ಕಾಗಿ ನಮ್ಮ ಸ್ವರೂಪೋದ್ಧಾರಕ ಗುರುಗಳಾದ ಶ್ರೀ ಶ್ರೀ ೧೦೦೮ ಶ್ರೀಸತ್ಯಪ್ರಮೋದತೀರ್ಥಶ್ರೀಪಾದ ಒಡೆಯರ ಪ್ರಿಯಶಿಷ್ಯರಾದ, ಜಯತೀರ್ಥ ವಿದ್ಯಾಪೀಠದ ಕುಲಪತಿಗಳಾದ, ನಿರಂತರ ಸುಧಾ, ವ್ಯಾಸತ್ರಯ, ದ್ವೈತದ್ಯುಮಣ್ಯಾದಿಗಳ ಪಾಠ ಪ್ರವಚನಗಳಲ್ಲಿ ಆಸಕ್ತರಾದ ಪಂಡಿತವರೇಣ್ಯ **ಶ್ರೀಗುತ್ತಲ ಆಚಾರ್ಯರವರು** (ಪಂ.ರಂಗಾಚಾರ್ಯರು) ಸಕಲ ವ್ಯಾಖ್ಯಾನಗಳಿಂದ ಸಹಿತವಾದ ಶ್ರೀಮದ್ಭಾಗವತ ಅನುವಾದ ಕಾರ್ಯವನ್ನು ಮಾಡುತ್ತಾ

ಬಂದಿದ್ದಾರೆ. ಈಗಾಗಲೇ ಪ್ರಾಯಃ ಸಮಗ್ರವಾದ ಭಾಗವತದ ಅನುವಾದಕಾರ್ಯವು ಸಂಪನ್ನವಾಗಿದೆ. ಅದರಲ್ಲಿ ನವಮ, ದಶಮ, ತೃತೀಯ ಏಕಾದಶ ಸ್ಕಂಧಗಳ ಅನುವಾದಗಳು ಐದಾರು ಸಂಪುಟಗಳಲ್ಲಿ ಈಗಾಗಲೇ ಪ್ರಕಾಶಿತವಾಗಿವೆ. ಅನೇಕ ಆಸಕ್ತ ವಿದ್ವಾಂಸರು ಹಾಗು ಲೌಕಿಕ ಜಿಜ್ಞಾಸುಗಳು ಇವುಗಳ ಅಧ್ಯಯನದಿಂದ ವಿಶೇಷ ಲಾಭವಾಗಿದೆ ಎಂಬುದಾಗಿ ಮುಕ್ತಕಂಠದಿಂದ ಹೇಳುತ್ತಿದ್ದಾರೆ. ಎಷ್ಟೋ ವ್ಯಾಖ್ಯಾನಗಳು ಮುದ್ರಿತವೇ ಆಗಿಲ್ಲ. ಮುದ್ರಿತವಾದ ವ್ಯಾಖ್ಯಾನಗಳಲ್ಲಿ ಮುದ್ರಣದೋಷಗಳು ಸಾಕಷ್ಟು ಇರುತ್ತವೆ. ಇವುಗಳೆಲ್ಲವನ್ನು ಸರಿಪಡಿಸಿಕೊಂಡು ಓದುವಷ್ಟು ಅವಧಾನ-ಅನುಕೂಲತೆಗಳು ಇರುವುದಿಲ್ಲ. ಇಂತಹ ಸಂದರ್ಭಗಳಲ್ಲಿ ಬಹಳ ಪರಿಶ್ರಮಪೂರ್ವಕವಾಗಿ ಆ ಎಲ್ಲ ವ್ಯಾಖ್ಯಾನಗಳನ್ನು ಶೋಧಿಸಿ ಏಕತ್ರ ಸಂಗ್ರಹಿಸಿ ಮಾಡಿದ ಈ ಅನುವಾದಕಾರ್ಯವು ನಿಜಕ್ಕೂ ಲಾಭದಾಯಕವಾಗುವಲ್ಲಿ ಸಂದೇಹವಿಲ್ಲ. ಉಪವಾಸ, ಸಭೆ-ಸಮಾರಂಭ ಯಾವುದೇ ಪ್ರಸಂಗವಿರಲಿ ಹಗಲಿರುಳೆನ್ನದೆ ಈ ಅನುವಾದ ಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದೊಂದು ಭಗವಂತನಿಗೆ ಅತ್ಯಂತ ಪ್ರೀತಿಕರವಾದ ತಪಸ್ಸು ಎನ್ನುವುದರಲ್ಲಿ ಸಂದೇಹವಿಲ್ಲ.

ಪ್ರಕೃತ ಭಾಗವತ-ತಾತ್ಪರ್ಯ-ವ್ಯಾಖ್ಯಾನಗಳಿಂದ ಸಹಿತವಾದ ದ್ವಾದಶಸ್ಕಂಧದ ಅನುವಾದರೂಪವಾದ ಈ ಕೃತಿಯನ್ನು ವಿಶ್ವಮಧ್ವಮಹಾಪರಿಷತ್ತಿನ ವತಿಯಿಂದ ಪ್ರಕಾಶನ ಮಾಡಲಾಗುತ್ತಿದೆ. ಇಂತಹ ಮಹತ್ ಕಾರ್ಯವನ್ನು ಮಾಡಿದ ಆಚಾರ್ಯರವರಿಗೆ ಜ್ಞಾನ-ಭಕ್ತಿ-ವೈರಾಗ್ಯಾದಿಗಳನ್ನು ಕೊಟ್ಟು ನಿರಂತರ ಸುಧಾದಿಗ್ರಂಥಗಳ ಪಾಠಪ್ರವಚನದ ಕಾರ್ಯವು, ಗ್ರಂಥಲೇಖನಾದಿಗಳು ಇವರಿಂದ ನಡೆಯಲಿ ಎಂದು ನಮ್ಮ ಉಪಾಸ್ಯಮೂರ್ತಿಗಳಾದ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

ಖರ ಚೈತ್ರ ಶುದ್ಧ ಪ್ರತಿಪದಾ
೦೪-೦೪-೨೦೧೧

# ಮುನ್ನುಡಿ

ಭಗವದ್ಭಕ್ತಿಯ ಮಹಾಪೂರದಿಂದ ಮೈದುಂಬಿ ಹರಿವ ನದಿಯೊಂದಿರುವುದಾದರೆ ಅದು "ಭಾಗವತ ಮಹಾಪುರಾಣ" ಈ ಭಾಗವತ ನದಿ ಅಪಾರವಾದ ಸಂಸಾರ ಸಾಗರಕ್ಕೆ ಸೇರಿತೆಂದರೆ ಈ ಸಾಗರ ಒಣಗುವುದು ಖಂಡಿತ. ಭೋರ್ಗರೆಯುವ ಈ ಭಾಗವತನದಿ ನಮ್ಮ ಜೀವನದಲ್ಲಿ ಒಮ್ಮೆಯಾದರೂ ನಮ್ಮ ಅಂತರಂಗವನ್ನು ಬಾಚಿ, ಬಳಸಿ, ಉಬ್ಬಿ ತಬ್ಬಿ, ಹರಿಯಿತೆಂದರೆ, ತನು-ಮನಗಳಲ್ಲಿ ಆನಂದೋತ್ಸಾಹಗಳ ಫಸಲು ಬರುವುದರಲ್ಲಿ ಇನಿತೂ ಸಂದೇಹವಿಲ್ಲ.

ಪರಿಶುದ್ಧ ಜೀವನಕ್ಕೆ ಅತ್ಯವಶ್ಯಕವಾದ ಬೆಳಕಿನ ಹೊನಲು, ಬದುಕಿನ ಬೇಸಿಗೆಯಲ್ಲಿ ಬರುವ ವಸಂತ, ಬರಡು ಬದುಕಿಗೊಂದು ಚೈತನ್ಯದ ಚಿಲುಮೆ ಈ ಭಾಗವತ. ನಮ್ಮ ಮನಸ್ಸಿನ ಕೊಳೆಯೆಂಬ ಕಳೆಯನ್ನು ಕಿತ್ತಿ ಭಗವದ್ಭಕ್ತಿಯ ಬೀಜವನ್ನು ಬಿತ್ತಲು ಅನಿವಾರ್ಯವಾದದ್ದು ಭಾಗವತ ಕೃಷಿ. ಆತ್ಮಸಂದೇಶವನ್ನು ಹೊತ್ತ ಓಲೆಯ ವಿಸ್ತೃತ ರೂಪ.

ಇಂತಹ ಭಾಗವತದ ವ್ಯಾಖ್ಯಾನವನ್ನು ಮಾಡುವುದರಲ್ಲಿಯೇ ಸಾರ್ಥಕತೆಯನ್ನು ಕಂಡವರು ಶ್ರೀಯಾದವಾರ್ಯರು, ಶ್ರೀಸತ್ಯಧರ್ಮತೀರ್ಥರು, ಶ್ರೀಶ್ರೀನಿವಾಸತೀರ್ಥರು ಮುಂತಾದ ಮಹನೀಯರು. ಮಹಾಮೇಧಾವಿಗಳಾದ ಇವರ ಪ್ರತಿಭೆಯೂ ಪ್ರಕಾಶಕ್ಕೆ ಬಂದದ್ದು ಈ ಭಾಗವತ ವ್ಯಾಖ್ಯಾನವೆಂಬ ಕಾಯಕವನ್ನು ಕೈಗೊಂಡದ್ದರಿಂದಲೇ ಎಂದರೆ ತಪ್ಪಾಗಲಾರದು. ಇಂತಹ ಭಾಗವತವನ್ನು ಕನ್ನಡದಲ್ಲಿ ಅನುವಾದಿಸಲು ಅವಕಾಶವನ್ನು ಕರುಣಿಸಿದ ಆ ಭಗವಂತನಿಗೆ ನನ್ನ ಅನಂತ ನಮನಗಳು. ನನ್ನ ಪಾಲಿಗೆ ಇದರ ಅನುವಾದವೆಂಬುದು ಬಹು ಜನ್ಮದ ತಪಸ್ಸಿನ ಫಲ. ಬಾಳಿನಲ್ಲಿ ದೊರಕಬಹುದಾದಂತಹ ಅಪರೂಪದ ಸುಯೋಗ. ಈ ಸುಯೋಗ ನನಗೆ ಒದಗಿ ಬಂದದ್ದು ನನ್ನ ಅದೃಷ್ಟದ ಪರಿಪಾಕವೇ ಸರಿ ಎಂಬುದಾಗಿ ಭಾವಿಸುವೆ.

ಪ್ರಕೃತ ಭಾಗವತ ೧೨ನೇ ಸ್ಕಂಧವನ್ನು ಜನರ ಮುಂದಿರಿಸಲು ಮನಸ್ಸು ಮುದಗೊಳ್ಳುತ್ತಿದೆ. ಈ ಗ್ರಂಥದ ಸಂಪಾದನಾಕಾರ್ಯದಲ್ಲಿ ವಿಶೇಷಪರಿಶ್ರಮ ವಹಿಸಿದ ಶ್ರೀ.ಪಂ. ವೆಂಕಟೇಶಾಚಾರ್ಯ ಬಿ.ಆರ್ ಇವನಿಗೆ ಕುಲಸ್ವಾಮಿ ತೊರವೆಯ ನಾರಸಿಂಹನು ಆಯುರಾರೋಗ್ಯಗಳನ್ನು ಕೊಟ್ಟು ಅನುಗ್ರಹಿಸಲೆಂದು ಪ್ರಾರ್ಥಿಸುವೆ.

ಅದರಂತೆ ಈ ಪುಸ್ತಕಕ್ಕೆ ಸುಂದರ ರೂಪವನ್ನು ಕೊಟ್ಟ ಪಂ. ಮಹಿದಾಸಾಚಾರ್ಯ ಜೋಶಿ ಇವನಿಗೆ, ಸುಂದರಮುಖಪುಟದ ವಿನ್ಯಾಸವನ್ನು ಮಾಡಿದ ಶ್ರೀ ಗೋಪಾಲಕೃಷ್ಣನಿಗೆ ಭಗವಂತ ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇನೆ.

ಕೊನೆಯದಾಗಿ, ಯಾವ ಗುರುಗಳ ಅನುಗ್ರಹದಿಂದ ನನಗೆ ಈ ಅನುವಾದ ಸಾಮರ್ಥ್ಯವು ಬಂದಿತೋ ಅಂತಹ ಶ್ರೀ ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಅಡಿದಾವರೆಯಲ್ಲಿ ಅನಂತ ಪ್ರಣಾಮಗಳನ್ನು ಸಲ್ಲಿಸುವೆ. ಹಾಗೆಯೇ ಯಾವ ಗುರುಗಳ ಆಶೀರ್ವಾದ ಬಲದಿಂದಾಗಿ ಈ ನನ್ನ ಅನುವಾದ ಕಾರ್ಯವು ಸಾಂಗವಾಗಿ ನೆರವೇರಿತೋ ಅಂತಹ ಉತ್ತರಾದಿ ಮಠಾಧೀಶರಾದ ಶ್ರೀಶ್ರೀಸತ್ಯಾತ್ಮತೀರ್ಥರ ಪಾದಾರವಿಂದಗಳಿಗೂ ಸಭಕ್ತಿ ಅನಂತ ನಮನಗಳನ್ನು ಸಲ್ಲಿಸಿ ಇನ್ನು ಮುಂದೆ ನನ್ನಿಂದ ಹೀಗೆಯೇ ಸತ್ಕರ್ಮಗಳನ್ನು ಮಾಡಿಸಲೆಂದು ಮದ್ಗುರ್ವಂತರ್ಯಾಮಿ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸುವ

ಭಾಗವತ ಜನಪ್ರಿಯ
ಪಂ.ರಂಗಾಚಾರ್ಯ ಗುತ್ತಲ

ಖರ ಚೈತ್ರ ಶುದ್ಧ ಪ್ರತಿಪದಾ
೦೪-೦೪-೨೦೧೧



**ಆಶೀರ್ವಚನ**

ಶ್ರೀಯುತ ಶ್ರೀನಿವಾಸರಾವ್ ಮಣಿಪಾಕಂ ಚೆನ್ನೈ ಇವರು ತಮ್ಮ ತಂದೆ ತಾಯಿಯ ಸ್ಮರಣಾರ್ಥ ಈ ಗ್ರಂಥದ ಪ್ರಕಾಶನಕ್ಕೆ ವಿಶೇಷ ಸೇವೆಯನ್ನು ಮಾಡಿದ್ದಾರೆ. ಈ ಮೂಲಕ ಶ್ರೀವೇದವ್ಯಾಸದೇವರ ಹಾಗೂ ಶ್ರೀಮದಾಚಾರ್ಯರ ಸೇವೆಯನ್ನು ಮಾಡಿದ್ದಾರೆ.

ಶ್ರೀನಿವಾಸರಾವ್ ಮಣಿಪಾಕಂ ಚೆನ್ನೈ ಇವರಿಗೆ ಹಾಗೂ ಕುಟುಂಬದವರಿಗೆ ಭಗವಂತ ಆಯುರಾರೋಗ್ಯ ಐಶ್ವರ್ಯಗಳನ್ನು, ಆಚಾರ್ಯರ ಶಾಸ್ತ್ರದಲ್ಲಿ ಆಸಕ್ತಿಯನ್ನು ನೀಡಲಿ ಎಂದು ಅಸ್ಮದುಪಾಸ್ಯಮೂರ್ತಿ ಶ್ರೀಮೂಲರಾಮ-ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರು
ಉತ್ತರಾದಿಮಠ

## ಪ್ರಕಾಶಕರ ನುಡಿ

ಶ್ರೀ 1008 ಶ್ರೀ ಸತ್ಯಪ್ರಮೋದತೀರ್ಥ ಶ್ರೀಪಾದಂಗಳವರ ಮಹದಪೇಕ್ಷೆಯಂತೆ ಪ್ರಾಚೀನಗ್ರಂಥಗಳ ಸಂರಕ್ಷಣೆ ಹಾಗೂ ಅವುಗಳ ಸಂಶೋಧನ, ಪ್ರಕಾಶನ ಮೊದಲಾದ ಅನೇಕ ಉನ್ನತಮಟ್ಟದ ಉದ್ದೇಶಗಳಿಂದ ಶ್ರೀ 1008 ಶ್ರೀ ಸತ್ಯಾತ್ಮತೀರ್ಥ ಶ್ರೀಪಾದಂಗಳವರಿಂದ ಸಂಸ್ಥಾಪಿತವಾದ ಸಂಸ್ಥೆ **"ವಿಶ್ವಮಧ್ವಮಹಾಪರಿಷತ್"**

ನಮ್ಮ ಸಂಸ್ಥೆಯು ಪ್ರಾಚೀನವಾದ, ಅಪ್ರಕಟಿತವಾದ ಗ್ರಂಥಗಳನ್ನು ವಿದ್ವಾಂಸರಿಂದ ಸಂಶೋಧನೆ ಮಾಡಿಸಿ ಅವುಗಳನ್ನು ಪ್ರಕಾಶಿಸುವ ಮಹತ್ತರ ಧ್ಯೇಯವನ್ನು ಹೊಂದಿದೆ. ಆ ದೃಷ್ಟಿಯಲ್ಲಿ ಅನೇಕ ಮಹತ್ವದ ಪುಸ್ತಕಗಳನ್ನು ಪ್ರಕಾಶಿಸಿದೆ. ಅದಲ್ಲದೇ ಜನರಲ್ಲಿ ಧರ್ಮಜಾಗೃತಿಗಾಗಿ ಪ್ರಶ್ನೋತ್ತರರೂಪದಲ್ಲಿ ಹಾಗೂ ಪ್ರವಚನರೂಪದಲ್ಲಿ ಅನೇಕ ಉಪಯುಕ್ತ ಪುಸ್ತಕಗಳನ್ನು ಈಗಾಗಲೇ ಹೊರತರಲಾಗಿದೆ. ಸಂಸ್ಕೃತ-ಕನ್ನಡ-ತೆಲುಗು-ತಮಿಳು ಹಾಗೂ ಆಂಗ್ಲ ಮೊದಲಾದ ಭಾಷೆಗಳಲ್ಲಿ ಸಂಸ್ಥೆಯಿಂದ ಅನೇಕ ಗ್ರಂಥಗಳು ಪ್ರಕಾಶಿತವಾಗಿವೆ.

ಪ್ರಕೃತ ಪಂ.ಪೂಜ್ಯ ಗುತ್ತಲಾಚಾರ್ಯರವರು ಜನೋಪಯೋಗಿಯಾದ **"ಶ್ರೀಮದ್ಭಾಗವತದ ದ್ವಾದಶಸ್ಕಂಧ"**ವನ್ನು ಸುಂದರವಾಗಿ ಸಂಪಾದನೆ ಮಾಡಿದ್ದಾರೆ. ಇವರಿಗೂ ಹಾಗೂ ಸುಂದರವಾಗಿ ಮುದ್ರಣ ಮಾಡಿದ ಜಯಂತ ಮುದ್ರಣಾಲಯದವರಿಗೂ ಧನ್ಯವಾದಗಳು.

**ಪ್ರಧಾನ ಕಾರ್ಯದರ್ಶಿಗಳು**
**ವಿಶ್ವಮಧ್ವಮಹಾಪರಿಷತ್ ಉತ್ತರಾದಿಮಠ**
**ಬಸವನಗುಡಿ ಬೆಂಗಳೂರು - 4**

# ಅನುಕ್ರಮಣಿಕಾ

# ಶ್ರೀಮದ್ಭಾಗವತೇ - ದ್ವಾದಶಸ್ಕಂಧೇ

## ಪ್ರಥಮೋಽಧ್ಯಾಯಃ

**ಸಾರಾಂಶ**

ಈ ಹಿಂದೆ ಶ್ರೀಕೃಷ್ಣಪರಮಾತ್ಮನು ಪರಂಧಾಮ ಸೇರಿದ ವೃತ್ತಾಂತವನ್ನು ಕೇಳಿದ ಪರೀಕ್ಷಿತರಾಜನು ಶುಕಾಚಾರ್ಯರನ್ನು ಕುರಿತು ಹೀಗೆ ವಿಜ್ಞಾಪಿಸಿಕೊಳ್ಳುವನು.

ಮುನಿಗಳೇ ಯದುಕುಲತಿಲಕನಾದ ಶ್ರೀಕೃಷ್ಣನು ವೈಕುಂಠಕ್ಕೆ ತೆರಳಿದ ಮೇಲೆ ಈ ಭೂಮಿಯನ್ನು ಆಳಿದ ರಾಜರು ಯಾರು ? ತಿಳಿಸಿರಿ ಎಂದನು.

ಶ್ರೀಮನ್ನಾರಾಯಣನಿಂದ ಚಂದ್ರವಂಶದಲ್ಲಿ ಜನಿಸಿದ ಪುರುಮೊದಲಾದ ರಾಜರ ಕಥೆಗಳನ್ನು ನವಮಸ್ಕಂಧದಲ್ಲಿ ನಿರೂಪಿಸಲಾಗಿದೆ. ಪುರುವಂಶದ ಕಥೆಯನ್ನು ನಿರೂಪಿಸಲು ಹೊರಟು ಮಾರ್ಜಾರಿ ಎಂಬುವನಿಗೆ ಶ್ರುತಶ್ರವನೇ ಮೊದಲಾದ ಇಪ್ಪತ್ತು ಮಂದಿ ಪುತ್ರರು ಜನಿಸುತ್ತಾರೆ. ಬೃಹದ್ರಥನ ವಂಶದಲ್ಲಿ ಜನಿಸಿದ ಇವರಲ್ಲಿ ಪುರಂಜಯನೇ ಕೊನೆಯವನು. ಅವನಿಗೆ ಶುನಕ ಎಂಬ ಮಂತ್ರಿ ಇದ್ದ. ಅವನಾದರೂ ತನ್ನ ಸ್ವಾಮಿಯಾದ ಪುರಂಜಯನನ್ನೇ ಕೊಲ್ಲಿಸಿ ತನ್ನ ಮಗನಾದ ಪ್ರದ್ಯೋತನನ್ನು ಸಿಂಹಾಸನದಲ್ಲಿ ಕೂಡಿಸಿದನು. ಈ ಪ್ರದ್ಯೋತನ ವಂಶದಲ್ಲಿ ಬಂದ ಐದು ಜನ ರಾಜರು ಒಟ್ಟು ನೂರಾಮೂವತ್ತೆಂಟು ವರ್ಷ ರಾಜ್ಯವಾಳುವರು. ನಂತರ ನಂದರಾಜರ ವಂಶವಿಸ್ತಾರವನ್ನು ಹೇಳುತ್ತಾ ಮಹಾನಂದಿ ಎಂಬ ರಾಜನಿಗೆ ಶೂದ್ರಸ್ತ್ರೀಯಲ್ಲಿ ನಂದನೆಂಬ ಮಗನು ಹುಟ್ಟುವನು. ಇವನು ಮಹಾಪರಾಕ್ರಮಿಯಾಗಿದ್ದು ಮಹಾಪದ್ಮಸಂಖ್ಯೆಯಷ್ಟು ಸೇನೆ ಹಾಗು ಧನಕ್ಕೂ ಸ್ವಾಮಿಯಾಗಿ ಮೆರೆದು

ಮಹಾಪದ್ಮನೆಂದೇ ಪ್ರಸಿದ್ಧನಾಗುವನು. ಇವನಿಂದ ಅನೇಕ ಕ್ಷತ್ರಿಯ ಕುಲವು ನಾಶ ಹೊಂದುವುದು. ಅಲ್ಲಿಂದ ಮುಂದೊರೆದು ಎಲ್ಲ ರಾಜರೂ ಸಾಮಾನ್ಯವಾಗಿ ಅಧರ್ಮದಿಂದಲೇ ರಾಜ್ಯವಾಳುವರು.

ನಂದನ ಮಕ್ಕಳಾದ ನವನಂದನರನ್ನು ಚಾಣಕ್ಯನೆಂಬ ಒಬ್ಬ ಮಹಾಬ್ರಾಹ್ಮಣನು ನಾಶಮಾಡುವನು. ನಂದರ ನಾಶವಾದ ಮೇಲೆ ಮಹಾಪದ್ಮನ (ನಂದನನ) ಇನ್ನೊಬ್ಬ ಪಟ್ಟದರಸಿಯ ಮಗನಾದ ಚಂದ್ರಗುಪ್ತಮೌರ್ಯನನ್ನು ಸಿಂಹಾಸನದಲ್ಲಿ ಪಟ್ಟಾಭಿಷೇಕ ಮಾಡುವನು. ಮುಂದೆ ಇವನ ವಂಶದಲ್ಲಿ ಅಶೋಕ ಮೊದಲಾದ ರಾಜರು ಹುಟ್ಟುತ್ತಾರೆ.

ಮಗಧ ರಾಜ್ಯದ ವಿಶ್ವಸ್ಫೂರ್ಜಿಯೆಂಬುವನು ಹಿಂದೆ ಹೇಳಿದ ಪುರಂಜಯನಿಗಿಂತಲೂ ಪರಾಕ್ರಮಿಯಾಗಿದ್ದು ಬ್ರಾಹ್ಮಣಾದಿ ಉಚ್ಚವರ್ಣದವರನ್ನು ಕೆಡಿಸಿ ತನ್ನ ರಾಜ್ಯವನ್ನೆಲ್ಲಾ ಪುಲಿಂದ ಯದು ಮದ್ರಕರೆಂಬ ಹೆಸರಿನಿಂದ ಮ್ಲೇಂಛಸದೃಶರನ್ನಾಗಿ ಮಾಡುವನು. ದುಷ್ಟಬುದ್ಧಿಯ ಇವನು ಬ್ರಾಹ್ಮಣವಿರೋಧಿಯಾಗಿದ್ದು ಅವರ ವಿರುದ್ಧ ಜನರನ್ನು ಸ್ಥಾಪಿಸಿ ಸಲಹುವನು. ಇವನ ಆಡಳಿತದಲ್ಲಿ ಸೌರಾಷ್ಟ್ರ,ಆವಂತಿ,ಆಭೀರ,ಅರ್ಬುದ,ಮಾಲವ ಮೊದಲಾದ ದೇಶದಲ್ಲಿ ಇರುವ ಬ್ರಾಹ್ಮಣರೆಲ್ಲರೂ ಉಪನಯನಾದಿ ಸಂಸ್ಕಾರಗಳನ್ನು ತ್ಯಜಿಸಿ ಶೂದ್ರಪ್ರಾಯರಾಗುವಂತೆ ಮಾಡುವನು. ಕೊನೆಗೆ ಸಮಸ್ತಪ್ರದೇಶವೂ ಶೂದ್ರಪ್ರಾಯವಾಗುವದು. ರಾಜರುಗಳು ಆಚಾರ-ವಿಚಾರಗಳಲ್ಲಿ ಮ್ಲೇಂಛರಂತೆ ವರ್ತಿಸುವರು. ಅಧರ್ಮ ಅಸತ್ಯಗಳಲ್ಲಿ ನಿರತರೂ, ತೀವ್ರ ಕೋಪವುಳ್ಳವರು, ಅಲ್ಪದಾನಮಾಡುವವರೂ, ಹೆಂಗಸರನ್ನೂ ಬಾಲಕರನ್ನೂ ಗೋವುಗಳನ್ನೂ ಬ್ರಾಹ್ಮಣರನ್ನೂ ಕೊಲ್ಲಲು ಹಿಂಜರಿಯದವರು ಆಗುತ್ತಾರೆ. ಇನ್ನೊಬ್ಬರ ಹಣ-ಹೆಂಡತಿಯರನ್ನು ಅಪಹರಿಸುವವರೂ ಆಗುತ್ತಾರೆ. ಇಂತಹ ಜನರಿಗೆ ಶಕ್ತಿಯೂ ಕಡಿಮೆ ಆಯುಸ್ಸೂ ಕಡಿಮೆ. ಹೀಗೆ ರಾಜರೆನಿಸಿದವರು ಪ್ರಜೆಗಳನ್ನು ಶೋಷಣೆ ಮಾಡಿದರೆ ಪ್ರಜೆಗಳೂ ಮತ್ತೊಬ್ಬರ ಶೋಷಣೆಯಲ್ಲಿ ತೊಡಗುವರು. ತಮ್ಮ ತಮ್ಮಲ್ಲಿಯೇ ಅಂತಃಕಲಹದಿಂದಲೂ ಒಬ್ಬರನ್ನೊಬ್ಬರು ಪೀಡಿಸುತ್ತಾ ನಾಶವನ್ನು ಹೊಂದುತ್ತಾರೆ.



*ಶ್ರೀಮನ್ನಾರಾಯಣನಿಂದ ಚಂದ್ರವಂಶದಲ್ಲಿ ಜನಿಸಿದ ಪುರುಮೊದಲಾದ ರಾಜರ ಕಥೆಗಳನ್ನು ನವಮಸ್ಕಂಧದಲ್ಲಿ ನಿರೂಪಿಸಿದರು. ಈ ಹಿಂದೆ ರಿಪುಂಜಯನನ್ನು ಆರಂಭಿಸಿ ಅನಂತರ ಜನಿಸಿದವರು ದೋಷದಿಂದ ಕೂಡಿದವರು ನೀಚರು ನಿಂದ್ಯರು ಕಳ್ಳರೂ ದುರಾಚಾರಿಗಳು. ಅವರ ಕಥೆಗಳನ್ನು ಕೇಳುವದರಿಂದ ಭಕ್ತಿ ಹುಟ್ಟುವದಾದರೂ ಹೇಗೆ ? ಎನ್ನುವ ಪ್ರಶ್ನೆಗೆ ಭಾಗವತವು ಹೀಗೆ ಉತ್ತರಿಸುತ್ತದೆ. ರಿಪುಂಜಯಮೊದಲಾದವರು ನೀಚರು ಕಳ್ಳರೂ ಆದುದಕ್ಕೆ ಅವರಿಗಾದ ದುಃಖಮೊದಲಾದವುಗಳನ್ನು ಕಂಡು ವೈರಾಗ್ಯಉಂಟಾಗಿ ಆ ವೈರಾಗ್ಯದಿಂದ ಜ್ಞಾನ ಪುಟ್ಟಿ ಯೋಗ್ಯವಾದ ಸದ್ಗತಿಯಾಗುವದು ಎನ್ನುವ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು ರಿಪುಂಜಯ ಮೊದಲಾದ ರಾಜರ ವೃತ್ತಾಂತವನ್ನು ಹೇಳುವರು.*

**ಯೋಽಂತ್ಯೋ ರಿಪುಂಜಯೋ ನಾಮ ಭವಿಷ್ಯೋಽಥ ಬಾರ್ಹದ್ರಥಃ ।**
**ತಸ್ಯಾಮಾತ್ಯಸ್ತು ಮುನಿಕೋ ಹತ್ವಾ ಸ್ವಾಮಿನಮಾತ್ಮಜಮ್ ॥ ೧ ॥**

ಬಾರ್ಹದ್ರಥಃ=ಬೃಹದ್ರಥನ ವಂಶದವನಾದ ಯಃ=ಯಾವ ರಿಪುಂಜಯಃ=ರಿಪುಂಜಯನು ಅಂತ್ಯಃ=ವಂಶದ ಕೊನೆಯವನು ಭವಿಷ್ಯಃ=ಆಗುವವನು (ಅಂದರೆ ಪುರುವಿಗೆ ಉಪರಿಚರವಸು ಅವನಿಗೆ ಬೃಹದ್ರಥ. ಅವನ ಮಗ ಜರಾಸಂಧ. ಅವನಿಗೆ ಸಹದೇವ ಮುಂತಾಗಿ ಮಧ್ಯದಲ್ಲಿ ೨೦ ಜನರಿದ್ದಾರೆ. ಕೊನೆಗೆ ೨೧ನೇಯವನು ರಿಪುಂಜಯ) ತಸ್ಯ=ರಿಪುಂಜಯನ ಅಮಾತ್ಯಃ=ಮಂತ್ರಿಯಾದ ಮುನಿಕಃ=ಮುನಿಕನೆಂಬುವನು ಸ್ವಾಮಿನಂ=ರಿಪುಂಜಯನನ್ನು ಹತ್ವಾ=ಸಂಹರಿಸಿ ಆತ್ಮಜಂ=ತನ್ನ ಮಗನಾದ

**ಪ್ರದ್ಯೋತಸಂಜ್ಞಂ ರಾಜಾನಂ ಕರ್ತಾ ಯತ್ಪಾಲಕಃ ಸುತಃ ।**
**ವಿಶಾಖಯೂಪಸ್ತತ್ಪುತ್ರೋ ಭವಿತಾ ಚಾಜಕಸ್ತತಃ ॥ ೨ ॥**

ಪ್ರದ್ಯೋತಸಂಜ್ಞಂ=ಪ್ರದ್ಯೋತನೆಂಬುವವನನ್ನು ರಾಜಾನಂ=ರಾಜನನ್ನಾಗಿ ಕರ್ತಾ=ಮಾಡುವನು. ಯಸ್ಯ=ಯಾವ ಪ್ರದ್ಯೋತನಿಗೆ ಪಾಲಕಃ=ಪಾಲಕನೆಂಬುವನು ಸುತಃ=ಮಗನು ತತ್ಪುತ್ರಃ=ಪಾಲಕಪುತ್ರನು ವಿಶಾಖಯೂಪಃ ಭವಿತಾ=ವಿಶಾಖಯೂಪನೆಂಬುವನು ಆಗುವನು ತತಃ=ವಿಶಾಖಯೂಪನಿಂದ ಅಜಕಃ=ಅಜಕನು

**ನಂದಿವರ್ಧಸ್ತು ತತ್ಪುತ್ರಃ ಪಂಚ ಪ್ರದ್ಯೋತನಾ ಇಮೇ ।**
**ಅಷ್ಟತ್ರಿಂಶೋತ್ತರಶತಂ ಭೋಕ್ಷ್ಯಂತಿ ಪೃಥಿವೀಮಿಮಾಮ್ ॥ ೩ ॥**

ನಂದಿವರ್ಧಃ=ನಂದಿವರ್ಧನು ತತ್ಪುತ್ರಃ=ಅಜಕನ ಮಗನು ಇಮೇ ಪಂಚ ಪ್ರದ್ಯೋತನಾಃ=ಪ್ರದ್ಯೋತನನ್ನು ಸೇರಿಸಿಕೊಂಡು ಈ ಐವರು ಅಷ್ಟತ್ರಿಂಶೋತ್ತರಶತಂ=

ಒಂದು ನೂರಾ ಮೂವತ್ತೆಂಟು ವರ್ಷದ ವರೆಗೆ ಇಮಾಂ ಪೃಥೀವೀಂ=ಈ ಭೂಮಿಯನ್ನು ಭೋಕ್ಷ್ಯಂತಿ=ಆಳುವರು.

**ಶಿಶುನಾಗಸ್ತತೋ ಭಾವ್ಯಃ ಕಾಕವರ್ಣಸ್ತು ತತ್ಸುತಃ ।**
**ಕ್ಷೇಮಧರ್ಮಾ ತಸ್ಯ ಸುತಃ ಕ್ಷೇತ್ರಜ್ಞಃ ಕ್ಷೇಮಧರ್ಮಜಃ ॥ ೪ ॥**

ತತಃ=ನಂದಿವರ್ಧನಿಂದ ಶಿಶುನಾಗಃ=ಶಿಶುನಾಗನು ಭಾವ್ಯಃ=ಹುಟ್ಟುವನು ತತ್ಸುತಃ ಶಿಶುನಾಗನ ಮಗನು ಕಾಕವರ್ಣಃ=ಕಾಕವರ್ಣನು ತಸ್ಯ=ಆ ಕಾಕವರ್ಣನಿಗೆ ಕ್ಷೇಮಧರ್ಮಾ=ಕ್ಷೇಮವೇ ಧರ್ಮವಾಗಿವುಳ್ಳ ಕ್ಷೇಮಧರ್ಮನು ತಸ್ಯ=ಕ್ಷೇಮಧರ್ಮನಿಗೆ ಕ್ಷೇತ್ರಜ್ಞಃ=ಕ್ಷೇತ್ರಜ್ಞನು ತಸ್ಯ=ಆ ಕ್ಷೇತ್ರಜ್ಞನಿಗೆ

**ವಿಧಿಸಾರಃ ಸುತಸ್ತಸ್ಯಾಜಾತಶತ್ರುರ್ಭವಿಷ್ಯತಿ ।**
**ದರ್ಭಕಸ್ತತ್ಸುತೋ ಭಾವೀ ದರ್ಭಕಸ್ಯಾಜಯಃ ಸ್ಮೃತಃ ॥ ೫ ॥**

ವಿಧಿಸಾರಃ=ವಿಧಿಸಾರನು ಸುತಃ=ಮಗನು ತಸ್ಯ=ವಿಧಿಸಾರನಿಗೆ ಅಜಾತಶತ್ರುಃ= ಅಜಾತಶತ್ರುವು ಭವಿಷ್ಯತಿ=ಮಗನು ಆಗುವನು. ತತ್ಸುತಃ=ಅಜಾತಶತೃವಿನ ಮಗನು ದರ್ಭಕಃ=ದರ್ಭಕನು ಭಾವ್ಯಃ=ಆಗುವನು. ದರ್ಭಕಸ್ಯ=ದರ್ಭಕನಿಗೆ ಅಜಯಃ=ಅಜಯನು ತತಃ=ಅಜಯನಿಂದ

**ನಂದಿವರ್ಧನ ಆಜೇಯೋ ಮಹಾನಂದಿಶ್ಚ ತತ್ಸುತಃ ।**
**ಶೈಶನಾಗಾದಶೈತೇ ವೈ ಷಷ್ಟ್ಯುತ್ತರಶತತ್ರಯಮ್ ॥ ೬ ॥**

ಆಜೇಯಃ=ಅಜೇಯನ ಮಗನು ನಂದಿವರ್ಧನಃ=ನಂದಿವರ್ಧನನು ತತ್ಸುತಃ= ನಂದಿವರ್ಧನನ ಮಗನು ಮಹಾನಂದಿಃ=ಮಹಾನಂದಿಯು ತತ್ಸುತಃ=ಮಹಾನಂದಿಯ ಮಗನು ಶೈಶನಾಗನು ಏತೇ ಶೈಶನಾಗಾಃ ದಶ=ಈ ಹತ್ತು ರಾಜರು ಶಿಶುನಾಗನ ಮಕ್ಕಳು. ಏತೇ=ಇವರು ಷಷ್ಟ್ಯುತ್ತರಶತತ್ರಯಂ ಸಮಾಃ=ಮೂನ್ನೂರಾ ಅರವತ್ತು ವರ್ಷದವರೆಗೆ ಪೃಥಿವೀಂ ಭೋಕ್ಷ್ಯಂತಿ=ಭೂಮಿಯನ್ನು ಆಳುವರು. ಎಂದು ಮುಂದಿನ ಶ್ಲೋಕದಿಂದ ಅನ್ವಯ.

**ಸಮಾ ಭೋಕ್ಷ್ಯಂತಿ ಪೃಥಿವೀಂ ಕುರುಶ್ರೇಷ್ಠ ಕಲೌ ನೃಪಾಃ ।**
**ಮಹಾನಂದಿಸುತೋ ರಾಜನ್ ಶೂದ್ರೀ(ಶೂದ್ರಾ)ಗರ್ಭೋದ್ಭವೋ ಬಲೀ ॥ ೭ ॥**

**ಮಹಾಪದ್ಮಾಪತಿಃ ಕಶ್ಚಿತ್ ಕುಲಕ್ಷತ್ರವಿನಾಶಕೃತ್ ।**
**ತತೋ ನೃಪಾ ಭವಿಷ್ಯಂತಿ ಶೂದ್ರಪ್ರಾಯಾಃ ಅಧಾರ್ಮಿಕಾಃ ॥ ೮ ॥**

ಕಲೌ=ಕಲಿಯುಗದಲ್ಲಿ ರಾಜನ್=ರಾಜನಾದ ಕುರುಶ್ರೇಷ್ಠ=ಪರೀಕ್ಷಿತನೇ ಮಹಾನಂದಿಸುತಃ=ಮಹಾನಂದಿಯ ಮಗನು ಶೂದ್ರೀಗರ್ಭೋದ್ಭವಃ=ಶೂದ್ರಸ್ತ್ರೀಯಲ್ಲಿ ಜನಿಸಿದವನು ಬಲೀ=ಬಲಿಷ್ಠನು ಮಹಾಪದ್ಮಪತಿಃ=ಮಹಾಪದ್ಮಸಂಖ್ಯೆಯುಳ್ಳ ಸೈನ್ಯಕ್ಕೆ ಒಡೆಯನು. ಕಶ್ಚಿತ್=ಒಬ್ಬನು ಕುಲಕ್ಷತ್ರವಿನಾಶಕೃತ್=ಕ್ಷತ್ರಕುಲನಾಶಮಾಡುವನು (ಅಂದರೆ ಮುಂದೆ ಕ್ಷತ್ರಿಯ ಕುಲ ಉಳಿಯಲಿಲ್ಲವೆಂದರ್ಥ ಮಹಾಪದ್ಮಾ ಎಂಬುವಳ ಗಂಡನೆಂದೂ ಎಂದು ಕೆಲವರು ಅರ್ಥ ಮಾಡುವರು.) ತತಃ=ಅನಂತರ ನೃಪಾಃ=ರಾಜರು ಶೂದ್ರಪ್ರಾಯಾಃ=ಶೂದ್ರಸದೃಶರು. ಅಧಾರ್ಮಿಕಾಃ=ಅಧಾರ್ಮಿಕರು ಭವಿಷ್ಯಂತಿ=ಆಗುವರು.

**ಸ ಏಕಛತ್ರಾಂ ಪೃಥಿವೀಮನುಲ್ಲಂಘಿತಶಾಸನಃ ।**
**ಶಾಸಿಷ್ಯತಿ ಮಹಾಪದ್ಮೋ ದ್ವಿತೀಯ ಇವ ಭಾರ್ಗವಃ ॥ ೯ ॥**

ಸಃ ಮಹಾಪದ್ಮಃ=ಆ ಮಹಾಪದ್ಮನೆಂದು ಹೆಸರುಳ್ಳ ನಂದನು ಏಕಛತ್ರಾಂ=ಒಂದೇ ಛತ್ರವುಳ್ಳ ಪೃಥಿವೀಂ=ಭೂಮಂಡಲವನ್ನು ಅನುಲ್ಲಂಘಿತಶಾಸನಃ=ಯಾರೂ ಮೀರದ ಶಾಸನವುಳ್ಳವನಾಗಿ ದ್ವಿತೀಯಃ ಭಾರ್ಗವಃ ಇವ=ಎರಡನೇಯ ಪರಶುರಾಮನಂತೆ ಶಾಸಿಷ್ಯತಿ=ಆಳುವನು.

**ತಸ್ಯ ಚಾಷ್ಟೌ ಭವಿಷ್ಯಂತಿ ಸುಮಾಲಿಪ್ರಮುಖಾಃ ಸುತಾಃ ।**
**ಯ ಇಮಾಂ ಪೃಥಿವೀಂ ರಾಜನ್ ಭೋಕ್ಷ್ಯಂತಿ ಸ್ಮ ಶತಂ ಸಮಾಃ ॥ ೧೦ ॥**

ರಾಜನ್=ರಾಜನೇ ಯಃ=ಯಾವನು ಇಮಾಂ ಪೃಥಿವೀಂ=ಈ ಭೂಮಿಯನ್ನು ಶತಂ ಸಮಾಃ=ನೂರು ವರ್ಷಗಳ ಕಾಲ ಭೋಕ್ಷ್ಯಂತಿ=ಆಳುವನೋ ತಸ್ಯ=ಆ ಮಹಾಪದ್ಮನಿಗೆ ಸುಮಾಲಿಪ್ರಮುಖಾಃ=ಸುಮಾಲಿ ಮುಂತಾದ ಅಷ್ಟೌ ಸುತಾಃ ಭವಿಷ್ಯಂತಿ=ಎಂಟು ಜನ ಮಕ್ಕಳು ಜನಿಸುವರು.

**ನವನಂದಾನ್ ದ್ವಿಜಃಕಶ್ಚಿತ್ ಪ್ರಪನ್ನಾನುದ್ಧರಿಷ್ಯತಿ ।**
**ತೇಷಾಮಭಾವೇ ಜಗತೀಂ ಮೌರ್ಯಾ ಭೋಕ್ಷ್ಯಂತಿ ವೈ ಕಲೌ ॥ ೧೧ ॥**

ಕಶ್ಚಿತ್ ದ್ವಿಜಃ=(ಕೌಟಿಲ್ಯ,ವಾತ್ಸ್ಯಾಯನ) ಚಾಣಕ್ಯ ಎಂಬ ಹೆಸರಿನ ಒಬ್ಬ ಬ್ರಾಹ್ಮಣನು ನವನಂದಾನ್=ನಂದನಿಂದ ಸಹಿತರಾದ (ನಂದನು ಸೇರಿ ಒಂಭತ್ತು ಜನರನ್ನು) ಮಹಾಪದ್ಮನೇ ನಂದ ಅವನ ಮಕ್ಕಳು ಸೇರಿ ಒಂಭತ್ತು ಪ್ರಪನ್ನಾನ್ ಅಪಿ=ವಿಶ್ವಸ್ಥರಾಗಿದ್ದರೂ ಉದ್ಧರಿಷ್ಯತಿ=ಉನ್ಮೂಲನಗೊಳಿಸುವನು. ನಂತರ ತೇಷಾಮಭಾವೇ=ನವನಂದರು

ಇಲ್ಲದಿರುವಾಗ ಮೌರ್ಯಾಃ=ಮೌರ್ಯಮೊದಲಾದವರು ಕಲೌ=ಕಲಿಯುಗದಲ್ಲಿ ಜಗತೀಂ=ಭೂಮಿಯನ್ನು ಭೋಕ್ಷ್ಯಂತಿ=ಆಳುವರು.

**ಸ ಏವ ಇಂದ್ರಗುಪ್ತಂ ವೈ ದ್ವಿಜೋ ರಾಜ್ಯೇಽಭಿಷೇಕ್ಷ್ಯತಿ ।**
**ತತ್ಸುತೋ ವಾರಿರಾಜಸ್ತು ತತಶ್ಚಾಶೋಕವರ್ಧನಃ ॥ ೧೨ ॥**

ಸ ಏವ ದ್ವಿಜಃ=ಆ ಚಾಣಕ್ಯನೇ ಇಂದ್ರಗುಪ್ತಂ=ಇಂದ್ರಗುಪ್ತನನ್ನು ರಾಜ್ಯೇ ಅಭಿಷೇಕ್ಷ್ಯತಿ=ರಾಜ್ಯದಲ್ಲಿ ಪಟ್ಟಾಭಿಷೇಕ ಮಾಡುವನು. ತತ್ಸುತಃ=ಇಂದ್ರಗುಪ್ತನ ಮಗನು ವಾರಿರಾಜಃ=ವಾರಿರಾಜನು ತತಃ=ವಾರಿರಾಜನಿಂದ ಅಶೋಕವರ್ಧನಃ=ಅಶೋಕವರ್ಧನನು

**ಸುಯಶಾ ಭವಿತಾ ತಸ್ಯ(ಯಸ್ಯ) ಸಂಗತಃ ಸುಯಶಸುತಃ ।**
**ಶಾಲಿಶೂಕಸ್ತತಸ್ತಸ್ಯ ಸೋಮಶರ್ಮಾ ಭವಿಷ್ಯತಿ ॥ ೧೩ ॥**

ತಸ್ಯ=ಆ ಶೋಕವರ್ಧನನಿಗೆ ಸುಯಶಾಃ=ಸುಯಶನು ಸುಯಶಸುತಃ=ಸುಯಶನ ಮಗನು ಸಂಗತನು ತತಃ=ಸಂಗತನಿಂದ ಶಾಲಿಶೂಕಃ=ಶಾಲಿಶೂಕನು ತಸ್ಯ= ಶಾಲಿಶೂಕನಿಗೆ ಸೋಮಶರ್ಮಾ=ಸೋಮಶರ್ಮನೆಂಬುವನು ಭವಿಷ್ಯತಿ=ಜನಿಸುವನು.

**ವಿಶೇಷ**-ಸೋಮ ಇತಿ ಶರ್ಮ ಯಸ್ಯ ಸಃ ಇತಿ ಸೋಮಶರ್ಮನೆಂಬ ಹೆಸರಿನವನು ಎಂದು ನಿರ್ಣಯಿಸಲು ನಾವೇನು ಅವನ ನಾಮಕರಣದ ಊಟಕ್ಕೆ ಹೋಗಿರಲಿಲ್ಲ. ಎನ್ನುವರು ಶ್ರೀಸತ್ಯಧರ್ಮತೀರ್ಥರು. ಅಂದರೆ ಬ್ರಾಹ್ಮಣಕ್ಷತ್ರಿಯರ ಹೆಸರುಗಳಿಗೆ ಶರ್ಮ ವರ್ಮ ಎಂಬ ಹೆಸರುಗಳನ್ನು ಜೋಡಿಸಿ ನಾಮಕರಣ ಮಾಡಬಹುದು. ಕ್ಷೇಮಧರ್ಮಾ ಎಂಬಲ್ಲಿ 'ಧರ್ಮಾದನಿಚ್ ಕೇವಲಾತ್' ಎಂಬ ಆಧಾರವಿದೆ ಇಲ್ಲಿ ಹಾಗಿಲ್ಲ ಎಂದು ಭಾವ.

**ಶತಧನ್ವಾ ತತಸ್ತಸ್ಯ ಭವಿತಾ ತು ಬೃಹದ್ರಥಃ ।**
**ಮೌರ್ಯಾ ಹ್ಯೇತೇ ನವ ನೃಪಾಃ ಸಪ್ತಸ್ತ್ರಿಂಶಚ್ಛತೋತ್ತರಮ್ ॥ ೧೪ ॥**

**ಸಮಾ ಭೋಕ್ಷ್ಯಂತಿ ಪೃಥಿವೀಂ ಕಲೌ ತು ಕುರುಕುಲೋದ್ವಹ ।**
**ಹತ್ವಾ ಬೃಹದ್ರಥಂ ಮೌರ್ಯಂ ತಸ್ಯ ಸೇನಾಪತಿಃ ಕಲೌ ॥ ೧೫ ॥**

**ಪುಷ್ಯಮಿತ್ರಸ್ತು ಶುಂಗಾಹ್ವಃ ಸ್ವಯಂ ರಾಜ್ಯಂ ಕರಿಷ್ಯತಿ ।**
**ಅಗ್ನಿಮಿತ್ರಸ್ತತಸ್ತಸ್ಮಾತ್ ಸುಜ್ಯೇಷ್ಠೋ ಭವಿತಾ ತತಃ ॥ ೧೬ ॥**

ತತಃ=ಸೋಮಶರ್ಮನಿಂದ ಶತಧನ್ವಾ=ಶತಧನ್ವನು ತಸ್ಯ=ಶತಧನ್ವನಿಗೆ ಬೃಹದ್ರಥಃ ಭವಿತಾ=ಬೃಹದ್ರಥನು ಮಗನಾಗುವನು ಏತೇ ಮೌರ್ಯಾಃ=ಮೌರ್ಯನಿಂದ ಹಿಡಿದು ಬೃಹದ್ರಥನ ವರೆಗೆ ಇರುವ ನವ ನೃಪಾಃ=ಒಂಭತ್ತು ಜನ ರಾಜರು ಸಪ್ತತ್ರಿಂಶೋತ್ತರಂ ಸಮಾಃ=ಒಂದು ನೂರಾ ಮೂವತ್ತೇಳು ವರ್ಷಗಳವರೆಗೆ ಕಲೌ=ಕಲಿಯುಗದಲ್ಲಿ ಪೃಥಿವೀಂ ಭೋಕ್ಷ್ಯಂತಿ=ರಾಜ್ಯಭಾರ ಮಾಡುವರು. ಕುರುಕುಲೋದ್ವಹ=ಕುರುಕುಲಕ್ಕೆ ಹಿರಿಯನಾದ ರಾಜನೇ ತಸ್ಯ=ಬೃಹದ್ರಥನ ಸೇನಾಪತಿಃ=ಸೇನಾನಾಯಕನಾದ ಶುಂಗಾಹ್ವಃ =ಶುಂಗವೆಂಬ ಕುಲದ ನಾಮವುಳ್ಳ ಪುಷ್ಯಮಿತ್ರಃ=ಪುಷ್ಯಮಿತ್ರನು ಸ್ವಯಂ=ತಾನೇ ರಾಜ್ಯಂ ಕರಿಷ್ಯತಿ=ರಾಜ್ಯವನ್ನು ನಡೆಸುವನು ತತಃ=ಪುಷ್ಯಮಿತ್ರನಿಂದ ಅಗ್ನಿಮಿತ್ರಃ=ಅಗ್ನಿಮಿತ್ರನು ತತಃ=ಅಗ್ನಿಮಿತ್ರನಿಂದ ಸುಧೇಷ್ಠಃ=ಸುಧೇಷ್ಠನು ಸುತಃ ಭವಿತಾ=ಮಗನಾಗುವನು.

**ವಿಶೇಷ-** ಪುಷ್ಯಮಿತ್ರನಿಗೆ ಶುಂಗವೆಂಬ ಹೆಸರು ರಾಜನಾದಾಗ ಇದ್ದದ್ದು. ನಂತರ ಪುಷ್ಯಮಿತ್ರ ಎಂಬ ಹೆಸರಿನಿಂದ ವಿಖ್ಯಾತನಾದನು. ಈ ವಿಶೇಷ ತಿಳಿಸಲು ತು ಶಬ್ದವಿದೆ ಎಂದು ಕೆಲವರು ಹೇಳುವರು. ಪುಷ್ಯಮಿತ್ರ ಎಂಬುದು ಕುಲನಾಮ ಶುಂಗವೆಂಬುದೇ ಅವನ ವಿಶೇಷ ಹೆಸರು ಎಂದು ಇನ್ನು ಕೆಲವರು (ವಿಜಯಧ್ವಜರು) ಆದರೆ 'ಶುಂಗಾ ದಶೈತೇ' ಎಂದು ಮುಂದೆ ಹೇಳುವದರಿಂದ ಶುಂಗವೆಂಬುದೇ ಕುಲದ ಹೆಸರು ಪುಷ್ಪಮಿತ್ರವೆಂಬುದೇ ಇವನ ಹೆಸರು ಎಂದು ತಿಳಿಯುತ್ತದೆ. ಹಿಂದೆಲ್ಲ ಹಾಗೆ ಹೇಳುತ್ತ ಬಂದಿರುವರು ಎನ್ನುತ್ತಾರೆ ಶ್ರೀಸತ್ಯಧರ್ಮತೀರ್ಥರು.

**ವಸುಮಿತ್ರೋ ಭದ್ರಕಶ್ಚ ಪುಲಿಂದೋ ಭವಿತಾ ತತಃ ।**
**ತತೋ ಘೋಷಃ ಸುತಸ್ತಸ್ಮಾತ್ ವಜ್ರಮಿತ್ರೋ ಭವಿಷ್ಯತಿ ॥ ೧೭ ॥**

ತತಃ=ಸುಧೇಷ್ಠನಿಂದ ವಸುಮಿತ್ರಃ=ವಸುಮಿತ್ರನು ಚ=ಮತ್ತು ಭದ್ರಕಃ=ಭದ್ರಕನು ಭವಿತಾ=ಜನಿಸುವನು ಪುಲಿಂದಃ ಚ=ಪುಲಿಂದನು ಭವಿತಾ=ಜನಿಸುವನು. ತತಃ= ಪುಲಿಂದನಿಂದ ಘೋಷಃ=ಘೋಷ ಎಂಬ ಸುತಃ=ಮಗನು ಭವಿತಾ=ಜನಿಸುವನು ತಸ್ಮಾತ್=ಘೋಷನಿಂದ ವಜ್ರಮಿತ್ರಃ=ವಜ್ರಮಿತ್ರನು ಭವಿಷ್ಯತಿ=ಜನಿಸುವನು.

**ತತೋ ಭಾಗವತಸ್ತಸ್ಮಾತ್ ದೇವಹೂತಿಃ(ದೇವಭೂತಿಃ)ಕುರೂದ್ವಹ ।**
**ಶುಂಗಾ ದಶೈತೇ ಭೋಕ್ಷ್ಯಂತಿ ಭೂಮಿಂ ವರ್ಷಶತಾಧಿಕಮ್ ॥ ೧೮ ॥**

ತತಃ=ವಜ್ರಮಿತ್ರನಿಂದ ಭಾಗವತಃ=ಭಾಗವತನೆಂಬುವನು ತಸ್ಮಾತ್=ಭಾಗವತನಿಂದ ದೇವಹೂತಿಃ=ದೇವಹೂತಿಯು ಜನಿಸುವನು ದಶ ಏತೇ ಶುಂಗಾಃ=ಶುಂಗವಂಶದ ಈ

ಹತ್ತುಜನ ವರ್ಷಶತಾಧಿಕರ್ಮ್=ನೂರು ವರ್ಷದ ಮೇಲೆ ಕೆಲವು ಕಾಲ ಭೂಮಿಂ ಭೋಕ್ಷ್ಯಂತಿ=ಭೂಮಿಯನ್ನಾಳುವರು.

**ತತಃ ಕಾಣ್ವಾನಿಯಂ ಭೂಮಿರ್ಯಾಸ್ಯತ್ಯಲ್ಪಗುಣಾ(ನ್)ನೃಪಾನ್ ।**
**ಶುಂಗಂ ಹತ್ವಾ ದೇವಹೂತಿಂ (ಭೂತಿಂ) ಕಣ್ವೋಽಮಾತ್ಯಸ್ತು ಕಾಮಿನಮ್ ॥ ೧೯ ॥**

ತತಃ=ದೇವಹೂತಿಯ ನಂತರ ಕಣ್ವಾನ್=ಕಣ್ವನೇ ಮೂಲವಾಗಿಯುಳ್ಳವರಾದ್ದರಿಂದ ಕಾಣ್ವರೆಂದು ಕರಿಸಿಕೊಳ್ಳುವ ಅಲ್ಪಗುಣಾನ್=ಅಲ್ಪಗುಣಗಳುಳ್ಳ ಅರ್ಥಾತ್=ದೋಷ-ಬಹುಲರಾದ ನೃಪಾನ್=ರಾಜರನ್ನು ಇಯಂ ಭೂಮಿಃ=ಈ ಭೂಮಿಯು ಯಾಸ್ಯತಿ=ಹೋಗುವಳು ಅವರ ವಶ ಆಗುವದೆಂದರ್ಥ ಅಲ್ಪಗುಣಾ ಎಂಬ ಪಾಠದಲ್ಲಿ ಭೂಮಿಗೆ ವಿಶೇಷಣ ಔಷಧಿವನಸ್ಪತಿಮುಂತಾದ ಗುಣರಹಿತಳಾದ ಎಂದರ್ಥ. ಕಾಣ್ವರ ವಶವಾಗಲು ಕಾರಣ ಹೇಳುವರು. ಅಮಾತ್ಯಃ ಕಣ್ವಃ=ದೇವಭೂತಿಯ ಮಂತ್ರಿಯಾದ ಕಣ್ವನು ಕಾಮಿನಂ=ಕಾಮಿಯಾದ ಶುಂಗಂ=ಶುಗವಂಶದಲ್ಲಿ ಜನಿಸಿದ ಕೊನೆಯವನಾದ ದೇವಹೂತಿಂ=ದೇವಭೂತಿಯನ್ನು ಹತ್ವಾ=ಕೊಂದು

**ಸ್ವಯಂ ಕರಿಷ್ಯತೇ ರಾಜ್ಯಂ ವಸುದೇವೋ [೧]ಮಹೀಪತಿಃ ।**
**ತಸ್ಯ ಪುತ್ರಸ್ತು ಭೂಮಿತ್ರಸ್ತತೋ ನಾರಾಯಣಃ ಸುತಃ ॥ ೨೦ ॥**

ಸ್ವಯಂ=ತಾನು ರಾಜ್ಯಂ=ರಾಜ್ಯಪಾಲನೆಯನ್ನು ಕರಿಷ್ಯತಿ=ಮಾಡುವನು.ತಸ್ಯ=ಆ ಕಣ್ವನ ಪುತ್ರಃ=ಮಗನು ವಸುದೇವಃ=ವಸುದೇವನು ಮಹೀಪತಿಃ=ರಾಜನು (ಮಹಾಮತಿಃ ಎಂಬ ಪಾಠದಲ್ಲಿ ಬುದ್ಧಿಶಾಲಿ ಎಂದರ್ಥ) ತಸ್ಯ=ವಸುದೇವನಿಗೆ ಭೂಮಿತ್ರಃ=ಭೂಮಿತ್ರನು ತತಃ=ಭೂಮಿತ್ರನಿಗೆ ನಾರಾಯಣಃ ಸುತಃ=ನಾರಾಯಣನು ಮಗನು.

**ಸುಶರ್ಮಾಖ್ಯೋಽಸ್ಯ ನೃಪತಿಃ ಕಣ್ವಾನಾಂ ಭವಿತಾ ತತಃ ।**
**ಕಾಣ್ವಾಯನಾ ಇಮೇ ಭೂಮಿಂ ಚತ್ವಾರಿಂಶಚ್ಚ ಪಂಚ ಚ ॥ ೨೧ ॥**

**ಶತಾನಿ ತ್ರೀಣಿ ಭೋಕ್ಷ್ಯಂತಿ ವರ್ಷಾಣಾಂ ಚ ಕಲೌ ಯುಗೇ ।**
**ಹತ್ವಾ ಕಣ್ವಂ ಸುಶರ್ಮಾಣಂ ತದ್ಭೃತ್ಯೋ ವೃಷಲೋ ಬಲೀ ॥ ೨೨ ॥**

ಕಣ್ವಾನಾಂ ಮಧ್ಯೇ=ಕಣ್ವರಲ್ಲಿ ಅಸ್ಯ=ಈ ನಾರಾಯಣನಿಗೆ ಸುಶರ್ಮಾಖ್ಯಃ=ಸುಶರ್ಮನೆಂಬ ನೃಪತಿಃ=ರಾಜನು ಭವಿತಾ=ಆಗುವನು ಇಮೇ ಕಾಣ್ವಾಯನಾಃ=ಈ ಕಣ್ವವಂಶದಲ್ಲಿ ಜನಿಸಿದವರು ಭೂಮಿಂ=ಭೂಮಿಯನ್ನು ಶತಾನಿ ತ್ರೀಣಿ=ಮೂರುನೂರು

---

೧. ಮಹಾಮತಿಃ ಪಾಠ.

ಚತ್ವಾರಿಂಶತ್=ನಲವತ್ತೈದು ಪಂಚ ಚ=ಮೇಲ್ಯೆದು ವರ್ಷಗಳ ಕಾಲ ಭೋಕ್ಷ್ಯಂತಿ= ಪಾಲಿಸಿದರು. ಇದು ವಿಜಯಧ್ವಜರ ಅಭಿಪ್ರಾಯ.(ಸತ್ಯಧರ್ಮರ ಪ್ರಕಾರ ಮುನ್ನೂರು ವರ್ಷದ ಮೇಲೆ ನಲವತ್ತೈದು ದಿನಗಳು) ತದ್ಭೃತ್ಯಃ ವೃಷಲಃ=ಸುಶರ್ಮನ ಭಟನಾದ ಬಲೀ=ಬಲಿಷ್ಠನು ಕಣ್ವಂ=ಕಣ್ವವಂಶದ ಸುಶರ್ಮಾಣಂ=ಸುಶರ್ಮನನ್ನು ಹತ್ವಾ=ಸಂಹರಿಸಿ

**ಗಾಂ ಭೋಕ್ಷ್ಯಂತ್ಯಂಧ್ರಜಾತೀಯಃ ಕಂಚಿತ್ಕಾಲಮಸತ್ತಮಃ ।**
**ಕೃಷ್ಣನಾಮಾ ಚ ತದ್ಭ್ರಾತಾ ಭವಿತಾ ಪೃಥಿವೀಪತಿಃ ॥ ೨೩ ॥**

ಅಸತ್ತಮಃ=ಅತಿದುಷ್ಟನಾದ ಅಂಧ್ರಜಾತೀಯಃ=ಆಂಧ್ರಜಾತಿಯಲ್ಲಿ ಜನಿಸಿದವನು ಕಿಂಚಿತ್ಕಾಲಂ=ಕೆಲವೇ ಕಾಲ ಗಾಂ ಭೋಕ್ಷ್ಯತಿ=ಭೂಮಿಯನ್ನು ಆಳುವನು ತದ್ಭ್ರಾತಾ= ಅವನ ತಮ್ಮನಾದ ಕೃಷ್ಣನಾಮಾ=ಕೃಷ್ಣನೆಂಬುವನು ಪೃಥಿವೀಪತಿಃ ಭವಿತಾ= ರಾಜನಾಗುವನು.

**ವಿಶೇಷ-** ಅತಿದುಷ್ಟನಾದುದರಿಂದಲೇ ವೃಷಲನಿಗೆ ಆಯುಷ್ಯಕ್ಷೀಣವಾಯಿತು. ಎಂದು ತಿಳಿಯಬೇಕು.

**ಶ್ರೀಶಾಂತಕರ್ಣಸ್ತತ್ಪುತ್ರಃ ಪೌರ್ಣಮಾಸಸ್ತು ತತ್ಸುತಃ ।**
**ಲಂಬೋದರಸ್ತು ತತ್ಪುತ್ರಸ್ತಸ್ಮಾಚ್ಚಿಬಿಲಿಕೋ ನೃಪ ॥ ೨೪ ॥**

**ಮೇಘಸ್ವನಃ ಶಿಬಿಲಕಾದಟಮಾನಸ್ತು ತಸ್ಯ ಚ ।**
**ಅನಿಷ್ಟಕರ್ಮಾ ಹಾಲೇಯಸ್ತಲಕಸ್ತಸ್ಯ ಚಾತ್ಮಜಃ ॥ ೨೫ ॥**

ತತ್ಪುತ್ರಃ=ಕೃಷ್ಣನ ಮಗನು ಶ್ರೀಶಾಂತಕರ್ಣಃ=ಶ್ರೀಶಾಂತಕರ್ಣನು ತತ್ಸುತಃ= ಶ್ರೀಶಾಂತನ ಮಗನು ಪೌರ್ಣಮಾಸಃ=ಪೌರ್ಣಮಾಸನು ತತ್ಸುತಃ=ಪೌರ್ಣಮಾಸನ ಮಗನು ಲಂಬೋದರಃ=ಲಂಬೋದರನು ತಸ್ಮಾತ್=ಲಂಬೋದರನಿಂದ ಶಿಬಿಲಿಕಃ= ಶಿಬಿಲಿಕನು ಶಿಬಿಲಿಕಾತ್=ಶಿಬಿಲಿಕನಿಂದ ಮೇಘಸ್ವನನಿಗೆ ಅಟಮಾನಃ= ಅಟಮಾನನು ತಸ್ಯ=ಅವನಿಗೆ ಅನಿಷ್ಟಕರ್ಮಾ=ಅನಿಷ್ಟಕರ್ಮನು ಅವನಿಗೆ ಹಾಲೇಯಃ= ಹಾಲೇಯನು ತಸ್ಯ=ಹಾಲೇಯನಿಗೆ ತಲಕಃ=ತಲಕನು ಆತ್ಮಜಃ=ಮಗನು

**ಪುರೀಷಸೇರುಸ್ತತ್ಪುತ್ರಸ್ತತೋ ರಾಜಾ ಸುನಂದನಃ ।**
**ಚಕೋರೋ ದೃಢಕೋ ಯಸ್ಯ ಶಿವಸ್ವಾತಿರರಿಂದಮಃ ॥ ೨೬ ॥**

ತತ್ಪುತ್ರಃ=ತಲಂಕನ ಮಗನು ಪುರೀಷಸೇರುಃ=ಪುರೀಷಸೇರುವು ತತಃ=ಪುರೀಷ- ಸೇರುವಿನಿಂದ ಸುನಂದನಃ ರಾಜಾ=ಸುನಂದನರಾಜನು ತತಃ=ಸುನಂದನನಿಗೆ ದೃಢಕಃ=

ದೃಢಕನು ಅವನಿಗೆ ಚಕೋರಃ=ಚಕೋರನು ಚಕೋರನಿಗೆ ಅರಿಂದಮಃ=ಶತ್ರುನಾಶಕನಾದ ವಿವಸ್ವಾತಿಃ=ವಿವಸ್ವಾತಿಯು

**ತಸ್ಯಾಪಿ ಗೋಮತೀಪುತ್ರಃ ಪುರೀಮಾನ್ ಭವಿತಾ ತತಃ ।**
**ಶಿವಶಿರಾಃ (ಶಾತಕರ್ಣಿಃ) ಶಿವಸ್ಕಂಧೋ ಯಜ್ಞಶ್ರೀಸ್ತತ್ಸುತಸ್ತತಃ ॥ ೨೭ ॥**

ತಸ್ಯ=ವಿವಸ್ವಾತಿಗೆ ಗೋಮತೀಪುತ್ರಃ=ಗೋಮತಿ ಎಂಬ ವಿವಸ್ವಾತಿಯ ಹೆಂಡತಿಯ ಮಗನು ಪುರೀಮಾನ್=ಪುರೀಮಾನ್ ಎಂಬುವನು ಭವಿತಾ=ಆಗುವನು ತತಃ ಪುರೀಮಾನನಿಂದ ಶಿವಶಿರಾಃ=ಶಿವಶಿರನು ಶಿವಶಿರನಿಗೆ ಶಿವಸ್ಕಂಧಃ=ಶಿವಸ್ಕಂಧನು ತತ್ಸುತಃ=ಶಿವಸ್ಕಂಧನ ಮಗನು ಯಜ್ಞಶ್ರೀಃ=ಯಜ್ಞಶ್ರೀ ಎಂಬುವನು

**ವಿಜಯಸ್ತತ್ಸುತೋ ಭಾವ್ಯಶ್ಚಂದ್ರಬೀಜಃ ಸುಲೋಮಧೀಃ ।**
**ಏತೇ ತ್ರಿಂಶನ್ನೃಪತಯಃ ಚತ್ವಾರ್ಯಬ್ದ(ಷ್ಟ)ಶತಾನಿ ಚ ॥ ೨೮ ॥**

**ಷಟ್‌ಪಂಚಾಶಚ್ಚ ಪೃಥೀವೀಂ ಭೋಕ್ಷ್ಯಂತಿ ಕುರುನಂದನ ।**

ಯಜ್ಞಶ್ರೀಗೆ ವಿಜಯಃ=ವಿಜಯನು ತತ್ಸುತಃ=ಅವನ ಮಗನು ಚಂದ್ರಬೀಜಃ ಭಾವ್ಯಃ=ಚಂದ್ರಬೀಜನಾಗುವನು. ಚಂದ್ರಬೀಜನಿಗೆ ಸುಲೋಮೇಯಃ=ಸುಲೋಮೇಯನು ಏತೇ=ಈ ತ್ರಿಂಶತ್=ಮೂವತ್ತು ನೃಪತಯಃ=ರಾಜರು ಚತ್ವಾರ್ಯಬ್ದಶತಾನಿ= ನಾಲ್ಕುನೂರು ಷಟ್‌ಪಂಚಾಶಚ್ಚ=ಮೇಲೆ ಐವತ್ತಾರು ವರ್ಷಗಳ ಕಾಲ ಪೃಥೀವೀಂ ಭೋಕ್ಷ್ಯಂತಿ=ಪೃಥ್ವಿಯನ್ನಾಳುವರು.

**ಸಪ್ತಾಭೀರಾ ಆಂದ್ರಭೃತ್ಯಾ ದಶಗರ್ದಭಿನೋ ನೃಪಾಃ ।**
**ಕಂಕಾ ಷೋಡಶ ಭೂಪಾಲಾ ಭವಿಷ್ಯಂತ್ಯತಿಲೋಲುಪಾಃ ॥ ೨೯ ॥**

ಆಂದ್ರಭೃತ್ಯಾಃ ಆಭೀರಾಃ ಸಪ್ತ=ಆಂಧ್ರರ ಸೇವಕರಾದ ಏಳು ಜನ ಗೊಲ್ಲರು ದಶ=ಹತ್ತು ಜನ ಗರ್ದಭಿನಃ=ಗರ್ದಭ ಎಂಬ ವಂಶಕ್ಕೆ ಸೇರಿದವರು ಕಂಕಾಃ=ಕಂಕರು ಷೋಡಶ=ಹದಿನಾರು ಏತೇ ನೃಪಾಃ=ಈ ಎಲ್ಲ ರಾಜರು ಅತಿಲೋಲುಪಾಃ=ಬಹಳ ಕಾಮುಕರು ಭವಿಷ್ಯಂತಿ=ಆಗುವರು.

**ತತೋಽಷ್ಟೌ ಯವನಾ ಭಾವ್ಯಾಶ್ಚತುರ್ದಶ ತುರುಷ್ಕರಾಃ ।**
**ತ್ರಯೋದಶ [1]ಪುರುಂಡಾಶ್ಚ ಮೌನಾ ಏಕಾದಶೈವ ತು ॥ ೩೦ ॥**

೧. ತುರುಂಡಾಶ್ಚ

**ಏತೇ ಭೋಕ್ಷ್ಯಂತಿ ಪೃಥಿವೀಂ ದಶ ವರ್ಷಶತಾನಿ ಚ ।**
**ನವಾಧಿಕಾಂ ಚ ನವತಿಂ ಮೌನಾ ಏಕಾದಶಕ್ಷಿತಿಮ್ ॥ ೩೧ ॥**

ತತಃ=ಕಂಕರ ನಂತರ ಯವನಾಃ ಅಷ್ಟೌ ಭಾವ್ಯಾಃ=ಯವನರು ಎಂಟು ಜನರಾಗುವರು. ತುರುಷ್ಕರಾಃ ಚತುರ್ದಶ=ತುರುಕರು ಹದಿನಾಲ್ಕು ಜನ ಪುರುಂಡಾಃ=ಪುರುಂಡರು ತ್ರಯೋದಶ ಹದಿಮೂರು ಮೌನಾಃ=ಮೌನರು ಏಕಾದಶ ಹನ್ನೊಂದು ಜನ ಏತೇ= ಇವರು ದಶ ವರ್ಷಶತಾನಿ ನವಾಧಿಕಂ ಚ ನವತಿಂ=ಒಂದುಸಾವಿರದ ತೊಂಭತ್ತೊಂಭತ್ತು ವರ್ಷಗಳು ಆಭೀರರಿಂದ ಹಿಡಿದು ಮೌನಿಗಳ ವರೆಗಿನ ಅರವತ್ತೈದು ಜನರು ಪೃಥಿವೀಂ ಭೋಕ್ಷ್ಯಂತಿ=ರಾಜ್ಯವಾಳುವರು ಏಕಾದಶ=ಹನ್ನೊಂದು ಜನ ಮೌನಾಃ=ಮೌನಕುಲದವರು ಕ್ಷಿತಿಂ=ಭೂಮಿಯನ್ನು

**ಭೋಕ್ಷ್ಯಂತ್ಯಬ್ದಶತಾನ್ಯಂಗ ತ್ರೀಣಿ ವೈ ಸಂಸ್ಥಿತೇ ಕುಲೇ ।**
**ಕಿಲಕಿಲಾಯಾಂ ನೃಪತಯೋ ಭೂತವಂಶೋಪವಂಗರ್ಯೈಃ ॥ ೩೨ ॥**

ಅಬ್ದಶತಾನಿ ತ್ರೀಣಿ=ಮೂರು ನೂರು ವರ್ಷ ಭೋಕ್ಷ್ಯಂತಿ=ಅನುಭವಿಸುವರು ಕುಲೇ=ಮನುಕುಲವು ಸಂಸ್ಥಿತೇ ಸತಿ=ನಾಶವಾಗುತ್ತಿರಲು ಕಿಲಕಿಲಾಯಾಂ=ಕಿಲಕಿಲ ಎಂಬ ನಗರದಲ್ಲಿ ಭೂತವಂಶೋಪವಂಗರ್ಯೈಃ=ಭೂತವಂಶ ಎಂಬ ಹೆಸರಿನ ಕೆಲವರಿಂದ ಕೂಡಿಕೊಂಡು

**ಶಿಶುನಂದಿಶ್ಚ ತದ್ಭ್ರಾತಾ ಯಶೋ ನಂದಿಃ ಪ್ರವೀರಕಃ ।**
**ಯುಕ್ತಾ ಏವಂ ವರ್ಷಶತಂ ಭವಿಷ್ಯನ್ತ್ಯಧಿಕಾನಿ ಷಟ್ ॥ ೩೩ ॥**

ಶಿಶುನಂದಿಃ=ಶಿಶುನಂದಿಯು ತದ್ಭ್ರಾತಾ=ಅವನ ತಮ್ಮನಾದ ಯಶೋ ನಂದಿಃ ಪ್ರವೀರಕಃ=ಯಶೋ, ನಂದೀ, ಪ್ರವೀರಕ ಎಂಬ ಏತೇ=ಈ ಮೂವರು ಯುಕ್ತಾಃ=ಸೇರಿ ಷಡಧಿಕವರ್ಷಶತಂ ಭವಿಷ್ಯತಿ=ಒಂದು ನೂರಾ ಆರು ವರ್ಷ ರಾಜರಾಗುವರು.

**ತೇಷಾಂ ತ್ರಯೋದಶ ಸುತಾಃ ಭವಿತಾರೋಽಥ ಬಾಲಿಕಾಃ ।**
**ಪುಷ್ಯ(ಷ್ಪ)ಮಿತ್ರೋಽಥ ರಾಜನ್ಯೋ ದುರ್ಮಿತ್ರೋಽಸ್ಯ ತಥೈವ ಚ ॥ ೩೪ ॥**

ಅಥ=ನಂತರ ತೇಷಾಂ=ಶಿಶುನಂದಾದಿಗಳಿಗೆ ತ್ರಯೋದಶ ಸುತಾಃ=ಹದಿಮೂರು ಜನಮಕ್ಕಳು ಬಾಲ್ಹಿಕಾಃ=ಬಾಲ್ಹಿಕದೇಶದಲ್ಲಿ ಜನಿಸಿದವರು ಭವಿತಾರಃ=ಆಗುವರು ಅಥ=ನಂತರ ಪುಷ್ಯಮಿತ್ರಃ=ಪುಷ್ಯಮಿತ್ರನು ಅಸ್ಯ=ಇವನಿಗೆ ರಾಜನ್ಯಃ=ಕ್ಷತ್ರಿಯನಾದ ದುರ್ಮಿತ್ರಃ=ದುರ್ಮಿತ್ರನು ಜನಿಸುವನು.

**ಏಕಕಾಲಾ ಇಮೇ ಭೂಪಾಃ ಸಪ್ತಾಂಧ್ರಾಃ ಸಪ್ತಕೋಸಲಾಃ ।**
**ವೈದೂರಪತಯೋ ಭಾವ್ಯಾಃ ನೈಷಧಾಸ್ತತ ಏವ ಹಿ ॥ ೩೫ ॥**

ಆಂಧ್ರಾಃ ಸಪ್ತ=ಆಂಧ್ರದೇಶದ ಏಳು ಜನ ರಾಜರು ಸಪ್ತಕೋಸಲಾಃ=ಏಳು ಕೋಸಲಾಧಿಪತಿಗಳು ವೈದೂರಪತಯಃ=ವೈದೂರನಗರದ ಅಧಿಪತಿಗಳು ಇಮೇ ಭೂತಾಃ=ಈ ಎಲ್ಲ ರಾಜರುಗಳು ಏಕಕಾಲಾಃ=ಸಮಾನಕಾಲದಲ್ಲಿ ಆ ದೇಶದ ಹೆಸರಿನಿಂದ ಪ್ರಸಿದ್ಧರು ಭಾವ್ಯಾಃ=ಆಗುವರು. ತತಃ=ನಂತರ ನೈಷಧಾಃ=ನಿಷೇಧದೇಶದ ರಾಜರು ಬರುವರು.

**ನೈಷಧಾನಾಂ ತು ಭವಿತಾ ವಿಶ್ವಸ್ಫೂರ್ಜಿಃ ಪುರಂಜಯಃ ।**
**ಕರಿಷ್ಯತ್ಯವರಾನ್ ವರ್ಣಾನ್ ಪುಲಿಂದಯದುಮದ್ರಕಾನ್ ॥ ೩೬ ॥**

ನೈಷಧಾನಾಂ ತು=ನಿಷೇಧದೇಶದ ರಾಜನು ಪುರಂಜಯಃ=ಶತ್ರುಗಳ ಪುರಗಳನ್ನು ಜಯಿಸುವವನು ವಿಶ್ವಸ್ಫೂರ್ಜಿಃ=ಈ ಹೆಸರಿನವನು ಪುಲಿಂದಯದುಮದ್ರಕಾನ್=ಈ ಹೆಸರಿನ ಅವರಾನ್ ವರ್ಣಾನ್=ಕೀಳುಜಾತಿಗಳನ್ನು ಕರಿಷ್ಯತಿ=ನಿರ್ಮಿಸುವನು.

**ಪ್ರಜಾಶ್ಚ ಬ್ರಹ್ಮಭೂಯಿಷ್ಠಾಃ ಸ್ಥಾಪಯಿಷ್ಯತಿ ದುರ್ಮತಿಃ ।**
**ವೀರ್ಯವಾನ್ ಕ್ಷತ್ರಮುತ್ಸಾದ್ಯ ಪದ್ಮವತ್ಯಾಂ ಸ ವೈ ಪುರಿ ॥ ೩೭ ॥**

ದುರ್ಮತಿಃ=ದುಷ್ಟಬುದ್ಧಿಯುಳ್ಳ ಇವನು ಪ್ರಜಾಃ=ಪ್ರಜೆಗಳನ್ನು ಆಬ್ರಹ್ಮಭೂಯಿಷ್ಠಾಃ= ವೇದ ಹಾಗು ಭಗವಂತನಲ್ಲಿ ನಿಷ್ಠೆಯಿಲ್ಲದಿರುವವರನ್ನು ಸ್ಥಾಪಯಿಷ್ಯತಿ=ಶಾಸನಮಾಡಿ ದುರ್ಮಾರ್ಗದಲ್ಲಿವವರನ್ನಾಗಿ ಮಾಡುವನು. ವೀರ್ಯವಾನ್=ಸ್ವಯಂ ಸಮರ್ಥನಾದ ಇವನು ಕ್ಷೇತ್ರಂ ಉತ್ಸಾದ್ಯ=ಕ್ಷತ್ರಿಯ ಜಾತಿಯನ್ನೇ ನಾಶಮಾಡಿ ಪದ್ಮವತ್ಯಾಂ ಅಪಿ= ಪದ್ಮಾವತಿ ಎಂಬ ಪಟ್ಟಣದಲ್ಲಿ

**ಅನುಗಂಗಮಾಪ್ರಯಾಗಂ ಗುಪ್ತಾಂ ಭೋಕ್ಷ್ಯತಿ ಮೇದಿನೀಮ್ ।**
**ಸೌರಾಷ್ಟ್ರಾವಂತ್ಯಾಭೀರಾಶ್ಚ ಶೂದ್ರಾಶ್ಚಾರ್ಬುದಮಾಲವಾಃ ॥ ೩೮ ॥**

ಅನುಗಂಗಂ=ಗಂಗಾನದಿಯ ಸಮೀಪದಲ್ಲಿ ಅಥವಾ ಗಂಗಾದ್ವಾರವನ್ನಾರಂಭಿಸಿ ಆ ಪ್ರಯಾಗಂ=ಪ್ರಯಾಗದವರೆಗೆ ಗುಪ್ತಾಂ=ತನ್ನಿಂದ ಪಾಲಿತವಾದ ಮೇದಿನೀಂ=ಭೂಮಿಯನ್ನು ಭೋಕ್ಷ್ಯತಿ=ಅನುಭವಿಸುವನು. ನಂತರ ಸೌರಾಷ್ಟ್ರಾಃ=ಸೌರಾಷ್ಟ್ರರು ಆವಂತ್ಯಾಃ= ಆವಂತ್ಯರು ಆಭೀರಾಃ=ಆಭೀರರು ಶೂದ್ರಾಃ=ಶೂದ್ರರು ಅರ್ಬುದಮಾಲವಾಃ= ಅರ್ಬುದರು ಮಾಲವರು ಆಳುವರು.

**ವ್ರಾತ್ಯಾ ದ್ವಿಜಾ ಭವಿಷ್ಯಂತಿ ಶೂದ್ರಪ್ರಾಯಾ ಜನಾಧಿಪಾಃ ।**
**ಸಿಂಧೋಸ್ತಟಂ ಚಂದ್ರಭಾಗಾಂ ಕಾಂಚೀಂ ಕಾಶ್ಮೀರಮಂಡಲಮ್ ॥ ೩೯ ॥**

ದ್ವಿಜಾಃ=ಬ್ರಾಹ್ಮಣರು ವ್ರಾತ್ಯಾಃ=ಸಂಸ್ಕಾರಹೀನರಾಗುವರು ಜನಾಧಿಪಾಃ=ರಾಜರು ಶೂದ್ರಪ್ರಾಯಃ=ಬಹಳವಾಗಿ ಶೂದ್ರಧರ್ಮವುಳ್ಳವರು ಭವಿಷ್ಯಂತಿ=ಆಗುವರು ಸಿಂಧೋಃತಟಂ=ಸಿಂಧುದೇಶದ ಪ್ರಾಂತಭಾಗವನ್ನು ಚಂದ್ರಭಾಗಾಂ=ಚಂದ್ರಭಾಗ-ಪರ್ವತವಿದ್ದ ಪ್ರದೇಶ ಕಾಂಚೀಂ ಕಾಶ್ಮೀರಮಂಡಲಂ=ಕಾಂಚೀಯಿಂದ ಆರಂಭಿಸಿ ಕಾಶ್ಮೀರದೇಶವನ್ನೂ ಭೋಕ್ಷ್ಯಂತಿ=ಅನುಭವಿಸುವರು.

**ಭೋಕ್ಷ್ಯಂತಿ ಶೂದ್ರಾ ವ್ರಾತ್ಯಾಶ್ಚ ಮ್ಲೇಂಛಾ ಅಬ್ರಹ್ಮವರ್ಚಸಃ ।**
**ತುಲ್ಯಕಾಲಾ ಇಮೇ ರಾಜನ್ ಮ್ಲೇಂಛಪ್ರಾಯಾಶ್ಚ ಭೂಭೃತಃ ॥ ೪೦ ॥**

ಶೂದ್ರಾಃ=ಶೂದ್ರಧರ್ಮವುಳ್ಳವರು ವ್ರಾತ್ಯಾಃ=ಸಂಸ್ಕಾರಹೀನರು ಅಬ್ರಹ್ಮವರ್ಚಸಃ= ಬ್ರಹ್ಮವರ್ಚಸ್ಸಿಲ್ಲದವರು ಮ್ಲೇಂಚ್ಛಾಃ=ಮ್ಲೇಂಚ್ಛರು ಇಮೇ=ಇವರೆಲ್ಲರು ತುಲ್ಯಕಾಲಾಃ= ಸಮಕಾಲೀನರು ಪ್ರಾಯಃ ಭೂಭೃತಃ=ಬಹಳವಾಗಿ ರಾಜರು ಮ್ಲೇಂಚ್ಛಪ್ರಾಯಾಃ= ಮ್ಲೇಂಚ್ಛಸದೃಶರು.

**ಏತೇಽಧರ್ಮಾನೃತಪರಾ ಫಲ್ಗುದಾ ಸ್ತೀವ್ರಮನ್ಯವಃ ।**
**ಸ್ತ್ರೀಬಾಲಗೋದ್ವಿಜಘ್ನಾಶ್ಚ ಪರದಾರಧನಾದೃತಾಃ ॥ ೪೧ ॥**

ಏತೇ=ಇವರು ಅಧರ್ಮಾನೃತಪರಾಃ=ಅಧರ್ಮ ಸುಳ್ಳು ಇವೇ ಮುಖ್ಯವಾಗಿವುಳ್ಳವರು ಫಲ್ಗುದಾಃ=ಕ್ಷುದ್ರದಾನಿಗಳು ತೀವ್ರಮನ್ಯವಃ=ಶೀಘ್ರಕೋಪಿಗಳು ಸ್ತ್ರೀಬಾಲಗೋದ್ವಿಜಘ್ನಾಃ =ಸ್ತ್ರೀಯರು ಬಾಲಕರು ಆಕಳುಗಳನ್ನು ಕೊಲ್ಲುವವರು ಪರದಾರಧನಾದೃತಾಃ=ಪರರ ಹೆಂಡತಿ ಹಣಗಳಲ್ಲಿ ಆಸಕ್ತರು.

**ಉದಿತಾಸ್ತಮಿತಪ್ರಾಯಾ ಅಲ್ಪಸತ್ವಾಲ್ಪಕಾಯುಷಃ ।**
**ಅಸಂಸ್ಕೃತಾ ಕ್ರಿಯಾಹೀನಾಃ ರಜಸಾ ತಮಸಾ ವೃತಾಃ ॥ ೪೨ ॥**

ಉದಿತಾಸ್ತಮಿತಪ್ರಾಯಾಃ=ಸೂರ್ಯೋದಯಾಸ್ತಮಾನಗಳನ್ನಷ್ಟೇ ತಿಳಿಯುವವರು (ಆ ಆ ಕಾಲೋಚಿತಧರ್ಮಾನುಷ್ಠಾನ ಮಾಡದವರೆಂದರ್ಥ) ಅಲ್ಪಸತ್ವಾಃ=ಸ್ವಲ್ಪ ಬಲವುಳ್ಳವರು ಅಲ್ಪಕಾಯುಷಾಃ=ಅತ್ಯಲ್ಪಆಯುಷ್ಯವುಳ್ಳವರು ಅಸಂಸ್ಕೃತಾಃ=ಗರ್ಭಾದಾನಾದಿ ಷೋಡಶಸಂಸ್ಕಾರ ರಹಿತರು ಕ್ರೀಯಾಹೀನಾಃ=ಸಂಧ್ಯಾವಂದನಾದಿಕರ್ಮಮಾಡದವರು ರಜಸಾತಮಸಾವೃತಾಃ=ತಮೋಗುಣಪ್ರಚುರವಾದ ರಜೋಗುಣಯುತರು.

**ಪ್ರಜಾಸ್ತೇ ಭಕ್ಷ್ಯಯಿಷ್ಯಂತಿ ಮ್ಲೇಚ್ಛಾರಾಜನ್ಯರೂಪಿಣಃ ।**
**ತನ್ನಾಥಾಸ್ತೇ ಜನಪದಾಸ್ತಚ್ಛೀಲಾಚಾರವಾದಿನಃ** ॥ ೪೩ ॥

**ಅನ್ಯೋನ್ಯತೋ ರಾಜಭಿಶ್ಚ ಕ್ಷಯಂ ಯಾಸ್ಯಂತಿ ಪೀಡಿತಾಃ** ॥ ೪೪ ॥

ರಾಜನ್ಯರೂಪಿಣಃ=ರಾಜನಿಂದ ರಾಜ್ಞಿಯಲ್ಲಿ ಹುಟ್ಟಿರುವಂತಹ ರೂಪವುಳ್ಳವರು ಪ್ರಜಾಃ=ತನ್ನ ದೇಶದಲ್ಲಿ ಜನಿಸಿದವರನ್ನು ಭಕ್ಷ್ಯಯಿಷ್ಯಂತಿ=ಕಿತ್ತು ಧನಾದಿಗಳನ್ನು ತಿನ್ನುವವರು ಜನಪದಾಃ=ದೇಶಗಳು ತನ್ನಾಥಾಃ=ಇಂಥವರನ್ನೇ ರಾಜರಾಗಿ ಉಳ್ಳವುಗಳಾಗುವವು ತಚ್ಛೀಲಾಚಾರವಾದಿನಃ=ಅವರ ಸ್ವಭಾವ ಆಚಾರ ಆಡುಮಾತುಗಳಂತೆ ಸ್ವಭಾವ ಆಚಾರವಿಚಾರಗಳುಳ್ಳವರು ಅಲ್ಲಿ ಜನರು ಅನ್ಯೋನ್ಯತಃ= ಪರಸ್ಪರವಾಗಿಯೂ ರಾಜಭಿಃ=ರಾಜರಿಂದಲೂ ಪೀಡಿತಾಃ ಸಂತಃ=ಪಿಡಿತರಾಗಿ ಕ್ಷಯಂ ಯಾಸ್ಯಂತಿ=ನಾಶವಾಗುವರು.

**॥ ಇಲ್ಲಿಗೆ ಪ್ರಥಮಾಧ್ಯಾಯವು ಸಮಾಪ್ತವಾಯಿತು ॥**



# ಅಥ ದ್ವಿತೀಯೋಽಧ್ಯಾಯಃ

ಸಾರಾಂಶ

ಹೀಗೆ ದಿನದಿನಕ್ಕೆ ಜನರಲ್ಲಿ ಕಲಿಪ್ರಾಬಲ್ಯದಿಂದಾಗಿ ಧರ್ಮ-ಸತ್ಯ-ಕ್ಷಮಾ-ದಯಾ-ಶೌಚಾಚಾರಗಳೆಲ್ಲ ನಾಶವಾಗುತ್ತಾ ಹೋಗುತ್ತವೆ. ಈ ಕಲಿಯುಗದಲ್ಲಿ ಧನವೊಂದೇ ಕುಲವನ್ನು ಆಚಾರವಿಚಾರಗಳನ್ನು ಸದ್ಗುಣಗಳನ್ನು ಅಳಿಯುವ ಮಾನದಂಡವಾಗಿರುತ್ತದೆ. ಯಾವನಲ್ಲಿ ಧನವು ಅಧಿಕವಾಗಿರುತ್ತದೆಯೋ ಅವನೇ ಕುಲೀನನು ಆಚಾರವಂತನು ಗುಣವಂತನು. ಇದು ಧರ್ಮ ಇದು ಅಧರ್ಮ ಎಂದು ತೀರ್ಮಾನಿಸಲು ಪಕ್ಷದ ಬಲವೇ ಕಾರಣವಾಗುತ್ತದೆ. ದಾಂಪತ್ಯಕ್ಕೆ ಕೇವಲ ಯುವಕ-ಯುವತಿಯರ ಪರಸ್ಪರ ಕಾಮಾಭಿರುಚಿಯೇ ನಿರ್ಣಾಯಕವಾಗಿರುತ್ತದೆ. ವ್ಯಾಪಾರಗಳಲ್ಲಿ ಮೋಸ ಕಪಟತನವೇ ಪ್ರಧಾನವಾಗಿರುತ್ತದೆ. ಯಜ್ಞೋಪವೀತ ಇರುವ ಮಾತ್ರದಿಂದ ಅವನು ಬ್ರಾಹ್ಮಣನೆನಿಸುತ್ತಾನೆ. ಚತುರತನದಿಂದ ಮಾತನಾಡುವ ಬಾಯಿ ಬಡಕನೇ ಪಂಡಿತನೆನಿಸುವನು. ಶಾಸ್ತ್ರಜ್ಞಾನದಿಂದಲ್ಲ. ಹೀಗೆ ಕಲಿಯುಗದ ಅಂತ್ಯದಲ್ಲಿ ಅನೇಕ ಅಧರ್ಮಗಳು ಜರಗುತ್ತವೆ. ಕಲಿದೋಷಗಳಾದ ಅಧರ್ಮ-ಅನ್ಯಾಯ ಹಿಂಸೆಗಳು ಅತ್ಯಧಿಕಮಟ್ಟಕ್ಕೇರಿದಾಗ ಸ್ವಯಂ ಭಗವಂತನೇ ಕಲ್ಕಿಯಾಗಿ ಶಂಬಲ ಎಂಬ ಗ್ರಾಮದಲ್ಲಿ ವಿಷ್ಣುಯಶಸ್-ಸುಮತಿ ದಂಪತಿಗಳಲ್ಲಿ ಅವತರಿಸುತ್ತಾನೆ. ದೇವದತ್ತ ವೆಂಬ ಮಹಾವೇಗಶಾಲಿಯಾದ ಬಿಳಿಯ ಕುದುರೆಯನ್ನೇರಿ ದುಷ್ಟಜನರನ್ನು ಒಂದೇ ದಿನದಲ್ಲಿ ಖಡ್ಗದಿಂದ ಕತ್ತರಿಸಿ ಕೊಂದುಹಾಕುತ್ತಾನೆ. ತನ್ನ ಅಪ್ರತಿಮಕಾಂತಿಯಿಂದ ಬೆಳಗುತ್ತಿರುವ ಕಲ್ಕಿ ಭಗವಂತನು ಕುದುರೆಯನ್ನೇರಿ ಭೂಮಿಯೆಲ್ಲೆಲ್ಲ ಸಂಚರಿಸುತ್ತಾ ಕಳ್ಳ-ಕಾಕರನ್ನು ದಸ್ಯುಗಳನ್ನು ಸಂಹರಿಸುವನು. ಮುಂದೆ ಕೃತ-ತ್ರೇತ-ದ್ವಾಪರ-ಕಲಿಯುಗಗಳ ಆರಂಭದ ಲಕ್ಷಣವನ್ನು ನಿರೂಪಿಸುವರು. ಈ ಅಧ್ಯಾಯದ ಕೊನೆಯಲ್ಲಿ ರಾಜಮಹಾರಾಜರೆಲ್ಲ ಈ ಭೂಮಿಯನ್ನು ನನ್ನದೇ ಇದು. ನಾನೇ ಇದಕ್ಕೆ ಒಡೆಯ ಎಂಬ ಅಹಂಕಾರ-ಮಮಕಾರಗಳಿಂದ ಅಂಧರಾದರು. ಕೊನೆಗೊಮ್ಮೆ ದೇಹ-ಮನೆ-ಮಕ್ಕಳು-ಮಡದಿ

ಎಲ್ಲವನ್ನು ಬಿಟ್ಟು ತಾವೊಬ್ಬರೇ ಹೋದರು. ಇವತ್ತು ಅವರ ಕಥೆ ಮಾತ್ರ ಕೇಳಲಿಕ್ಕಿದೆ. ಅವರಾರೂ ಕಣ್ಣಿಗೆ ಕಾಣಲಿಕ್ಕಿಲ್ಲ. ಇತ್ಯಾದಿ ವಿಚಾರಗಳನ್ನು ಶುಕಾಚಾರ್ಯರು ಪರೀಕ್ಷಿತನಿಗೆ ಉಪದೇಶಿಸುತ್ತಾರೆ.

*ಶ್ರೀಕಲ್ಕಿಯ ಅವತಾರ ಶಂಬಲಗ್ರಾಮದಲ್ಲಿ ಕಲಿಕನಿಂದ ಆಗುವುದು ಮತ್ತು ಅವನ ಚರಿತ್ರೆ ಹಾಗು ಕಾಲಧರ್ಮಗಳನ್ನು ಈ ಅಧ್ಯಾಯದಲ್ಲಿ ಹೇಳುವರು. ಮೊದಲಿಗೆ ಕಾಲಾನುಸಾರವಾಗಿ ಧರ್ಮಾದಿಗಳು ಈ ರೀತಿ ಇದ್ದವೆಂದು ಹೇಳುವರು*

ಶ್ರೀ ಶುಕ ಉವಾಚ

**ತತಶ್ಚಾನುದಿನಂ ಧರ್ಮಃ ಸತ್ಯಂ ಶೌಚಂ ಕ್ಷಮಾ ದಯಾ ।**
**ಕಾಲೇನ ಬಲಿನಾ ರಾಜನ್ ನಂಕ್ಷ್ಯಂತ್ಯಾಯುರ್ಬಲಂ ಸ್ಮೃತಿಃ ॥ ೧ ॥**

ತತಃ=ಪ್ರಜಾಕ್ಷಯವಾದ ನಂತರ ಅನುದಿನಂ=ಪ್ರತಿದಿನವೂ ಧರ್ಮಃ=ಧರ್ಮವು ಸತ್ಯಂ=ಸತ್ಯವು ಶೌಚಂ=ಶುದ್ಧಿಯು ಕ್ಷಮಾ=ಕ್ಷಮಾಗುಣವು ದಯಾ=ಕೃಪೆಯು ಆಯುಃ=ಆಯುಷ್ಯವು ಬಲಂ=ಶಾರೀರಿಕಬಲವೂ ಸ್ಮೃತಿಃ=ಸ್ಮರಣವು ರಾಜನ್=ರಾಜನೇ ಬಲಿನಾ=ಬಲಿಷ್ಠನಾದ ಕಾಲೇನ=ಈ ಕಲಿಕಾಲದಿಂದ ನಂಕ್ಷ್ಯಂತಿ=ನಾಶವಾಗುವವು.

**ವಿತ್ತಮೇವ ಕಲೌ ನೃಣಾಂ ಜನ್ಮಾಚಾರಗುಣಾದಯಃ ।**
**ಧರ್ಮನ್ಯಾಯವ್ಯವಸ್ಥಾಯಾಂ ಕಾರಣಂ ಬಲಮೇವ ಹಿ ॥ ೨ ॥**

ಕಲೌ=ಕಲಿಯುಗದಲ್ಲಿ ನೃಣಾಂ=ಜನರಿಗೆ ಜನ್ಮಾಚಾರಗುಣಾದಯಃ=ಹುಟ್ಟು-ಆಚಾರ -ಗುಣಾದಿಗಳು ವಿತ್ತಮೇವ=ಹಣವನ್ನು ಆಶ್ರಯಿಸಿವೆ. (ಯಾವನಿಗೆ ಹಣ ಬಹಳವಾಗಿದೆಯೋ ಅವನು ದುಷ್ಟನಾಗಿದ್ದರೂ ಮಾನ್ಯನಾಗುವನು. ಹೊರತು ಒಳ್ಳೆಯ ಸ್ವಭಾವದವನಾಗಿದ್ದರೂ ದರಿದ್ರ ಎನ್ನುವದಕ್ಕೆ ಅವನು ಮಾನ್ಯನಲ್ಲ ಎಂದು ಅರ್ಥ.) ಇದರಂತೆ ಧನಿಕನು ಮಾಡುವ ಆಚಾರ ವಿಚಾರ ವ್ಯವಹಾರಗಳೇ ನಿಜವಾದ ಸದಾಚಾರ ಸದ್ಗುಣಗಳು ಧರ್ಮನ್ಯಾಯವ್ಯವಸ್ಥಾಯಾಂ=ಇದು ಧರ್ಮ ಇದು ಅಧರ್ಮ ಇದು ನೀತಿ ಇದು ಅನೀತಿ ಮುಂತಾದ ವ್ಯವಸ್ಥೆಗೆ ಬಲಮೇವ ಕಾರಣಂ= ಕಾರ್ಯನಿರ್ವಹಿಸುವವನ ಬಲವನ್ನು ನೋಡಿ ನಿರ್ಣಯಿಸಲಾಗುವದು.

**ದಾಂಪತ್ಯೇ ಅಭಿರುಚಿರ್ಹೇತುಃ ಮಾಯೈವ ವ್ಯಾವಹಾರಿಕೇ ।**
**ಸ್ತ್ರೀತ್ವೇ ಪುಂಸ್ತ್ವೇ ಚ ಹಿ ರತಿರ್ವಿಪ್ರತ್ವೇ ಸೂತ್ರಮೇವ ಚ ॥ ೩ ॥**

ದಾಂಪತ್ಯೇ=ಪತಿ ಪತ್ನೀಯರಾಗಲು ಅಭಿರುಚಿಃ ಹೇತುಃ=ಪರಸ್ಪರ ಸ್ನೇಹ ಒಂದೇ ಕಾರಣ (ವಿವಾಹಾದಿಗಳಿಗೆ ಹಿರಿಯರು ಬೇಕಿಲ್ಲ ಅವರ ನಿಯಮಯೂ ಆ ಕಾಲದಲ್ಲಿ ಬೇಕಿಲ್ಲ) ವ್ಯವಹಾರ ನಡೆಸಲು ಕ್ರಯವಿಕ್ರಯಮಾಡಲು ಮಾಯಾ ಏವ ಹೇತುಃ=ಕಪಟತನ ಇದ್ದರೆ ಸಾಕು. ಸ್ತ್ರೀತ್ವೇ ಪುಂಸ್ತ್ವೇ ಚ ಅತಿರತಿಃ=ಸ್ತ್ರೀಪುರುಷರ ಉತ್ತಮತ್ವದಲ್ಲಿ ಸೌಂದರ್ಯವೇ ಕಾರಣ. ಕುಲಶೀಲಗಳಲ್ಲ ಎಂದು ಭಾವ

**ವಿಶೇಷ-**'ವಿಪ್ರತ್ವೇ ಸೂತ್ರಮೇವ ಹಿ' ಬ್ರಾಹ್ಮಣನೆನಿಸಲು ಮೂರು ಎಳೆಯ ದಾರವಿದ್ದರೆ ಸಾಕು (ಅಮಂತ್ರಿತಯಜ್ಞೋಪವೀತವೆಂದರ್ಥ.)

**ಲಿಂಗಮೇವಾಶ್ರಮಖ್ಯಾತಾವನ್ಯೋನ್ಯಾಪತ್ತಿಕಾರಣಮ್ ।**
**ಅವೃತ್ತ್ಯನ್ಯಾಯದೌರ್ಬಲ್ಯೇ ಪಾಂಡಿತ್ಯೇ ಚಾಪಲಂ ವಚಃ ॥ ೪ ॥**

(ಶ್ರೀಸತ್ಯಧರ್ಮತೀರ್ಥರ ಪ್ರಕಾರ)ಆಶ್ರಮಖ್ಯಾತೌ=ಆಶ್ರಮವುಳ್ಳವನಿವನು ಎಂದು ಪ್ರಸಿದ್ಧಿ ಬರಲು ಮತ್ತು ಅನ್ಯೋನ್ಯಾಪತ್ತಿಕಾರಣಂ=ಪರಸ್ಪರ ನಮನ ಪ್ರತಿನಮನಗಳಿಗೆ ಕಾರಣವು ಲಿಂಗಂ=ದಂಡಕಮಂಡಲು ಮುಂತಾದ ಆಶ್ರಮಚಿಹ್ನೆಗಳು ಹೊರತು ವಿದ್ಯೆಯಲ್ಲ ಅವೃತ್ತ್ಯನ್ಯಾಯ ದೌರ್ಬಲ್ಯೇ=ಇತರರಿಗೆ ಇರುವ ವೃತ್ತಿ (ಜೀವನೋಪಾಯ) ಚ್ಛೇದ ಮತ್ತು ಅನ್ಯಾಯ ಇವುಗಳಿಂದ ಸಹಿತವಾದ ಇತರರನ್ನು ದುರ್ಬಲಗೊಳಿಸಲು ಚ=ಮತ್ತು ಪಾಂಡಿತ್ಯೇ=ತಾನು ಪಂಡಿತನೆನಿಸಿಕೊಳ್ಳಲು ಚಾಪಲಂ ವಚಃ=ಪರರನ್ನು ವಂಚಿಸುವ ಮಾತುಗಳೇ ಲಿಂಗಂ=ಕಾರಣವು.

**ವಿಶೇಷ-** (ವಿಜಯಧ್ವಜರ ಪ್ರಕಾರ) ಆಶ್ರಮಾಣಾಂ ಖ್ಯಾತೌ=ಇವನು ಬ್ರಹ್ಮಚಾರಿ ಇವನು ಗೃಹಸ್ಥ ಮುಂತಾಗಿ ಹೇಳಲು ಅನ್ಯೋನ್ಯಾಪತ್ತಿಕಾರಣಂ=ಆಶ್ರಮದಿಂದ ಇನ್ನೊಂದು ಆಶ್ರಮವನ್ನು ಹೊಂದುವುದು ಕಾರಣವು ನ್ಯಾಯದೌರ್ಬಲ್ಯೇ= ನ್ಯಾಯಮಾಡದಿರಲು ಅವೃತ್ತಿಃ=ತನಗೆ ಜೀವನೋಪಾಯ ವಿಲ್ಲದಿರುವುದೇ ಕಾರಣ.

**ಅನಾಢ್ಯತೈವಾ ಸಾಧುತ್ವೇ ಸಾಧುತ್ವೇ ಡಂಭ ಏವ ತು ।**
**ಸ್ವೀಕಾರ ಏವ ಚೋದ್ವಾಹೇ ಸ್ನಾನಮೇವ ಪ್ರಸಾಧನಮ್ ॥ ೫ ॥**

ಸಾಧುತ್ವೇ=ದುಷ್ಟನೆನಿಸಲು ಅನಾಢ್ಯತಾ ಏವ=ದಾರಿದ್ರ್ಯವೇ ಕಾರಣವು ಸಾಧುತ್ವೇ ಸಜ್ಜನನೆನಿಸಲು ಡಂಭ ಏವ ತು=ಇಲ್ಲದಿರುವ ಆಚಾರವನ್ನು ತೋರಿಸುವದೇ ಕಾರಣ. ಉದ್ವಾಹೇ=ಮದುವೆ ಆಗಲು ಸ್ವೀಕಾರ ಏವ=ನೀನು ನನ್ನ ಹೆಂಡತಿ ಎಂದು ಸ್ವೀಕರಿಸುವುದೇ ಕಾರಣ ಹೊರತು ವಿಧಿವಿಧಾನ ಬೇಕಾಗುವದಿಲ್ಲ, ಸ್ನಾನಂ ಏವ=ಸ್ನಾನ ಮಾಡುವುದೇ ಪ್ರಸಾಧನಂ=ಶರೀರ ಶುದ್ಧಿಯು.

**ದೂರೇ ವಾರ್ಯಟನಂ ತೀರ್ಥಂ ಲಾವಣ್ಯೇ ಕೇಶಧಾರಣಮ್ ।**
**ಉದರಂಭರತಾ ಸ್ವಾರ್ಥಃ ಸತ್ಯತ್ವೇ ಧಾರ್ಷ್ಟ್ಯಮೇವ ಹಿ ॥ ೬ ॥**

ದೂರೇ=ದೂರದಲ್ಲಿರುವ ವಾರ್ಯಟನಂ=ಜಲಾಶಯಕ್ಕೆ ಹೋಗುವದು ತೀರ್ಥಂ= ತೀರ್ಥಯಾತ್ರೆಯು(ಹೊರತು ಗುರುಗಳೇ ಮುಂತಾದ ಮಹನೀಯರ ಜೊತೆಗೆ ಸಮೀಪದ ಸರೋವರಗಳಲ್ಲಿ ಸ್ನಾನಮಾಡುವುದಲ್ಲ.) ಲಾವಣ್ಯೇ=ಸೌಂದರ್ಯಕ್ಕೆ ಕೇಶಧಾರಣಂ=ಕೂದಲುಗಳನ್ನು ಒಟ್ಟುಗೂಡಿಸಿ ಧರಿಸುವದು ಸ್ವಾರ್ಥಃ=ತನ್ನ ಪ್ರಯೋಜನವು ಉದರಂಭರತಾ=ತನ್ನ ಹೊಟ್ಟೆತುಂಬಿಕೊಳ್ಳುವದು ಅಷ್ಟೇ ಹೊರತು ದೇವರಿಗೆ ಬ್ರಾಹ್ಮಣರಿಗೆ ನಿವೇದಿಸುವದಲ್ಲ. ಸತ್ಯತ್ವೇ=ಮಾತು ನಿಜವಾಗಲು ದಾರ್ಷ್ಟ್ಯಂ ಏವ=ಧೈರ್ಯದಿಂದ ಲಜ್ಜೆಯಿಲ್ಲದೇ ಗಟ್ಟಿಯಾಗಿ ಹೇಳಿದರೆ ಅದೇ ಸತ್ಯವಾಗುವರು.

**ದಾಕ್ಷ್ಯಂ ಕುಟುಂಬಭರಣೇ ಯಶೋಽರ್ಥೇ ಧರ್ಮಸೇವನಮ್ ।**
**ಏವಂ ಪ್ರಜಾಭಿರ್ದುಷ್ಟಾಭಿರಾಕೀರ್ಣೇ ಕ್ಷಿತಿಮಂಡಲೇ ॥ ೭ ॥**

ಕುಟುಂಬಭರಣೇ=ತನ್ನ ಕುಟುಂಬ ರಕ್ಷಣೆ ಮಾಡುವಲ್ಲಿ ದಾಕ್ಷ್ಯಂ=ಸಮರ್ಥತೆಯು ಯಶೋರ್ಥೇ=ಕೇವಲ ಕೀರ್ತಿಗಾಗಿ ಧರ್ಮಸೇವನಂ=ಧರ್ಮಾಚರಣ ಮಾಡಿದಂತೆ ತೋರಿಸುವದು. ಏವಂ=ಈ ರೀತಿಯಾಗಿ ದುಷ್ಟಾಭಿಃ ಪ್ರಜಾಭಿಃ=ಅಸಜ್ಜನರಿಂದ ಕ್ಷಿತಿಮಂಡಲೇ ಆಕೀರ್ಣೇ=ಭೂಮಂಡಲವು ತುಂಬುತ್ತಿರಲು

**ಬ್ರಹ್ಮವಿಟ್‌ಕ್ಷತ್ರಶೂದ್ರಾಣಾಂ ಯೋ ಬಲೀ ಭವಿತಾ ನೃಪಃ ।**
**ಪ್ರಜಾ ಹಿ ಲುಬ್ಧೈರಾಜನ್ಯೈರ್ನಿರ್ಘೃಣೈರ್ದಸ್ಯುಧರ್ಮಭಿಃ ॥ ೮ ॥**

ಬ್ರಹ್ಮವಿಟ್‌ಕ್ಷತ್ರಶೂದ್ರಾಣಾಂ=ಬ್ರಾಹ್ಮಣ-ವೈಶ್ಯ-ಕ್ಷತ್ರಿಯ-ಶೂದ್ರನು ಇವರಲ್ಲಿ ಯಃ=ಯಾವನು ಬಲೀ=ಬಲಿಷ್ಠನು ಸ=ಅವನು ನೃಪಃ ಭವಿತಾ=ರಾಜನಾಗುವನು. ಲುಬ್ಧೈಃ=ಲೋಭಿಗಳಾದ ನಿರ್ಘೃಣೈಃ=ಕರುಣೆಯಿಲ್ಲದ ದಸ್ಯುಧರ್ಮಭಿಃ=ಕಳ್ಳರ ಧರ್ಮವುಳ್ಳ ರಾಜನ್ಯೈಃ=ರಾಜರಿಂದ

**ಆಚ್ಛಿನ್ನದಾರದ್ರವಿಣಾ ಯಾಸ್ಯಂತಿ ಗಿರಿಕಾನನಮ್ ।**
**ಶಾಕಮೂಲಾಮಿಷಕ್ಷೌದ್ರಫಲಪುಷ್ಪಾದಿಭೋಜನಾಃ ॥ ೯ ॥**

ಆಚ್ಛಿನ್ನದಾರದ್ರವಿಣಾಃ=ಅಪಹರಿಸಲ್ಪಟ್ಟ ಹೆಂಡತಿ ಮತ್ತು ಹಣವುಳ್ಳ ಪ್ರಜಾಃ=ಪ್ರಜೆಗಳು ಗಿರಿಕಾನನಂ=ಗುಡ್ಡಗಾಡುಗಳಿಗೆ ಯಾಸ್ಯಂತಿ=ಹೋಗುವರು

ಶಾಕಮೂಲಾಮಿಷಕ್ಷೌದ್ರಫಲಪುಷ್ಪಾದಿಭೋಜನಾಃ=ತರಕಾರಿ,ಗಡ್ಡೆಗಳು,ಹಣ್ಣು ಮಾಂಸ ಹೂವುಗಳೇ ಆಹಾರವಾಗಿವುಳ್ಳವರಾಗುವರು.

**ಅನಾವೃಷ್ಟ್ಯಾ ವಿನಂಕ್ಷ್ಯಂತಿ ದುರ್ಭಿಕ್ಷಕರಪೀಡಿತಾಃ ।**
**ಶೀತವಾತಾತಪಪ್ರಾವಡ್ಢಿಮ್ಯೈರನ್ಯೋನ್ಯತಃ ಪ್ರಜಾಃ ॥ ೧೦ ॥**

ಅನಾವೃಷ್ಟ್ಯಾ=ಮಳಿಯಾಗದೇ ಇರುವದರಿಂದ ದುರ್ಭಿಕ್ಷಕರಪೀಡಿತಾಃ=ದುರ್ಭಿಕ್ಷೆಯಿಂದಲೂ ತನ್ನಿಮಿತ್ತದಿಂದಲೂ ದುಃಖಿತರಾಗಿ ಶೀತವಾತಾತಪಪ್ರಾವಡ್ಢಿಮ್ಯೈರನ್ಯೋನ್ಯತಃ=ಚಳಿ-ಗಾಳಿ-ಬಿಸಿಲು-ಮಳೆ-ಮಂಜು ಇವೆಲ್ಲವುಗಳಿಂದ ಅನ್ಯೋನ್ಯತಃ= ಇವುಗಳಲ್ಲೊಂದರಿಂದ ಅಥವಾ ತಮ್ಮಲ್ಲಿಯೇ ಒಬ್ಬರು ಮತ್ತೊಬ್ಬರಿಂದ ಪ್ರಜಾಃ= ಪ್ರಜೆಗಳು ವಿನಕ್ಷ್ಯಂತಿ=ನಾಶಹೊಂದುವರು.

**ಕ್ಷುತ್ತೃಷಾವ್ಯಾದಿಭಿಶ್ಚೈವ ಸಂತಪ್ಯಂತೇ ಚ ಚಿಂತಯಾ ।**
**ತ್ರಿಂಶದ್ವಿಂಶತಿವರ್ಷಾಣಿ ಪರಮಾಯುಃ ಕಲೌ ನೃಣಾಮ್ ॥ ೧೧ ॥**

ಕ್ಷುತ್ತೃಷಾವ್ಯಾಧಿಭಿಃ=ಹಸಿವೆ ನೀರಡಿಕೆ ರೋಗಗಳಿಂದಲೂ ಚ=ಮತ್ತು ಚಿಂತಯಾ= ವಿಚಾರಗಳಿಂದಲೂ ಸಂತಪ್ಯಂತೇ=ಬಳಲುವರು. ಕಲೌ=ಕಲಿಯುಗದಲ್ಲಿ ನೃಣಾಂ= ಜನರಿಗೆ ತ್ರಿಂಶದ್ವಿಂಶತಿವರ್ಷಾಣಿ=ಮೂವತ್ತು-ಇಪ್ಪತ್ತು ವರ್ಷಗಳು ಪರಮಾಯುಃ= ಪರಮಾವಧಿ ಆಯುಷ್ಯವು.

**ಕ್ಷೀಯಮಾಣೇಷು ದೇಹೇಷು ದೇಹಿನಾಂ ಕಲಿದೋಷತಃ ।**
**ವರ್ಣಾಶ್ರಮವತಾಂ ಧರ್ಮೇ ನಷ್ಟೇ ವೇದಪಥೇ ನೃಣಾಮ್ ॥ ೧೨ ॥**

ವರ್ಣಾಶ್ರಮವತಾಂ=ಬ್ರಾಹ್ಮಣಾದಿಜಾತಿ, ಬ್ರಹ್ಮಚರ್ಯಾದ್ಯಾಶ್ರಮುಗಳಲ್ಲಿರುವ ದೇಹಿನಾಂ=ಜನರ ದೇಹೇಷು=ಶರೀರಗಳು ಕಲಿದೋಷೇಣ=ಕಲಿಕಾಲಪ್ರಭಾವದಿಂದ ಕ್ಷೀಯಮಾಣೇಷು=ಕ್ಷೀಣವಾಗುತ್ತಿರಲು ನೃಣಾಂ=ಜನರ ಧರ್ಮೇ=ಧರ್ಮವು ವೇದಪಥೇ= ವೇದಮಾರ್ಗವು ನಷ್ಟೇ=ನಾಶವಾಗುತ್ತಿರಲು

**ಪಾಖ(ಷ)ಂಡಪ್ರಚುರೇ ಧರ್ಮೇ ದಸ್ಯುಪ್ರಾಯೇಷು ರಾಜಸು ।**
**ಚೌರ್ಯಾನೃತವೃಥಾಹಿಂಸಾನಾನಾವೃತ್ತಿಷು ವೈ ನೃಷು ॥ ೧೩ ॥**

ಅಧರ್ಮೇ=ಅಧರ್ಮವು ಪಾಖಂಡಪ್ರಚುರೇ=ನಾಸ್ತಿಕತೆಯ ಹೆಚ್ಚಳದಿಂದ ಕೂಡುತ್ತಿರಲು ರಾಜಸು=ರಾಜರು ದಸ್ಯುಪ್ರಾಯೇಷು=ಕಳ್ಳರಂತಾಗುತ್ತಿರಲು

ಚೌರ್ಯಾನೃತವೃಥಾಹಿಂಸಾನಾನಾವೃತ್ತಿಷು=ಕಳ್ಳತನ ಸುಳ್ಳು ಮಂತ್ರಪಾವನವಾಗದ ಪಶುಹಿಂಸೆಯು ಈರೀತಿ ನಡವಳಿಕೆವುಳ್ಳ ನೃಷು=ಜನರು ಇರುತ್ತಿರಲು

**ಶೂದ್ರಪ್ರಾಯೇಷು ವರ್ಣೇಷು ಭಾಗಪ್ರಾಯೇಷು ಧೇನುಷು ।**
**ಗೃಹಪ್ರಾಯೇಷ್ವಾಶ್ರಮೇಷು ಯೋನಿಪ್ರಾಯೇಷು ಬಂಧುಷು** ॥ ೧೪ ॥

ವರ್ಣೇಷು=ಬ್ರಾಹ್ಮಣ ಕ್ಷತ್ರಿಯ ವೈಶ್ಯ ಈ ಮೂರುವರ್ಣಗಳು ಶೂದ್ರಪ್ರಾಯೇಷು =ತಮ್ಮ ತಮ್ಮ ಧರ್ಮಬಿಡುವದರಿಂದ ಶೂದ್ರರಂತಾಗುತ್ತಿರಲು ಧೇನುಷು=ಆಕಳುಗಳು ಭಾಗಪ್ರಾಯೇಷು=ಹಾಲು ಕೊಡುವದರಲ್ಲೂ ಗಾತ್ರದಲ್ಲೂ ಮೆಕೆಯಂತಾಗುತ್ತಿರಲು ಆಶ್ರಮೇಷು=ಸನ್ಯಾಸಿಗಳ ಆವಾಸಸ್ಥಾನಗಳು ಗೃಹಪ್ರಾಯೇಷು=ಸಾಂಸಾರಿಕಮನೆ-ಯಂತಾಗುತ್ತಿರಲು ಬಂಧುಷು ಯೋನಿಪ್ರಾಯೇಷು=ಕೇವಲ ದೇಹಸಂಬಂಧದಿಂದ ಬಂಧುತ್ವವನ್ನು ಇಟ್ಟು ಕೊಳ್ಳುತ್ತಿರಲು

**ವಿಶೇಷ-** ಭಾಗ್ಯಶ್ಚ ಭಾಗಾಶ್ಚ ಭಾಗಾಃ, ಕ್ಷೀರತಃ ಪರಿಮಾಣತಃ ಪ್ರಾಯಾಸು ಪುಮಾಂಸ್ತ್ರಿಯಾ ಇತ್ಯೇಕಶೇಷಃ । ಹೀಗೆ ಏಕಶೇಷ ಮಾಡಿದ್ದರಿಂದ ಭಾಗಿಪ್ರಾಯಾಸು ಎನ್ನಬೇಕಿತ್ತು ಭಾಗಪ್ರಾಯೇಷು ಎಂಬುದು ಸರಿಯಲ್ಲ ಎಂಬ ಶಂಕೆಗೆ ಅವಕಾಶವಿಲ್ಲ.

**ಅಣುಪ್ರಾಯೇಷ್ವೌಷಧೀಷು ಶಮಿಪ್ರಾಯೇಷು ಸ್ಥಾಸ್ನುಷು ।**
**ವಿದ್ಯುತ್ಪ್ರಾಯೇಷು ಮೇಘೇಷು ಶೂನ್ಯಪ್ರಾಯೇಷು ಸದ್ಮಸು** ॥ ೧೫ ॥

ಔಷಧೀಷು=ಭತ್ತ ಮುಂತಾದವು ಅಣುಪ್ರಾಯೇಷು=ಕಿರುನವಣೆಯಂತಾಗುತ್ತಿರಲು ಸ್ಥಾಸ್ನುಷು=ದೊಡ್ಡ ಮರಗಳು ಶಮಿಪ್ರಾಯೇಷು=ಬಾಹುಜಿಗೆ ಗಿಡದಂತಾಗುತ್ತಿರಲು ಮೇಘೇಷು=ಮೋಡಗಳು ವಿದ್ಯುತ್ಪ್ರಾಯೇಷು=ಮಿಂಚಿನಂತೆ ಕಂಡೂ ಕಾಣದಂತೆ ಚಂಚಲವಾಗುತ್ತಿರಲು ಸದ್ಮಸು=ಮನೆಗಳು ಶೂನ್ಯಪ್ರಾಯೇಷು=ಅತಿಥಿಗೆ ಆತಿಥ್ಯಾದಿಗಳನ್ನು ಮಾಡದಿರುವದರಿಂದ ಇಲ್ಲದಂತಾಗುತ್ತಿರಲು

**ಇತ್ಥಂ ಕಲೌ ಗತಪ್ರಾಯೇ ಜನೇಷು ಖಲಧರ್ಮಸು ।**
**ಧರ್ಮತ್ರಾಣಾಯ ಸತ್ತ್ವೇನ ಭಗವಾನವತರಿಷ್ಯತಿ** ॥ ೧೬ ॥

ಇತ್ಥಂ=ಈ ರೀತಿಯಾಗಿ ಕಲೌ=ಕಲಿಯುಗವು ಗತಪ್ರಾಯೇಷು=ಬಹುಭಾಗ ಮುಗಿಯುತ್ತಿರಲು ಜನೇಷು=ಜನರು ಖಲಧರ್ಮಸು=ದುಷ್ಟಮಾರ್ಗದಲ್ಲಿ ನಡೆಯುತ್ತಿರಲು ಧರ್ಮತ್ರಾಣಾಯ=ಧರ್ಮದ ರಕ್ಷಣೆಗಾಗಿ ಸತ್ತ್ವೇನ=ಜ್ಞಾನ ಸ್ವರೂಪನಾಗಿ ಭಗವಾನ್= ಪರಮಾತ್ಮನು ಅವತರಿಷ್ಯತಿ=ಅವತಾರಮಾಡುವನು.

**ಚರಾಚರಗುರೋರ್ವಿಷ್ಣೋರೀಶ್ವರಸ್ಯಾಖಿಲಾತ್ಮನಃ ।**
**ಧರ್ಮತ್ರಾಣಾಯ ಸಾಧೂನಾಂ ಜನ್ಮಕರ್ಮಾಪನುತ್ತಯೇ ॥ ೧೭ ॥**

ಅಖಿಲಾತ್ಮನಃ=ಸರ್ವಾಂತರ್ಯಾಮಿಯಾದ ಚರಾಚರಗುರೋಃ=ಜ್ಞಾನಿ-ಅಜ್ಞಾನಿಗಳಿಗೆಲ್ಲ ಗುರುವಾದ ಈಶ್ವರಸ್ಯ=ನಿಯಾಮಕನಾದ ವಿಷ್ಣೋಃ=ಶ್ರೀಹರಿಯ ಜನ್ಮ=ಅವತಾರವು ಧರ್ಮತ್ರಾಣಾಯ=ಧರ್ಮರಕ್ಷಣೆಗಾಗಿ ಸಾಧೂನಾಂ=ಸಜ್ಜನರ ಕರ್ಮಾಪನುತ್ತಯೇ=ದುಷ್ಕರ್ಮ ಪರಿಹಾರಕ್ಕಾಗಿ ಆಗುವದು.

*ಕಲ್ಕಿಯ ಅವತಾರ ಎಲ್ಲಿ ಎಂದು ಹೇಳುವರು.*

**ಶಂಬಲಗ್ರಾಮಮುಖ್ಯಸ್ಯ ಬ್ರಾಹ್ಮಣಸ್ಯ ಮಹಾತ್ಮನಃ ।**
**ಭವನೇ ವಿಷ್ಣುಯಶಸಃ ಕಲ್ಕಿಃ ಪ್ರಾದುರ್ಭವಿಷ್ಯತಿ ॥ ೧೮ ॥**

ಶಂಬಲಗ್ರಾಮಮುಖ್ಯಸ್ಯ=ಶಂಬಲ ಎಂಬ ಊರಿಗೆ ಪ್ರಮುಖನಾದ ಮಹಾತ್ಮನಃ=ಪರಮಾತ್ಮನು ಅವತರಿಸಲು ಬೇಕಾದ ಒಳ್ಳೆಯ ಮನಸ್ಸು ಮುಂತಾದವುಗಳುಳ್ಳ ವಿಷ್ಣುಯಶಸಃ ಬ್ರಾಹ್ಮಣಸ್ಯ=ವಿಷ್ಣುಯಶಸ್ ಎಂಬ ಬ್ರಾಹ್ಮಣನ ಭವನೇ=ಪತ್ನಿಯಲ್ಲಿ ಕಲ್ಕಿಃ =ಕಲ್ಕಿಯಾಗಿ ಪ್ರಾದುರ್ಭವಿಷ್ಯತಿ=ಅವತಾರ ಮಾಡುವನು.

**ಅಶ್ವಮಾಶುಗಮಾರುಹ್ಯ ದೇವದತ್ತಂ ಜಗತ್ಪತಿಃ ।**
**ಅಸಿನಾಽಸಾಧುದಮನಮಷ್ಟೈಶ್ವರ್ಯಗುಣಾನ್ವಿತಃ ॥ ೧೯ ॥**

ಜಗತ್ಪತಿಃ=ಜಗದೊಡೆಯನಾದ ಕಲ್ಕಿಯು ಆಶುಗಂ=ಶೀಘ್ರಗಾಮಿಯಾದ ದೇವದತ್ತಂ =ದೇವತೆಗಳಿಂದ ಕೊಡಲ್ಪಟ್ಟ ಅಥವಾ ಆ ಹೆಸರಿನ ಅಶ್ವಂ=ಕುದುರೆಯನ್ನು ಆರುಹ್ಯ=ಹತ್ತಿ ಅಷ್ಟೈಶ್ವರ್ಯಗುಣಾನ್ವಿತಃ=ಅಣಿಮಾದಿ ಅಷ್ಟೈಶ್ವರ್ಯಯುತನಾಗಿ ಅಸಾಧುದಮನಂ ಪ್ರತಿ=ದುಷ್ಟರ ನಿಗ್ರಹಕ್ಕಾಗಿ ಅಸಿನಾ=ನಂದಕ ಎಂಬ ಖಡ್ಗದಿಂದ ಕೂಡಿದವನಾಗಿ

**ವಿಚರನ್ನಸಿಮಾನ್ ಕ್ಷೋಣ್ಯಾಂ ಹಯೇನಾಪ್ರತಿಮದ್ಯುತಿಃ ।**
**ನೃಪಲಿಂಗಚ್ಛದೋ ದಸ್ಯೂನ್ ಕೋಟಿಶೋ ನಿಹನಿಷ್ಯತಿ ॥ ೨೦ ॥**

ಅಪ್ರತಿಮದ್ಯುತಿಃ=ಅಸದೃಶ ಕಾಂತಿಯುಳ್ಳ ಶ್ರೀಕಲ್ಕಿರೂಪಿ ಪರಮಾತ್ಮನು ಅಸಿಮಾನ್=ಖಡ್ಗವುಳ್ಳವನಾಗಿ ಹಯೇನ=ಕುದುರೆಯಿಂದ ಕ್ಷೋಣ್ಯಾಂ=ಭೂಮಿಯಲ್ಲಿ ವಿಚರನ್=ಸಂಚರಿಸುತ್ತ ನೃಪಲಿಂಗಚ್ಛದಃ=ರಾಜರ ಚಿನ್ಹದಿಂದ ಆಚ್ಛಾದಿತರಾದ ದಸ್ಯೂನ್=ಕಳ್ಳರನ್ನು ಕೋಟಿಶಃ=ಕೋಟಿ ಕೋಟಿ ಜನರನ್ನು ಹನಿಷ್ಯತಿ=ಸಂಹರಿಸುವನು.

**ಅಥ ತೇಷಾಂ ಭವಿಷ್ಯಂತಿ ಮನಾಂಸಿ ವಿಶದಾನಿ ವೈ ।**
**ವಾಸುದೇವಾಂಗರಾಗಾತಿಪುಣ್ಯಗಂಧಾನಿಲಸ್ಪೃಶಾಮ್ ॥ ೨೦ ॥**

ಅಥ=ಕಲ್ಕಿಯಿಂದ ಕಳ್ಳರ ಸಂಹಾರವಾಗುತ್ತಿರಲು ತೇಷಾಂ=ಆ ಕಾಲದಲ್ಲಿರುವ ಜನರ ಮನಾಂಸಿ=ಮನಸ್ಸುಗಳು ವಿಶದಾನಿ ಭವಿಷ್ಯಂತಿ=ಪ್ರಸನ್ನವಾಗುವವು.(ಅಥವಾ ವಿಶಿಷ್ಟಂ ಶಂ ವಿಶಂ ತದ್ದದತೀತಿ ವಿಶದಾನಿ ಅಂದರೆ ವಿಶಿಷ್ಟ ಸುಖ ಸಾಧನಗಳಾಗುವವು.) ವಾಸುದೇವಾಂಗರಾಗಾತಿಪುಣ್ಯಗಂಧಾನಿಲಸ್ಪೃಶಾಂ-ಶ್ರೀಹರಿಯ ದೇಹಕ್ಕೆ ಹಚ್ಚಿದ ಗಂಧ ಮುಂತಾದವುಗಳಿಂದ ಅತ್ಯಂತ ಸುಗಂಧಯುತವಾದ ಗಾಳಿಯನ್ನು ಸ್ಪರ್ಶಿಸುವ ಎಂದರ್ಥ.

**ಪೌರಜಾನಪದಾನಾಂ ವೈ ಹತೇಷ್ವಖಿಲದಸ್ಯುಷು ।**
**ತೇಷಾಂ ಪ್ರಜಾನಿಸರ್ಗಶ್ಚ ಸ್ಥವಿಷ್ಠಃ ಸಂಭವಿಷ್ಯತಿ ॥ ೨೧ ॥**

ಅಖಿಲದಸ್ಯುಷು=ಎಲ್ಲ ಕಳ್ಳರು ಹತೇಷು=ಸಾಯುತ್ತಿರಲು ಪೌರಜಾನಪದಾನಾಂ= ಊರು-ರಾಜಧಾನಿಗಳಲ್ಲಿ ಇರುವ ತೇಷಾಂ=ಜನರಿಗೆ ಸ್ಥವಿಷ್ಠಃ=ದೊಡ್ಡದಾದ ಪ್ರಜಾವಿಸರ್ಗಃ=ಪ್ರಜಾಸಂತತಿಯು ಸಂಭವಿಷ್ಯತಿ=ಆಗುವದು.

**ವಾಸುದೇವೇ ಭಗವತಿ ಸತ್ವಮೂರ್ತೌ ಹೃದಿ ಸ್ಥಿತೇ ।**
**ಯದಾಽವತೀರ್ಣೋ ಭಗವಾನ್ ಕಲ್ಕಿರ್ಧರ್ಮಪತಿರ್ಹರಿಃ ॥**
**ಕೃತಂ ಭವಿಷ್ಯತಿ ತದಾ ಪ್ರಜಾಸೂತಿಶ್ಚ ಸಾತ್ವಿಕೀ ॥ ೨೩ ॥**

ಭಗವಾನ್‌ಕಲ್ಕಿಃ=ಸರ್ವೈಶ್ವರ್ಯ ಸಂಪನ್ನನಾದ ಧರ್ಮಪತಿಃ=ಧರ್ಮನಿಯಾಮಕನಾದ ಕಲ್ಕಿಯು ಯದಾ=ಯಾವಾಗ ಅವತೀರ್ಣಃ=ಅವತರಿಸುವನೋ ತದಾ=ಆಗ ಕೃತಂ ಭವಿಷ್ಯತಿ=ಕೃತಯುಗ ಪ್ರಾರಂಭವಾಗುವದು. ಸತ್ವಮೂರ್ತೌ=ಬಲ ಜ್ಞಾನ ಸಮಾಹಾರ ರೂಪನಾದ ಭಗವತಿ ವಾಸುದೇವೇ=ಭಗವಂತನಾದ ಶ್ರೀಹರಿಯು ಹೃದಿ ಸ್ಥಿತೇ=ಮನಸ್ಸಿನಲ್ಲಿರುವಾಗ ಸಾತ್ವಿಕೀ ಪ್ರಜಾಸೂತಿಃ ಭವಿಷ್ಯತಿ=ಸಾತ್ವಿಕ ಪ್ರಜೆಗಳ ಉತ್ಪತ್ತಿಯಾಗುವದು.

*ಕೃತಯುಗ ಪ್ರವೃತ್ತಿಗೆ ಮುಖ್ಯಕಾರಣವಾದ ಕಲ್ಕಿಯ ಅವತಾರವನ್ನು ಹೇಳಿ ಅವಾಂತರ ಕಾರಣವನ್ನು ಹೇಳುವರು.*

**ಯದಾ ಚಂದ್ರಶ್ಚ ಸೂರ್ಯಶ್ಚ ತಥಾ ತಿಷ್ಯೇ ಬೃಹಸ್ಪತಿಃ ।**
**ಏಕರಾಶೌ ಸಮೇಷ್ಯಂತಿ ತದಾ ಭವತಿ ತತ್ ಕೃತಮ್ ॥ ೨೪ ॥**

ಯದಾ=ಯಾವಾಗ ಚಂದ್ರಃ=ಚಂದ್ರನು ಚ=ಮತ್ತು ಸೂರ್ಯಃ=ಸೂರ್ಯನು ಬೃಹಸ್ಪತಿಃ=ಬೃಹಸ್ಪತಿಯು ತಿಷ್ಯೇ=ಪುಷ್ಯನಕ್ಷತ್ರದಲ್ಲಿ ಏಕರಾಶೌ=ಒಂದೇ ಕರ್ಕಾಟಕ ರಾಶಿಯಲ್ಲಿ ಸಮೇಷ್ಯತಿ=ಒಟ್ಟಿಗೆ ಪ್ರವೇಶಿಸುವರೋ ತದಾ=ಆಗ ತತ್ಕೃತಂ ಭವತಿ=ಅದು ಕೃತಯುಗವಾಗುವದು.

**ವಿಶೇಷ-** ಯದ್ಯಪಿ ಪ್ರತಿ ಹನ್ನೆರಡು ವರ್ಷಕ್ಕೆ ಒಂದು ಸಲ ಸೂರ್ಯ ಚಂದ್ರ ಬೃಹಸ್ಪತಿಯಿರುವಾಗ ಎರಡು ಮೂರು ಅಮಾವಾಸ್ಯಗಳಲ್ಲಿ ಸೂರ್ಯ ಚಂದ್ರ ಬೃಹಸ್ಪತಿ ಈ ಮೂವರ ಸಮಾವೇಶವು ಪುಷ್ಯನಕ್ಷತ್ರದಲ್ಲಿ ಆಗುವದು ಎಂದು ಜ್ಯೋತಿಷ್ಕರು ಹೇಳುವರು. ಅದು ಕೃತಯುಗವಾಗಲಿ ಎಂದು ಹೇಳಲು ಬರುವುದಿಲ್ಲ. ಇಲ್ಲಿ **ಸಮೇಷ್ಯತಿ** ಎಂದು ಹೇಳಿದ್ದರಿಂದ ಸಹ ಪ್ರವೇಶವು ಅಭಿಪ್ರೇತವಾಗಿದೆ. ಅವರು ಒಟ್ಟಾದಾಗಲೆಲ್ಲ ಕೃತಯುಗವಾಗುವುದಿಲ್ಲ. ಹನ್ನೆರಡು ವರ್ಷಕ್ಕೆ ಒಂದೆಡೆ ಸೇರಿದರೂ ಏಕಕಾಲಕ್ಕೆ ಪ್ರವೇಶವಿಲ್ಲ ಬೃಹಸ್ಪತಿಯು ಕರ್ಕಾಟಕದಲ್ಲಿ ಮುಂಚೆಯೇ ಇರುವಾಗ ಚಂದ್ರ ಸೂರ್ಯರು ಪುಷ್ಯ ನಕ್ಷತ್ರದಲ್ಲಿ ಸೇರುವರು ಅಷ್ಟೇ. ಕಾರಣ ಅತಿ ಪ್ರಸಂಗವಿಲ್ಲ

**ಯೇಽತೀತಾ ವರ್ತಮಾನಾ ಯೇ ಯೇ ಭವಿಷ್ಯಂತಿ ಪಾರ್ಥಿವಾಃ ।**
**ತೇತ ಉದ್ದೇಶತಃ ಪ್ರೋಕ್ತಾ ವಂಶಜಾ ಸೂರ್ಯಸೋಮಯೋಃ ॥ ೨೫ ॥**

ಯೇ=ಯಾರು ಅತೀತಾಃ=ಹಿಂದೆ ಆಗಿ ಹೋದರೋ ಯೇ ವರ್ತಮಾನಾಃ= ಯಾರು ಈಗಿರುವರೋ ಯೇ ಪಾರ್ಥಿವಾಃ ಭವಿಷ್ಯಂತಿ=ಯಾರು ಮುಂದೆ ರಾಜರಾಗುವರೋ ತೇ ತೇ=ಆ ಎಲ್ಲರೂ ಸೂರ್ಯಸೋಮಯೋಃ ವಂಶಜಾಃ= ಸೂರ್ಯವಂಶ ಮತ್ತು ಚಂದ್ರ ವಂಶದಲ್ಲಿ ಜನಿಸಿದವರು ಉದ್ದೇಶತಃ ಪ್ರೋಕ್ತಾಃ=ನಾಮ ನಿರ್ದೇಶ ಮಾಡಿ ಸಂಕ್ಷೇಪವಾಗಿ ಹೇಳಲ್ಪಡುವರು.

**ಆರಭ್ಯ ಭವತೋ ಜನ್ಮ ಯಾವನ್ನಂದಾಭಿಷೇಚನಮ್ ।**
**ಏತದ್ವರ್ಷಸಹಸ್ರಂ ತು ಶತಂ ಪಂಚದಶೋತ್ತರಮ್ ॥ ೨೬ ॥**

ಪರೀಕ್ಷಿತನೇ ಭವತಃ=ನಿನ್ನ ಜನ್ಮಆರಭ್ಯ=ಹುಟ್ಟಿನಿಂದ ಆರಂಭಮಾಡಿ ಯಾವನ್ನಂದಾ-ಭಿಷೇಚನಂ=ನಂದನ ಪಟ್ಟಾಭಿಷೇಕವಾಗುವವರೆಗೆ ಪಂಚದಶೋತ್ತರಂ ಏತದ್ವರ್ಷ ಸಹಸ್ರಂ=ಸಾವಿರದ ನೂರಾ ಹದಿನೈದು ವರ್ಷಗಳು ಆದವು. ಇದು ಒಂದು ಯಾವದೋ ವಿವಕ್ಷೆಯಿಂದ ಅವಾಂತರ ಸಂಖ್ಯೆ ಹೇಳಿರುವರು. ಪರೀಕ್ಷಿಸಿದರೆ ಪರಿಕ್ಷಿತ್ ಮತ್ತು ನಂದರ ನಡುವಣ ಕಾಲ ಮತ್ತು ಮಾರ್ಜಾಲನನ್ನು ಹಿಡಿದು ರಿಪುಂಜಯನ

ವರೆಗೆ ಒಂದು ಸಾವಿರ ವರ್ಷಸಂಪೂರ್ತಿ ಆಗುವದು. ಆ ಸಮಯದಲ್ಲಿ ಒಟ್ಟು ಇಪ್ಪತ್ತು ಜನ ರಾಜರು ಆಗುವರು. 'ನಂದಾ ಸಂವತ್ಸರಸಹಸ್ರಂ ಭೋಕ್ಷ್ಯಂತಿ' ಎಂದು ನಂತರ 'ಪ್ರದ್ಯೋತನಾ ಅಷ್ಟ ತ್ರಿಂಶಚ್ಛತಂ' 'ಶೈಶುನಾಗಶ್ಚ ಷಷ್ಟ್ಯುತ್ತರಶತತ್ರಯಂ ಭೋಕ್ಷ್ಯಂತಿ' ಎಂದು ಇದೇ ಸ್ಕಂಧದ ಮೊದಲನೆಯ ಅಧ್ಯಾಯದಲ್ಲಿ ಬಂದಿದೆ.

*ಆ ಕಾಲವನ್ನು ಹೇಗೆ ತಿಳಿಯುವುದು ಎಂದು ಹೇಳುವರು.*

**ಸಪ್ತರ್ಷೀಣಾಂ ತು ಯೌ ಪೂರ್ವೌ ದೃಶ್ಯೇತೇ ಉದಿತೌ ದಿವಿ ।**
**ತಯೋಸ್ತು ಮಧ್ಯೇ ನಕ್ಷತ್ರಂ ದೃಶ್ಯತೇ ಯತ್ ಸಮಂ ನಿಶಿ ॥ ೨೭ ॥**

ಪತ್ನಿಸಹಿತರಾದ ಸಪ್ತಋಷಿಗಳ ಮಂಡಲವು ಪೂರ್ವಾಭಿಮುಖವಾಗಿ ಒಂದು ಬಂಡಿಯ ಆಕಾರದಲ್ಲಿರುತ್ತದೆ. ಅದರ ಉತ್ತರದಲ್ಲಿ ಮರೀಚಿಯು, ಅವರ ಹಿಂದೆ ಸ್ವಲ್ಪ ಬಾಗಿದ ನೋಗದ ಆಕಾರದಲ್ಲಿ ಅರುಂಧತಿ ಸಹಿತರಾದ ವಶಿಷ್ಠರು, ಅವರ ಹಿಂದೆ ಸ್ವಲ್ಪ ಎತ್ತರದಲ್ಲಿ ಮೂಲಸ್ಥಾನೀಯರಾದ ಅಂಗೀರಸರು, ನಂತರ ನಾಲ್ಕು ನಕ್ಷತ್ರಗಳು ಈಶಾನ್ಯಕ್ಕೆ ಅತ್ರಿಯು, ಅವನ ದಕ್ಷಿಣಕ್ಕೆ ಪುಲಸ್ತ್ಯರು, ಪುಲಸ್ತ್ಯರ ಪಶ್ಚಿಮಕ್ಕೆ ಪುಲಹರು, ಪುಲಹರ ಉತ್ತರಕ್ಕೆ ಕ್ರತು, ಹೀಗೆ ಇರುವದು. ಇವರುಗಳಲ್ಲಿ ಸಪ್ತಋಷೀಣಾಂ= ಸಪ್ತಋಷಿಗಳ ಮಧ್ಯದಲ್ಲಿ ಉದಿತೌ ಯೌ ಪೂರ್ವೌ=ಉದಯಿಸುವಾಗ ಮೊದಲು ಉದಯಿಸಿರುವರೋ (ಆ ಪುಲಹ ಕ್ರತುಗಳು) ತಯೋಃ=ಅವರ ಮಧ್ಯದಲ್ಲಿ ಯತ್=ಅಶ್ವಿನ್ಯಾದಿಗಳಲ್ಲಿ ಯಾವದು ಸಮಂ=ಸಮದೇಶದಲ್ಲಿ ಇರುವ ಒಂದು ನಕ್ಷತ್ರಂ=ನಕ್ಷತ್ರವು ನಿಶಿ=ರಾತ್ರಿಯಲ್ಲಿ ದೃಶ್ಯತೇ=ಕಾಣುವದೋ.

**ತೇನೈತೇ ಋಷಯೋ ಯುಕ್ತಾಸ್ತಿಷ್ಠಂತ್ಯಬ್ದ ಶತಂ ನೃಣಾಮ್ ।**
**ತೇ ತ್ವದೀಯೇ ದ್ವಿಜಾ ಕಾಲೇ ಅಧುನಾ ಚಾಶ್ರಿತಾಮಘಾಮ್ ॥ ೨೮ ॥**

ತೇನ=ಆ ನಕ್ಷತ್ರದಿಂದ ಏತೇ ಋಷಯಃ=ಈ ಋಷಿಗಳು ಯುಕ್ತಾಃ ತಿಷ್ಠಂತಿ= ಕೂಡಿರುವರು ಆಗ ನೃಣಾಂ ಅಬ್ದಶತಂ ಭವಿಷ್ಯತಿ=ಮನುಷ್ಯರ ಒಂದು ನೂರು ವರ್ಷವಾಗುವದು. ತೇ ದ್ವಿಜಾಃ=ಆ ಋಷಿಗಳು ತ್ವದೀಯೇ ಕಾಲೇ=ನಿನ್ನ ಆಳ್ವಿಕೆಯ ಕಾಲದಲ್ಲಿ ಅಧುನಾ=ಈಗ ಮಘಾಂ ಆಶ್ರಿತಾಃ=ಮಘಾ ನಕ್ಷತ್ರವನ್ನಾಶ್ರಯಿಸಿರುವರು.

**ವಿಷ್ಣೋರ್ಭಗವತೋ ಭಾಗಃ ಕೃಷ್ಣಾಖ್ಯೋಽಸೌ ದಿವಂ ಗತಃ ।**
**ತದಾಽವಿಶತ್ ಕಲಿರ್ಲೋಕಂ ಪಾಪೇ ಯದ್ ರಮತೇ ಜನಃ ॥ ೨೯ ॥**

ಇವರು ಮಘಾನಕ್ಷತ್ರವನ್ನಾಶ್ರಯಿಸಿರುವಾಗ ಭಗವತಃ=ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣೋಃ=ವಿಷ್ಣುವಿನ ಕೃಷ್ಣಾಖ್ಯಃ=ಕೃಷ್ಣಕೇಶಾವತಾರನಾದ ಶ್ರೀಕೃಷ್ಣನೆಂಬುವನು ಪರಂಧಾಮಕ್ಕೆ ತೆರಳಿದನು. ತದಾ=ಆಗ ಕಲಿಃ=ಕಲಿಯು ಲೋಕಂ ಆವಿಶತ್=ಜಗತ್ತಿನಲ್ಲಿ ಪ್ರವೇಶಿಸಿದನು. ಯತ್ಪಾಪೇ ಜನಾ ರಮತೇ=ಜನರು ಪಾಪದಲ್ಲಿಯೇ ಆನಂದಿಸುವರು.

**ವಿಶೇಷ-**ಈಗಿನ್ನು ಸಂಧಿಕಾಲ ಅದು ಹೇಗೆ ಈಗಲೇ ಕಲಿಯ ಪ್ರವೇಶ ಎಂದರೆ ನಿಜ. ಭಗವಂತನ ಶಕ್ತಿಯಿಂದ ಸಮರ್ಥವಾದ ನಮ್ಮ ಶಕ್ತಿಗಳು ಇದ್ದರೂ ಇಲ್ಲದಿದ್ದಂತೆಯೇ ಆದ್ದರಿಂದ ಕಲಿಪ್ರವೇಶ ಆಗಬಹುದು ಎಂದು ಹೇಳುವರು.

**ಯಾವತ್ಸಪಾದಪದ್ಮಾಭ್ಯಾಂ ಸ್ಪೃಶನ್ನಾಸ್ತೇ ರಮಾಪತಿಃ ।**
**ತಾವತ್ ಕಲಿರ್ವೈ ಪೃಥಿವೀಂ ಪರಾಕ್ರಾಂತುಂ ನ ಚಾಶಕತ್ ॥ ೩೦ ॥**

ಸಃ ರಮಾಪತಿಃ=ಶ್ರೀ ಕೃಷ್ಣನು ಯಾವತ್=ಎಲ್ಲಿಯ ವರೆಗೆ ಪಾದಪದ್ಮಾಭ್ಯಾಂ=ಪಾದ ಕಮಲಗಳಿಂದ ಪೃಥಿವೀಂ=ಭೂಮಿಯನ್ನು ಸ್ಪೃಶನ್ನಾಸ್ತೇ=ತುಳಿಯುತ್ತ ಇರುವನೋ ತಾವತ್=ಅಲ್ಲಿವರೆಗೆ ಕಲಿಃ ಪರಾಕ್ರಾಂತುಂ ನ ಅಶಕತ್ ಚ=ಕಲಿಯು ತನ್ನ ಸಾಮರ್ಥ್ಯವನ್ನು ತೋರಿಸಲು ಸಮರ್ಥನಾಗಲಿಲ್ಲ.

**ಯದಾ ದೇವರ್ಷಯ ಸಪ್ತ ಮಘಾಸು ವಿಚರಂತಿ ಹಿ ।**
**ತದಾ ಪ್ರವೃತ್ತಸ್ತು ಕಲಿರ್ದ್ವಾದಶಾಬ್ದಶತಾತ್ಮಕಃ ॥ ೩೧ ॥**

ಯದಾ=ಯಾವಾಗ ಸಪ್ತದೇವರ್ಷಯಃ=ಏಳು ದೇವರ್ಷಿಗಳು ಮಘಾಸು ವಿಚರಂತಿ=ಮಘಾನಕ್ಷತ್ರದಲ್ಲಿ ಸಂಚರಿಸುವರೋ ತದಾ=ಆಗ ದ್ವಾದಶಾಬ್ದಶತಾತ್ಮಕಃ= ಹನ್ನೆರಡು ವರ್ಷಾತ್ಮಕವಾದ ಕಲಿಃ=ಕಲಿಯುಗವು ಪ್ರವೃತ್ತಃ=ನಡೆಯಿತು. ಪೂರ್ವಾಪರ-ಸಂಧಿಕಾಲ ಸೇರಿ ಹನ್ನೆರಡುನೂರಾಗುವದು. ದೇವತಾ ಮಾನದ ವರ್ಷಗಳನ್ನು ಸ್ವೀಕರಿಸಬೇಕು.

**ಯದಾ ಮಘಾಭ್ಯೋ ಯಾಸ್ಯಂತಿ ಪೂರ್ವಾಷಾಢಾಂ ಮಹರ್ಷಯಃ ।**
**ತದಾನಂದಾತ್ ಪ್ರಭೃತ್ಯೇಷ ಕಲಿರ್ವೃದ್ಧಿಂ ಗಮಿಷ್ಯತಿ ॥ ೩೨ ॥**

ಯದಾ=ಯಾವಾಗ ಮಘಾಭ್ಯಃ=ಮಘಾನಕ್ಷತ್ರಗಳಿಂದ ಮಹರ್ಷಯಃ=ದೇವ ಋಷಿಗಳು ಪೂರ್ವಾಷಾಢಾಂ ಯಾಸ್ಯಂತಿ=ಪೂರ್ವಾಷಾಢಕ್ಕೆ ಹೋಗುವರೋ ತದಾ=ಆಗ ಏಷಃ ಕಲಿಃ=ಈ ಕಲಿಯು ನಂದಾತ್ ಪ್ರಭೃತಿ=ನಂದ ಮೊದಲಾದ ರಾಜರಿಂದ ವೃದ್ಧಿಂ ಗಮಿಷ್ಯತಿ=ವೃದ್ಧಿಯನ್ನು ಹೊಂದುವನು. ಅಂದರೆ ನಂದಾದಿ

ರಾಜರು ಕ್ರಮವಾಗಿ ತಮ್ಮ ಪರಾಕ್ರಮ ತೋರುವವರು.(ಕಲಿಪ್ರವೇಶ ಅವರಲ್ಲಿದ್ದ ಕಾರಣ ಅದೇ ಆ ಕಲಿಯ ವೃದ್ದಿಯಿದ್ದಂತೆ)

**ಯಸ್ಮಿನ್ ಕೃಷ್ಣೋ ದಿವಂ ಯಾತಃ ತಸ್ಮಿನ್ನೇವ ತದಾಹನಿ ।**
**ಪ್ರತಿಪನ್ನಂ ಕಲಿಯುಗಮಿತಿ ಪ್ರಾಹುಃ ಪುರಾವಿದಃ ॥ ೩೩ ॥**

ಯಸ್ಮಿನ್ ಅಹನಿ=ಯಾವ ದಿನದಲ್ಲಿ ಕೃಷ್ಣಃ=ಶ್ರೀಕೃಷ್ಣನು ದಿವಂ ಯಾತಃ=ವೈಕುಂಠಕ್ಕೆ ತೆರಳಿದನೋ ತಸ್ಮಿನ್ ಅಹನಿ ತದಾ ಏವ=ಅದೇ ದಿವಸ ಅದೇ ಕ್ಷಣದಲ್ಲಿಯೇ ಕಲಿಯುಗಂ ಪ್ರತಿಪನ್ನಂ=ಕಲಿಯುಗವು ತನ್ನ ಕಾರ್ಯವನ್ನಾರಂಭಿಸಿತು ಇತಿ=ಎಂದು ಪುರಾವಿದಃ=ಪ್ರಾಚೀನಜ್ಞಾನಿಗಳು ಪ್ರಾಹುಃ=ಹೇಳುವರು.

**ದಿವ್ಯಾಬ್ದಾನಾಂ ಸಹಸ್ರೇ ತು ಪ್ರತಿಯಾತೇ ಪುನಃ ಕೃತಮ್ ।**
**ಭವಿಷ್ಯತಿ ಯದಾ ನೃಣಾಂ ಮನ ಆತ್ಮ ಪ್ರಕಾಶಕಮ್ ॥ ೩೪ ॥**

ದಿವ್ಯಾಬ್ದಾನಾಂ=ದೇವತೆಗಳ ಸಂಬಂಧಿಯಾದ ವರ್ಷಗಳ ಸಹಸ್ರೇ=ಒಂದು ಸಾವಿರ ವರ್ಷವು ಪ್ರತಿಯಾತೇ=ಹೋಗುತ್ತಿರಲು ಪುನಃ=ಮತ್ತೆ ಯದಾ=ಯಾವ ಯುಗದಲ್ಲಿ ನೃಣಾಂ ಮನಃ=ಸಜ್ಜನರ ಮನಸ್ಸು ಆತ್ಮಪ್ರಕಾಶಂ=ತನ್ನ ಮತ್ತು ಪರಮಾತ್ಮನನ್ನು ತಿಳಿಸಿಕೊಡುವದೋ ಪರಾಪರತತ್ತ್ವವಿವೇಕಜನಕವಾಗುವದೋ ತತ್=ಅಂಥ ಕೃತಂ=ಕೃತಯುಗವು ಭವಿಷ್ಯತಿ=ಪ್ರಾರಂಭವಾಗುವದು.

**ಇತ್ಯೇವಂ ಮಾನವೋ ವಂಶೋ ಯಥಾ ಸಂಖ್ಯಾಯತೇ ಭುವಿ ।**
**ತಥಾ ವಿಟ್‌ಶೂದ್ರವಿಪ್ರಾಣಾಂ ವಂಶಾ ಜ್ಞೇಯಾ ಯುಗೇ ಯುಗೇ ॥ ೩೫ ॥**

ಇತ್ಯೇವಂ=ಸಮಾಪ್ತಿಪರ್ಯಂತ ಇರುವ ಮಾನವಃ ವಂಶಃ=ವೈವಸ್ವತ ಮನು ಸಂಬಂಧಿಯಾದ ವಂಶವು ಭುವಿ=ಭೂಮಿಯಲ್ಲಿ ಯಥಾ=ಹೇಗೆ ಸಂಖ್ಯಾಯತೇ= ಹೇಳಲ್ಪಡುವದೋ ತಥಾ=ಹಾಗೆಯೇ ವಿಟ್‌ಶೂದ್ರವಿಪ್ರಾಣಾಂ=ವೈಶ್ಯ-ಶೂದ್ರ- ಬ್ರಾಹ್ಮಣರ ವಂಶಾಃ=ವಂಶಗಳು ಯುಗೇ ಯುಗೇ=ಪ್ರತಿಯುಗದಲ್ಲಿಯೂ ಜ್ಞೇಯಾಃ= ತಿಳಿಯಲ್ಪಡಬೇಕು.

**ಏತೇಷಾಂ ನಾಮಲಿಂಗಾನಾಂ ಪುರುಷಾಣಾಂ ಮಹಾತ್ಮನಾಮ್ ।**
**ಕಥಾಮಾತ್ರಾವಶಿಷ್ಟಾನಾಂ ಕೀರ್ತಿರೇವ ಸ್ಥಿತಾ ಭುವಿ ॥ ೩೬ ॥**

ಏತೇಷಾಂ=ಈ ಮಹಾತ್ಮನಾಂ=ಮನಸ್ವಿಗಳಾದ ಕಥಾಮಾತ್ರಾವಶಿಷ್ಟಾನಾಂ=ಚರಿತ್ರರೂಪರಾಗಿಯೇ ಉಳಿದಿರುವ ನಾಮಲಿಂಗಾನಾಂ=ಹೆಸರುಗಳು ಕುರುಹುಗಳು ಇವುಗಳಿಂದ ಕೂಡಿದವರ ಕೀರ್ತಿಃ ಏವ=ಕೀರ್ತಿಯೊಂದೇ ಭುವಿ=ಭೂಮಿಯಲ್ಲಿ ಅವಸ್ಥಿತಾ=ಉಳಿಯಿತು.

**ವಿಶೇಷ-** ನಾಮಗಳ ಮತ್ತು ಲಿಂಗಗಳ ಸ್ಥಿರತೆಗಿಂತ ಕೀರ್ತಿಯ ಸ್ಥಿರತೆ ವಿಪುಲವಾದ ಕಾರಣ 'ಕೀರ್ತಿರೇವಸ್ಥಿಥಾ' ಎಂದಿದ್ದಾರೆ.

*ಕೃತಯುಗದಲ್ಲಿ ಧರ್ಮಪ್ರತಿಷ್ಠಾಪಕರಾದರೆಂದು ಹೇಳುವರು.*

**ದೇವಾಪಿಃ ಶಂತನೋ ಭ್ರಾತಾ ಮರುಶ್ಚೇಕ್ಷ್ವಾಕುವಂಶಜಃ ।**
**ಕಲಾಪಗ್ರಾಮ ಆಸಾತೇ ಮಹಾಯೋಗಬಲಾನ್ವಿತೌ ॥ ೩೭ ॥**

ಶಂತನೋಃ=ಶಂತನು ಚಕ್ರವರ್ತಿಯ ಭ್ರಾತಾ=ಅಣ್ಣನಾದ ದೇವಾಪಿಃ=ದೇವಾಪಿಯು ಚ=ಮತ್ತು ಇಕ್ಷ್ವಾಕುವಂಶಜಃ=ಇಕ್ಷ್ವಾಕುವಂಶದಲ್ಲಿ ಹುಟ್ಟಿದ ಮರುಃ=ಮರು ಎಂಬುವನು ಇವರೀರ್ವರು ಕಲಾಪಗ್ರಾಮೇ=ಬದರಿಯ ಹತ್ತಿರದ ಕಲಾಪ ಎಂಬ ಊರಿನಲ್ಲಿ ಮಹಾಯೋಗಬಲಾನ್ವಿತೌ ಆಸಾತೇ=ಮಹತ್ತರವಾದ ಜ್ಞಾನಬಲಗಳಿಂದ ಅಣಿಮಾದ್ಯಷ್ಟೈಶ್ವರ್ಯದಿಂದ ಕೂಡಿದವರಾಗಿ ಇರುವರು. ಇದರಿಂದ ಇಲ್ಲಿಯವರೆಗೆ ಅವರಿರಲು ಯೋಗ ಸಾಮರ್ಥ್ಯವೇ ಕಾರಣವೆಂದು ತಿಳಿಯುವದು.

**ತಾವಿಹೈತ್ಯ ಕಲೇರಂತೇ ವಾಸುದೇವಾನುಶಿಕ್ಷಿತೌ ।**
**ವರ್ಣಾಶ್ರಮಯುತಂ ಧರ್ಮಂ ಪೂರ್ವವತ್ ಪ್ರಥಯಿಷ್ಯತಃ ॥ ೩೮ ॥**

ಕಲೇಃ ಅಂತೇ=ಕಲಿಯುಗದ ಕೊನೆಗೆ ತೌ=ಅವರಿಬ್ಬರು ಇಹ ಏತ್ಯ=ಇಲ್ಲಿ ಬಂದು ವಾಸುದೇವಾನುಶಿಕ್ಷಿತೌ=ಶ್ರೀಕೃಷ್ಣನಿಂದ ಜ್ಞಾನವನ್ನು ಪಡೆದವರು. ವರ್ಣಾಶ್ರಮಯುತಂ ಧರ್ಮಂ=ಬ್ರಾಹ್ಮಣಾದಿವರ್ಣ ಬ್ರಹ್ಮಚರ್ಯಾದಿ ಆಶ್ರಮಗಳಿಂದ ಕೂಡಿದ ಧರ್ಮಂ=ಧರ್ಮವನ್ನು ಪೂರ್ವವತ್=ಹಿಂದಿನ ಕೃತಯುಗದಲ್ಲಿ ಹೇಗಿತ್ತೋ ಹಾಗೆ ಪ್ರಥಯಿಷ್ಯತಃ=ವಿಸ್ತಾರಗೊಳಿಸುವರು.

**ಕೃತಂ ತ್ರೇತಾ ದ್ವಾಪರಂ ಚ ಕಲಿಶ್ಚೇತಿ ಚತುರ್ಯುಗಮ್ ।**
**ಅನೇನ ಕ್ರಮಯೋಗೇನ ಭುವಿ ಪ್ರಾಣಿಷು ವರ್ತತೇ ॥ ೩೯ ॥**

ಕೃತಂ=ಕೃತಯುಗವು ತ್ರೇತಾ=ತ್ರೇತಾಯುಗವು ದ್ವಾಪರಂ=ದ್ವಾಪರವು ಮತ್ತು ಕಲಿ ಇತಿ=ಕಲಿಯುಗ ಎಂಬ ಚತುರ್ಯುಗಂ=ನಾಲ್ಕು ಸಂಖ್ಯಾಕವಾದ ಯುಗವು ಅನೇನ ಕ್ರಮಯೋಗೇ=ಹೇಳಿದ ಕ್ರಮದಿಂದ ಭುವಿ=ಭೂಮಿಯಲ್ಲಿ ಪ್ರಾಣಿಷು=ಪ್ರಾಣಿಗಳಲ್ಲಿ ವರ್ತತೇ=ಇರುವದು.

*ವೈರಾಗ್ಯವನ್ನು ಹುಟ್ಟಿಸಿ ಭಕ್ತಿಗೆ ಕಾರಣವಾದುದರಿಂದ ಈ ರಾಜರ ಕಥೆಯನ್ನು ಹೇಳುವುದು ಎಂದು ಆರ್ಥಿಕವಾಗಿ ಹೇಳಿದ್ದನ್ನೇ ಶಬ್ದದಿಂದಲೂ ಹೇಳುತ್ತ ಉಪಸಂಹರಿಸುವರು.*

**ರಾಜನ್ನೇತೇ ಮಯಾ ಪ್ರೋಕ್ತಾ ನರದೇವಾಸ್ತಥಾಪರೇ ।**
**ಭೂಮೌ ಮಮತ್ವಂ ಕೃತ್ವಾಽಂತೇ ಹಿತ್ವೇಮಾಂ ನಿಧನಂ ಗತಾಃ ॥ ೪೦ ॥**

ರಾಜನ್=ಪರೀಕ್ಷಿತನೇ ಮಯಾ=ನನ್ನಿಂದ ಪ್ರೋಕ್ತಾಃ=ಹೇಳಲ್ಪಟ್ಟ ತಥಾ=ಹಾಗೂ ಅಪರೇ=ಬೇರೆ ನರದೇವಾಃ=ರಾಜರುಗಳು ಭೂಮೌ=ಭೂಮಿಯಲ್ಲಿ ಮಮತ್ವಂ ಕೃತ್ವಾ=ನನ್ನದೆಂಬ ಅಭಿಮಾನವನ್ನು ಮಾಡಿ ಏತೇ=ಇವರು ಅಂತೇ=ನಾಶಸಮಯದಲ್ಲಿ ಇಮಾಂ =ಈ ಭೂಮಿಯನ್ನು ಹಿತ್ವಾ=ಇಲ್ಲಿಯೇ ಬಿಟ್ಟು ನಿಧನಂ ಗತಾಃ=ಮರಣಹೊಂದಿದರು.

**ಕೃಮಿವಿಡ್‌ಭಸ್ಮಸಂಜ್ಞಾಂತೇ ರಾಜನಾಮ್ನೋಽಪಿ ಯಸ್ಯ ಚ ।**
**ಭೂತಧ್ರುಙ್ಮನುತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥ ೪೧ ॥**

ರಾಜನಾಮ್ನೋಽಪಿ=ರಾಜನೆಂದು ಕರೆಸಿಕೊಳ್ಳುವ ಯಸ್ಯ=ಯಾವ ಪುರುಷ ಶರೀರಕ್ಕೆ ಅಂತೇ=ನಾಶವಾದ ಮೇಲೆ ಕೃಮಿವಿಡ್‌ಭಸ್ಮಸಂಜ್ಞಾಂತೇ=ಹುಳು,ಮಣ್ಣು,ಬೂದಿ ಎಂಬ ಹೆಸರು ಬರುವದೋ ಅಂತಹ ಶರೀರಕ್ಕಾಗಿ ಭೂತಧ್ರುಕ್=ಪ್ರಾಣಿಗಳ ದ್ರೋಹ ಮಾಡುವವನು ಯತಃ=ಯಾವ ಭೂತದ್ರೋಹದಿಂದ ನಿರಯಃ=ನರಕವಾಗುವದು. ಅಂತಹ ಪುರುಷನು ಸ್ವಾರ್ಥಂ ಕಿಂ ಮನುತೇ=ಯಾವ ಭೂತ ದ್ರೋಹದಿಂದ ನರಕವಾಗುವದನ್ನು ತಿಳಿದಿರುವನೇನು ತಿಳಿದಿಲ್ಲವೆಂದೇ ಅರ್ಥ.

*ರಾಜರ ಮಮತೆಯ ವಿಚಾರವನ್ನು ತಿಳಿಸಿರುವರು.*

**ಕಥಂ ಸೇಯಮಖಂಡಾ ಭೂಃ ಪೂರ್ವೈರ್ಮತ್ಪುರುಷೈರ್ಧೃತಾ ।**
**ಮತ್ಪುತ್ರಸ್ಯ ಚ ಪೌತ್ರಸ್ಯ ಮತ್ಪೂರ್ವಾ ವಂಶಜಸ್ಯ ಚ ॥ ೪೨ ॥**

ಇಯಂ ಭೂಃ=ಯಾವ ಈ ಪ್ರಾಣಿಗಳಿಗೆ ಆಧಾರವಾದ ಭೂಮಿಯು ಮತ್ಪೂರ್ವೈಃ ಪುರುಷೈಃ ಧೃತಾ=ನನ್ನ ಪೂರ್ವಜರಿಂದ ರಕ್ಷಿಸಲ್ಪಡದಿರುವದಾಗಿ ಮಮ ಕಥಂ

ಸ್ಯಾತ್=ನನಗೆ ಹೇಗೆ ದೊರತೀತು ? ಮತ್ಪುತ್ರಸ್ಯ=ನನ್ನ ಮಗನಿಗೆ ಚ=ಮತ್ತು ನನ್ನ ಪೌತ್ರಸ್ಯ=ಮೊಮ್ಮಗನಿಗೆ ಮತ್ಪೂರ್ವಾ=ನಾನೇ ಮೊದಲಿಗನಾಗಿವುಳ್ಳ ಭೂಮಿಯು ವಂಶಜಸ್ಯ=ವಂಶದಲ್ಲಿ ಹುಟ್ಟಿದವರಿಗೂ ಕಥಂ ಸ್ಯಾತ್=ಹೇಗೆ ಬಂದಿತು ಎಂದು ವಿಚಾರ ಮಾಡುವನು.

**ವಿಶೇಷ-** ಇದರಲ್ಲಿ ಮಕ್ಕಳು ಮೊಮ್ಮಕ್ಕಳೂ ಆಗಬೇಕೆಂಬ ಆಶೆಯು ಒಳಗೊಂಡಿದೆ. ಮತ್, ಪೂಃ ವಾ, ವಂಶಜಸ್ಯ ಚ ಎಂದು ಪದ ವಿಭಾಗಮಾಡಿ ಮತ್-ಮತ್ತಃ=ನನ್ನಿಂದ ಪೂಃ=ಪಟ್ಟಣವು ವಂಶಜಸ್ಯ=ವಂಶಜನಿಗೆ (ಮಕ್ಕಳು-ಮೊಮ್ಮಕ್ಕಳಿಗೆ) ಕಥಂ ಸ್ಯಾತ್=ಹೇಗೆ ಬಂದೀತು ಹೀಗೂ ಅರ್ಥ ಮಾಡಬಹುದು.

**ತೇಜೋಽಬನ್ನಾತ್ಮಕಂ ಕಾಯಂ ಗೃಹೀತ್ವಾಽಽತ್ಮತಯಾ ಮುಧಾ ।**
**ಮಹೀಂ ಮಮತಯಾ ಚೋಭೌ ಹಿತ್ವಾಂತೇಽದರ್ಶನಂ ಗತಾಃ ॥ ೪೩ ॥**

ತೇಜೋಬನ್ನಾತ್ಮಕಂ=ಪೃಥಿವೀ ಜಲ ಅಗ್ನಿ ಎಂಬ ಭೂತತ್ರಯ ವಿಕಾರವಾದ ಕಾಯಂ=ದೇಹವನ್ನು ಮುಧಾ=ವ್ಯರ್ಥವಾಗಿ ಆತ್ಮತಯಾ ಗೃಹೀತ್ವಾ=ತಾನೇ ಎಂದು ತಿಳಿದು ಅಂದರೆ ಸ್ವಾಭಾವಿಕ ನಿತ್ಯವೆಂದು ತಿಳಿದು ಮಹೀಂ=ಭೂಮಿಯನ್ನು ಮಮತಯಾ ಗೃಹೀತ್ವಾ=ನನ್ನ ಅಧೀನವೆಂದು ತಿಳಿದು ಉಭೌ=ದೇಹ ಮತ್ತು ಭೂಮಿಯನ್ನು ಹಿತ್ವಾ=ತೊರೆದು ಅಂತೇ=ಕೊನೆಗೆ ಅದರ್ಶನಂ ಗತಾಃ=ಮರಣ ಹೊಂದುವರು.

**ಯೇ ಯೇ ಭೂಪತಯೋ ರಾಜನ್ ಭುಂಜತೇ ಭುವಮೋಜಸಾ ।**
**ಕಾಲೇನ ತೇ ಕೃತಾ ಸರ್ವೇ ಕಥಾಮಾತ್ರಾ ಕಥಾಸು ಚ ॥ ೪೪ ॥**

ಹೇ ರಾಜನ್=ಪರೀಕ್ಷಿತನೇ ಯೇ ಯೇ ಭೂಪತಯಃ=ಯಾವ ಯಾವ ರಾಜರು ಓಜಸಾ=ತಮ್ಮ ಸಾಮರ್ಥ್ಯದಿಂದ ಭುವಂ ಭುಂಜತೇ=ಭೂಮಿಯನ್ನಾಳುವರೋ ತೇ ಸರ್ವೇ=ಅವರೆಲ್ಲರೂ ಕಥಾಸು=ಪುರಾಣಾದಿಗಳಲ್ಲಿ ಕಥಾಮಾತ್ರಾಃ ಕೃತಾ=ಕೇವಲ ಕಥೆಯಾಗಿ ಮಾಡಲ್ಪಟ್ಟರು.

**ವಿಶೇಷ-** ಕಥೆ ಮಾತ್ರ ಉಳಿಯಿತು. ಅವರು ಉಳಿಯಲಿಲ್ಲ ಎಂದರ್ಥ. ಸಮೀಚೀನ ಸಾಧನವಿಲ್ಲದೇ ಶ್ರೀಹರಿಯಲ್ಲಿ ನಮ್ರರಾಗದಿರುವಾಗ ಕಥಾಮಾತ್ರಕೃತಾಃ ಅಂತರ್ಣೀತ ಣಿಜಂತ ಕಾರಿತಾ ಹಿಂಸಿತಾಃ ಎಂದರ್ಥ. 'ಕೃತಂ ಯುಗೇ ಚ ಪರ್ಯಾಪ್ತೇ ವಿಹಿತೇ ಹಿಂಸಿತೇ ಫಲೇ' ಎಂದು ವಿಶ್ವ.

॥ ಇಲ್ಲಿಗೆ ಎರಡನೇ ಅಧ್ಯಾಯವು ಸಮಾಪ್ತವಾಯಿತು ॥

## ಅಥ ತೃತೀಯೋಽಧ್ಯಾಯಃ

ಸಾರಾಂಶ

ನಾಲ್ಕು ಯುಗಗಳಿಗೆ ಸಂಬಂಧಿಸಿದ ಧರ್ಮಗಳನ್ನು ಹಾಗು ಕಲಿದೋಷ ಪರಿಹಾರೋಪಾಯಗಳನ್ನು ಈ ಅಧ್ಯಾಯದಲ್ಲಿ ತಿಳಿಸುತ್ತಾರೆ.

ಭೂಮಿ ತನ್ನನ್ನು ಆಳಲು ಹಾತೊರೆಯುವ ರಾಜರನ್ನು ನೋಡಿ ಅಪಹಾಸಮಾಡುತ್ತಾಳೆ. ಈ ರಾಜರೆಲ್ಲ ಎಂತಹ ಮೂರ್ಖರು ಮೃತ್ಯುವಿನ ಕೈಯಲ್ಲಿ ಆಟದ ಗೊಂಬೆಯಂತಾಗಿ ಮರಣಪರಿಹಾರೋಪಾಯವನ್ನು ತಿಳಿಯದೇ ನನ್ನನ್ನು ಜಯಿಸಿ ರಾಜ್ಯವನ್ನು ಭೋಗಿಸಬೇಕೆಂದು ಯತ್ನಿಸುತ್ತಿದ್ದಾರೆ ಎಂದು. ತಾವು ಎಂದಾದರೂ ಒಂದು ದಿನ ಸಾಯಲೇಬೇಕು ಎಂಬುದು ಅವರಿಗೆ ತಿಳಿದಿದ್ದರೂ ನೀರಮೇಲಿನ ಗುಳ್ಳೆಯಂತೆ ಅಸ್ಥಿರವಾದ ಈ ದೇಹದ ಮೇಲೆ ಅತಿಯಾದ ಮಮತೆಯಿಂದ ಇದನ್ನು ಸ್ಥಿರವೆಂದು ವಿಶ್ವಾಸಮಾಡಿ ವ್ಯರ್ಥವಾಗಿ ಕಾಲಕಳೆದು ಮೋಸಹೋಗುತ್ತಾರೆ. ತಮ್ಮ ಅಧೀನರಾದ ಎಲ್ಲ ಪ್ರಜೆಗಳನ್ನು ನಮ್ಮ ಹತೋಟಿಯಲ್ಲಿಟ್ಟು ಕೊಳ್ಳುತ್ತೇವೆ ಎಂಬ ಆಶೋತ್ತರಗಳನ್ನು ಮನಸ್ಸಿನಲ್ಲಿಯೇ ಮಾಡುವರೇ ಹೊರತು ತಮ್ಮ ಬೆನ್ನ ಹಿಂದೆಯೇ ನುಂಗಲು ಹೆಡೆ ಎತ್ತಿ ನಿಂತಿರುವ ಘಟಸರ್ಪದಂತೆ ಇರುವ ಕಾಲಸರ್ಪವನ್ನು ಕಾಣಲಾರರು. ಮತ್ತೆ ಕೆಲವರ ಆಸೆಗೆ ಎಲ್ಲೆಯೇ ಇಲ್ಲ. ಇನ್ನಷ್ಟು ಬೇಕು ಮತ್ತಷ್ಟು ಬೇಕು ಎನ್ನುವ ಆಸೆಯಿಂದ ಒಂದು ದ್ವೀಪವಲ್ಲ ಸಮಗ್ರಭೂಮಂಡಲವನ್ನೇ ಕಬಳಿಸುವ ಪ್ರಯತ್ನವನ್ನು ಮಾಡುತ್ತಾರೆ. ಈ ಭೂಮಿಯ ಜಯದಿಂದ ಏನು ಪ್ರಯೋಜನ. ಆತ್ಮ ಜಯವನ್ನು ಸಂಪಾದಿಸದವ ಇಂದ್ರಿಯನಿಗ್ರಹಸಂಪನ್ನನಾಗಿದ್ದರೂ ಅದೆಲ್ಲವೂ ವ್ಯರ್ಥವೇ ಸರಿ. ಲೋಕದಲ್ಲಿ ಅತಿರಥ ಮಹಾರಥರು ಎನಿಸಿಕೊಂಡ ರಾಜಮಹಾರಾಜರು, ಮನುಗಳು ಅವರ ಮಕ್ಕಳೂ ಏಕಛತ್ರಾಧಿಪತಿಗಳಾಗಿ ಮೆರೆದರೂ

ಒಂದಲ್ಲ ಒಂದು ದಿನ ನಾವು ಈ ಭೂಮಿಯನ್ನು ಬಿಟ್ಟು ಹೋಗುವವರು ಎಂದು ನಂಬಿದ್ದರು. ಹಾಗೆಯೇ ನಡೆದರೂ ಕೂಡ. ಅಲ್ಪಬಲವುಳ್ಳ ಈ ಮೂರ್ಖರಾಜರು ನನ್ನನ್ನು ವಶಪಡಿಸಿಕೊಳ್ಳುತ್ತೇನೆ ಎಂದು ಪ್ರಯತ್ನಿಸುತ್ತಾರೆ ಎಂತಹ ಆಶ್ಚರ್ಯ. ಇಲ್ಲಿ ಅನೇಕ ರಾಜರ ಕಥೆಗಳನ್ನು ಹೇಳಲಾಗಿದೆ. ಈ ರಾಜರ ಕಥೆಗಳನ್ನು ಹೇಳುವ ಉದ್ದೇಶವಾದರೂ ಹೀಗಿದೆ ಎನ್ನುತ್ತಾರೆ ಶ್ರೀ ಶುಕಾಚಾರ್ಯರು. ಭಗವಂತನನ್ನು ಉದ್ದೇಶವಾಗಿಟ್ಟು ಕೊಂಡು ಜಗತ್ತಿನ ವಿಜ್ಞಾನವೈರಾಗ್ಯಗಳನ್ನು ಬೋಧಿಸುವ ಸಲುವಾಗಿ ರಾಜರ ಕಥೆಗಳನ್ನು ಹೇಳಿದ್ದೇ ಹೊರತು ಆ ರಾಜರ ಕಥೆಗಳೆಲ್ಲ ವೇದಗಳಿಗೆ ಮುಖ್ಯಾರ್ಥನಾದ ಭಗವಂತನ ಕಥೆಗೆ ಸಂಬಂಧ ಪಟ್ಟವುಗಳೆಂದಲ್ಲ. ಈ ಎಲ್ಲ ವೃತ್ತಾಂತಗಳು ವಾಗ್ವಿಲಾಸಕ್ಕೆ ಹೊರತು ಉತ್ತಮ ಪುರುಷಾರ್ಥವಾದ ಮೋಕ್ಷಸಾಧನವಲ್ಲ. ಆದ್ದರಿಂದ ರಾಜರ ಕಥೆಗಳನ್ನು ಕೇಳಿ ಮೈಮರೆಯುವುದಲ್ಲ. ಸರ್ವೋತ್ತಮನಾದ ಭಗವಂತನ ಗುಣಾನುಸಂಧಾನವೇ ಸಂಸಾರವೆಂಬ ಅಂಧಕೂಪವನ್ನು ಕಿತ್ತೊಗೆಯಲು ಮುಖ್ಯಕಾರಣ. ಅದಕ್ಕಾಗಿ ಆ ಭಗವಂತನ ಕಲ್ಯಾಣಗುಣಗಳಿಂದ ತುಂಬಿರುವ ಕಥೆಗಳನ್ನು ಕೇಳುತ್ತಿರಬೇಕು.

ಪರೀಕ್ಷಿತನು ಹನ್ನೆರಡನೆಯ ಸ್ಕಂಧದಲ್ಲಿ ಮಾಡಿದ ಪ್ರಧಾನವಾದ ಪ್ರಶ್ನೆ ಭಾಗವತದಲ್ಲಿ ಹೀಗೆ ಮೂಡಿ ಬಂದಿದೆ. ಶುಕಮುನಿಗಳೇ ಕಲಿಯುಗದಲ್ಲಿ ಜನರು ದಿನದಿನಕ್ಕೂ ಹೆಚ್ಚುತ್ತಿರುವ ಕಲಿದೋಷಗಳಿಂದ ಬಳಲುತ್ತಿದ್ದಾರೆ. ಹೀಗೆ ರಾಶಿ ರಾಶಿಯಾದ ಕಲಿದೋಷಗಳನ್ನು ಪರಿಹರಿಸಿಕೊಳ್ಳಲು ಉಪಾಯವೇನೆಂದು ತಿಳಿಸಬೇಕು. ಚತುರ್ಯುಗಗಳ ಸ್ವರೂಪ ಹಾಗು ಆಯಾ ಯುಗಗಳ ಧರ್ಮಗಳು ಅವಾಂತರ ಪ್ರಳಯ ಮಹಾಪ್ರಳಯ ಕಾಲಮಾನಗಳು ಕಾಲರೂಪಿಯಾದ ಭಗವಂತನ ಗಮನ ಪ್ರಕಾರವನ್ನೂ ತಿಳಿಸಬೇಕು. ಎಂದು ಪ್ರಾರ್ಥಿಸುತ್ತಾನೆ.

ಪರೀಕ್ಷಿತನೇ ಕೃತಯುಗದಲ್ಲಿ ಧರ್ಮಕ್ಕೆ ನಾಲ್ಕು ಪಾದಗಳಿರುತ್ತವೆ. ಸತ್ಯ ದಯೆ ತಪಸ್ಸು ದಾನ ಎಂಬುದೇ ಈ ನಾಲ್ಕು ಪಾದಗಳು. ಹೀಗೆ ಧರ್ಮವು ನಾಲ್ಕು ಪಾದಗಳಿಂದ ಆ ಕಾಲದ ಜನರಲ್ಲಿ ನೆಲೆಗೊಂಡಿರುತ್ತದೆ. ಈ ಯುಗದ ಜನರೆಲ್ಲ ನಿತ್ಯ ಸಂತುಷ್ಟರೂ ದಯಾವುಳ್ಳವರೂ ಸ್ನೇಹಜೀವಿಗಳು ಶಾಂತರೂ ಇಂದ್ರಿಯನಿಗ್ರಹ-ವುಳ್ಳವರೂ ಸುಖದುಃಖದ್ವಂದ್ವ ಸಹಿಷ್ಣುಗಳು ಯಥಾರ್ಥಜ್ಞಾನವುಳ್ಳವರು ಆಗಿರುವರು.

ತ್ರೇತಾಯುಗದಲ್ಲಿ ಧರ್ಮಾದಿನಾಲ್ಕು ಪಾದಗಳಲ್ಲಿ ನಾಲ್ಕನೇಯದಾದ ದಾನವೆಂಬ ಪಾದವು ಕ್ರಮೇಣ ನಶಿಸುತ್ತದೆ. ಹಾಗು ಅಧರ್ಮದ ನಾಲ್ಕು ಪಾದಗಳಾದ ಅಸತ್ಯ

ಹಿಂಸೆ ಅಸಂತೋಷ ಹಾಗು ಕಲಹವೆಂಬ ನಾಲ್ಕು ಪಾದಗಳು ಪ್ರಭಾವ ಬೀರುತ್ತವೆ. ಈ ಯುಗದಲ್ಲಿ ಎಲ್ಲರೂ ಯಜ್ಞ-ಯಾಗಾದಿಗಳಲ್ಲಿ ಆಸಕ್ತರಾಗಿರುತ್ತಾರೆ. ಧರ್ಮಾರ್ಥಕಾಮುಗಳೆಂಬ ತ್ರಿವರ್ಗದಲ್ಲಿ ಆಸಕ್ತರಾಗಿದ್ದು ವೇದವಿದ್ಯೆಯಲ್ಲಿ ವಿಶಾರದರಾಗಿರುವರು. ಆ ಕಾಲದಲ್ಲಿ ಬ್ರಾಹ್ಮಣರೇ ಅಧಿಕರಾಗಿರುವರು.

ಮುಂದೆ ದ್ವಾಪರಯುಗದಲ್ಲಿ ತಪಸ್ಸು ಸತ್ಯ ದಯೆ ಮತ್ತು ದಾನವೆಂಬ ನಾಲ್ಕು ಪಾದಗಳಲ್ಲಿ ಧರ್ಮದ ಎರಡು ಪಾದಗಳು ನಾಶವಾಗುತ್ತವೆ. ಅಧರ್ಮಪಾದಗಳೆನಿಸಿಕೊಂಡ ಅಸತ್ಯ ಹಿಂಸೆ ಅಸಂತುಷ್ಟಿ ದ್ವೇಷಗಳೆಂಬ ಅಧರ್ಮದ ನಾಲ್ಕು ಪಾದಗಳು ವೃದ್ಧಿಹೊಂದಿ ಧರ್ಮದ ಅರ್ಧಭಾಗವನ್ನು ಆಕ್ರಮಿಸಿಬಿಡುತ್ತವೆ. ಈ ಯುಗದಲ್ಲಿ ಜನರು ಪ್ರಾಯಃ ಯಶಸ್ವಿಗಳೂ ಯಜ್ಞಯಾಗಾದಿಗಳನ್ನು ಮಾಡುವವರೂ ಸ್ವಾಧ್ಯಾಯನಿರತರಾದ ಶ್ರೋತ್ರಿಯರಾದ ತುಂಬು ಕುಟುಂಬದ ಜನರೇ ಅಧಿಕವಾಗಿರುತ್ತಾರೆ.

ಕೊನೆಗೆ ಕಲಿಯುಗದಲ್ಲಿ ಅಧರ್ಮದ ನಾಲ್ಕು ಪಾದಗಳೇ ಅಭಿವೃದ್ಧವಾಗಿ ಅವುಗಳ ಪ್ರಭಾವದಿಂದ ಧರ್ಮದ ನಾಲ್ಕು ಪಾದಗಳು ನಾಶದ ಅಂಚಿನಲ್ಲಿ ಬರುತ್ತವೆ. ಧರ್ಮದ ನಾಲ್ಕು ಪಾದಗಳಲ್ಲಿ ಉಳಿದಿದ್ದೇ ಒಂದು ಪಾದ ಧರ್ಮ. ಅದು ಕೊನೆಗೆ ಇಲ್ಲದಂತಾಗಿ ಹೋಗುತ್ತದೆ. ಈ ಯುಗದ ಪ್ರಜೆಗಳು ಸಾಮಾನ್ಯವಾಗಿ ಲೋಭಿಗಳೂ ದುರಾಚಾರಿಗಳೂ ಕಠೋರಹೃದಯಿಗಳು ವಿನಾ ಕಾರಣ ಕ್ಷುಲ್ಲಕ ಕಾರಣಕ್ಕಾಗಿ ವ್ಯರ್ಥ ವೈರವನ್ನು ಬೆಳಿಸುವವರು ಆಗಿರುತ್ತಾರೆ. ಕೃತಯುಗದಲ್ಲಿ ಜನರು ಮನಸ್ಸು ಬುದ್ಧಿ ಇಂದ್ರಿಯಗಳಿಂದ ಸತ್ವಪ್ರಚುರ ಕಾರ್ಯಗಳನ್ನೇ ಹೆಚ್ಚಾಗಿ ಮಾಡುತ್ತಾರೆ. ಇದರಿಂದ ಪ್ರತಿಯೊಬ್ಬನಿಗೂ ಜ್ಞಾನ ತಪಸ್ಸು ಮೊದಲಾದವುಗಳಲ್ಲಿ ಅಧಿಕವಾದ ಅಭಿರುಚಿ ಉಂಟಾಗುತ್ತದೆ. ಕಾಮ್ಯಕರ್ಮಗಳಲ್ಲಿ ಯಾವಾಗ ಮನಸ್ಸಿಗೆ ಅಭಿರುಚಿ ಹುಟ್ಟುತ್ತದೆಯೋ ಆಗ ರಜೋಗುಣದ ಕಾರ್ಯಗಳೇ ಅಧಿಕವಾಗಿ ನಡೆಯುವವು. ಇದು ತ್ರೇತಾಯುಗದಲ್ಲಿ ಆಗುವ ಪರಿಣಾಮ. ಲೋಭ ಅಸಂತುಷ್ಟಿ ಅಭಿಮಾನ ಹೆಚ್ಚಾಗಿ ಸಕಾಮುಕರ್ಮಗಳಲ್ಲಿ ಅಭಿವೃದ್ಧಿ ಹೆಚ್ಚಾಗುತ್ತಾ ಹೋಗುತ್ತದೆಯೋ ಆವಾಗ ರಜಸ್ತಮೋಗುಣಗಳೆರಡೂ ಸೇರಿರುವ ದ್ವಾಪರಯುಗವೆಂದು ತಿಳಿಯಬೇಕು. ಬಾಯಿ ತೆಗೆದರೆ ಸುಳ್ಳಾಡುವುದು ಆಲಸ್ಯ ನಿದ್ರೆ ಹಿಂಸೆ ಮಾನಸಿಕ ವ್ಯಥೆ ಶೋಕ ಮೋಹ ಭಯ ಇತ್ಯಾದಿಗಳೆಲ್ಲ ಯಾವಾಗ ತಲೆಯೆತ್ತಿ ತಾಂಡವವಾಡುತ್ತವೆಯೋ ಅದು ಕಲಿಯುಗವೆಂದು ತಿಳಿಯಬೇಕು. ಇಲ್ಲಿ ಕೇವಲ ತಮಃಪ್ರಚುರಕಾರ್ಯಗಳೇ ಅಧಿಕವೆಂದು ತಿಳಿಯುವುದು.

ಶುಕಮುನಿಗಳು ಕಲಿಯುಗದಲ್ಲಿ ನಡೆಯಲಿರುವ ಅಧರ್ಮಗಳನ್ನೆಲ್ಲ ಕಲಿಯುಗದ ಆರಂಭದಲ್ಲಿ ಸವಿಸ್ತಾರವಾಗಿ ತಿಳಿಸುತ್ತಾರೆ.

ಕಲಿಯುಗದ ಜನರಲ್ಲಿ ಸುಳ್ಳು ಹೇಳುವ ಸ್ವಭಾವದವರೇ ಅಧಿಕವಾಗಿರುತ್ತಾರೆ. ಆದ್ದರಿಂದಲೇ ಅಲ್ಪಭಾಗ್ಯ ಅಧಿಕ ದೌರ್ಭಾಗ್ಯವುಳ್ಳವರಾಗುತ್ತಾರೆ. ಹಸಿವು ಬಾಯಾರಿಕೆ ಹೊಟ್ಟೆಬಾಕತನ ಇವು ಅಧಿಕವಾಗಿರುತ್ತದೆ. ಸ್ತ್ರೀಯರೆಲ್ಲರೂ ಪ್ರಾಯಶಃ ವ್ಯಭಿಚಾರಣಿಯರಾಗಿರುತ್ತಾರೆ. ಕಳ್ಳತನ, ಸುಳ್ಳು ಹೇಳುವುದು, ಪ್ರಜೆಗಳ ಸಂಪಾದನೆಯನ್ನು ಕಿತ್ತು ಕೊಂಡು ಅವರ ಪ್ರಾಣಹೀರುವುದು. ಬ್ರಾಹ್ಮಣನೆನಿಸಿದರೂ ಕೂಡ ಕೇವಲ ಹೊಟ್ಟೆ ಹೊರೆಯುವದರಲ್ಲಿ ಮುಳುಗುತ್ತಾರೆ. ಬ್ರಹ್ಮಚಾರಿಗಳಾದರೂ ವ್ರತಹೀನರಾಗಿ ಅಶುಚಿಗಳಾಗುವರು. ಗೃಹಸ್ಥರಾದರೂ ಸನ್ಯಾಸಿಗಳಂತೆ ವೇಷಧರಿಸುವರು. ಸನ್ಯಾಸಿಗಳು ಸಹ ಧನಸಂಗ್ರಹಾದಿಗಳಲ್ಲಿಯೇ ನಿರತರಾಗುವರು. ಸ್ತ್ರೀಯರು ಕುಲ-ಶೀಲ-ಮಾನ ಹೀನರಾಗಿರುತ್ತಾರೆ. ಕಟುವಾದ ತೀಕ್ಷ್ಣವಾದ ಮಾತುಗಳನ್ನು ಆಡುವವರು ಆಗಿರುತ್ತಾರೆ. ಗಂಡನ ಕಷ್ಟವನ್ನು ತಮ್ಮ ಕಷ್ಟವೆಂದು ಭಾವಿಸದೇ ಅವನಿಗೆ ಕಷ್ಟಬಂದೊದಗಿದಾಗ ಕೂಡಲೇ ಅವನನ್ನು ತ್ಯಜಿಸಿ ಬಿಡುತ್ತಾರೆ. ಕಲಿಯುಗದಲ್ಲಿ ಪುರುಷರೂ ಕೂಡ ತಂದೆ ತಾಯಿ ಸಹೋದರರು ಹಿರಿಯರು ಇಷ್ಟಮಿತ್ರರು ಬಂಧುಗಳು ಮೊದಲಾದವರನ್ನು ಲೆಕ್ಕಿಸದೇ ಸ್ತ್ರೀವಶರಾಗಿ ತನ್ನ ಹೆಂಡತಿ ಹಾಗು ಹೆಂಡತಿಸಂಬಂಧಿಗಳಾದ ಅತ್ತೆ ಮಾವ ಶ್ಯಾಲಕ ಮೊದಲಾದವರಿಂದ ಕೂಡಿಕೊಂಡು ಅವರ ಮಾತನ್ನೇ ಕೇಳುತ್ತಾ ಅವರನ್ನೇ ಪ್ರೀತಿಸುತ್ತಾ ಹೆತ್ತ ತಂದೆ ತಾಯಿ ತಂಗಿಯರನ್ನು ತಿರಸ್ಕರಿಸುವರು. ನೀಚರೂ ಕೂಡ ಹೊಟ್ಟೆ ಹೊರೆಯಲು ತಪಸ್ವಿಗಳ ವೇಷವನ್ನು ಧರಿಸುತ್ತಾರೆ.

ಕಲಿಯುಗದಲ್ಲಿ ಪರಮದಯಾಪರನಾದ ಭಗವಂತನ ನಾಮಸ್ಮರಣೆ ಮಾತ್ರದಿಂದ ಸಕಲ ಕಷ್ಟಗಳನ್ನು ಕಳೆದು ಕೊಂಡು ಸುಖವನ್ನು ಹೊಂದುತ್ತಾರೆ. ಭಗವಂತನ ಗುಣಗಳನ್ನು ಶ್ರವಣ ಮಾಡುವುದು. ಕೀರ್ತನೆ ಮಾಡುವುದು ಮನಸ್ಸಿನಲ್ಲಿ ಧ್ಯಾನಿಸುವುದು ಅವನನ್ನು ಪೂಜಿಸುವುದು ಈ ವಿಧವಾಗಿ ಭಗವಂತನ ಆರಾಧನೆಯನ್ನು ಮಾಡುತ್ತಾ ಹೋದಂತೆ ಅದರಿಂದ ತುಷ್ಟನಾದ ಭಗವಂತನು ನೆನೆದವರ ಕಷ್ಟಕಾರ್ಪಣ್ಯಗಳನ್ನು ನೀಗಿಸುತ್ತಾನೆ. ಪರೀಕ್ಷಿತನೇ ಕಲಿಯುಗವು ನಾನಾ ದೋಷಗಳಿಂದ ಕೂಡಿದ್ದರೂ ಇಲ್ಲಿ ಒಂದು ಗುಣವೂ ಇದೆ. ಅದು ಶ್ರೀಕೃಷ್ಣ ನಾಮಸ್ಮರಣೆ. ಆ ಭಗವಂತನ ನಾಮಸಂಕೀರ್ತನದಿಂದಲೇ ಮನುಷ್ಯನು ಸಕಲಬಂಧನಗಳಿಂದ ಬಿಡುಗಡೆ ಹೊಂದುತ್ತಾನೆ. ಕೃತಯುಗದಲ್ಲಿ ಧ್ಯಾನ ಮಾಡುವದರಿಂದ ತ್ರೇತಾಯುಗದಲ್ಲಿ

ಯಾಗಾದಿಗಳ ಮೂಲಕ, ದ್ವಾಪರಯುಗದಲ್ಲಿ ಭಗವಂತನ ಅರ್ಚನೆಯನ್ನು ಮಾಡುವ ಮೂಲಕ ಹೊಂದಬಹುದಾದ ಸಕಲ ಫಲಗಳು ಕಲಿಯುಗದಲ್ಲಿ ಶ್ರೀ ಕೃಷ್ಣನ ನಾಮಸ್ಮರಣೆಯಿಂದ ಬರುತ್ತವೆ.

*ನಾಲ್ಕು ಯುಗಧರ್ಮಗಳ ವಿಭಾಗ, ಕಲಿದೋಷ ಪರಿಹಾರ ಇವುಗಳನ್ನು ಈ ಅಧ್ಯಾಯದಲ್ಲಿ ಹೇಳುವರು. ಮೊದಲಿಗೆ ರಾಜರ ಮೂಢತೆಯನ್ನು ನೋಡಿ ಭೂಮಿಯು ಪರಿಹಾಸ ಮಾಡುವ ರೀತಿಯನ್ನು ಹೇಳುವರು.*

**ಶ್ರೀ ಶುಕ ಉವಾಚ**

**ದೃಷ್ಟ್ವಾತ್ಮನಿರ್ಜಯವ್ಯಗ್ರಾನ್ ನೃಪಾನ್ ಹಸತಿ ಭೂರಿಯಮ್ ।**
**ಅಹೋ ಮಾಂ ವಿಜಿಗೀಷಂತಿ ಮೃತ್ಯೋಃ ಕ್ರೀಡನಕಾಃ ನೃಪಾಃ ॥ ೧ ॥**

ಆತ್ಮನಿರ್ಜಯವ್ಯಗ್ರಾನ್=ತನ್ನನ್ನು ವಿಶೇಷವಾಗಿ ಗೆಲ್ಲುವುದರಲ್ಲೇ ಆಸಕ್ತರಾದ ನೃಪಾನ್=ರಾಜರನ್ನು ದೃಷ್ಟ್ವಾ=ನೋಡಿ ಇಯಂ ಭೂಃ=ಈ ಭೂಮಿಯು ತಾನು ಹಸತಿ=ನಗುವಳು ಮೃತ್ಯೋಃ=ಮೃತ್ಯುದೇವತೆಯ ಕ್ರೀಡನಕಾಃ=ಆಟಿಗೆಯಾದ ನೃಪಾಃ= ರಾಜರು ಮಾಂ=ನನ್ನನ್ನು ವಿಜಿಗೀಷಂತಿ=ಗೆಲ್ಲಲು ಇಚ್ಛಿಸುವರು. **ಅಹೋ**= ಆಶ್ಚರ್ಯ ಎಂದು ಪರಿಹಾಸಮಾಡುವಳು.

**ವಿಶೇಷ-** ಯಾಗದಲ್ಲಿ ಬಲಿಕೊಡಲು ಬಂಧಿಸಿದ ಮೇಕೆಯು ತನ್ನ ಮೇಲೆ ಅಲಂಕಾರಕ್ಕಾಗಿ ಕಟ್ಟಿದ ಮಾವಿನ ಚಿಗರನ್ನು ತಿನ್ನಲು ಪ್ರಯತ್ನಿಸುವಂತೆ(ಅದನ್ನು ನೋಡುವ ಕ್ಷಣದಲ್ಲೇ ನಾಶವನ್ನು ಹೊಂದುತ್ತದೆ.)ಮರಣ ಶೀಲರಾದ ಈ ರಾಜರ (ನನ್ನನ್ನು ಗೆಲ್ಲುವ) ಸಾಹಸವು ಆಶ್ಚರ್ಯವೇ ಸರಿ ಎಂದು ಭಾವ.

**ಕಾಮ ಏಷ ನರೇಂದ್ರಾಣಾಂ ಮೋಘಸ್ಯಾದ್ವಿದುಷಾಮಪಿ ।**
**ಯೇನ (ಜಲ)ಫೇನೋಪಮೇ ಪಿಂಡೇ ಯೇನ ವಿಸ್ರಂಭಿತಾ ನೃಪಾಃ ॥ ೨ ॥**

ನೃಪಾಃ=ರಾಜರು ಯೇನ=ಯಾವ ಕಾಮನೆಯಿಂದ ಫೇನೋಪಮೇ=ಶೀಘ್ರದಲ್ಲಿ ನಾಶವಾಗುವದರಿಂದ ನೀರಿನ ಮೇಲಿನ ಬುರುಗಿನಂತಿರುವ ಪಿಂಡೇ=ದೇಹದಲ್ಲಿ ವಿಸ್ರಂಭಿತಾಃ=ವಿಶ್ವಾಸ ಮಾಡಿದ್ದಾರೆಯೋ ಏಷಃ=ಅಂಥಹ ವಿದುಷಾಂ ಅಪಿ ನರೇಂದ್ರಾಣಾಂ ಕಾಮಃ=ಜ್ಞಾನಿಗಳಾದ ರಾಜರ ಇಚ್ಛೆಯು **ಮೋಘಃ** ಸ್ಯಾತ್= ವ್ಯರ್ಥವಾಗುವದು. ಇಲ್ಲಿ ಪೂರ್ವಕರ್ಮವಶಾತ್ ಶ್ರೀಹರಿಯ ದಯೆ ಇದ್ದರೆ ಕದಾಚಿತ್ ಸ್ವಲ್ಪ ಜ್ಞಾನ ಬರಬಹುದು ಆಗಲೂ ಕಾಮವು ವ್ಯರ್ಥವಾಗುವದು ಅಂದ

ಮೇಲೆ ಅಜ್ಞಾನಿಗಳ ಪಾಡೇನು ಎಂದು ತಿಳಿಸಲು ವಿದುಷಾಮಪಿ ಎಂದಿದ್ದಾರೆ. ಇದರಿಂದ ಕಾಮದಿಂದ ಜ್ಞಾನವೂ ದೂಷಿತವಾಗುವದು ಎಂದು ತಿಳಿಯುವದು.

ವಿಶೇಷ-ಸ್ರಂಭಃ ಯೇಷಾಂ ಅಸ್ತೀತಿ ಸ್ರಂಭಿಣಃ ತೇಷಾಂ ಭಾವಃ ಸ್ರಂಭಿತಾ ವಿಶಿಷ್ಟಾ ಸ್ರಂಭಿತಾ ಯೇಷಾಂ ತೇ ವಿಸ್ರಂಭಿತಾಃ ಎಂದಾಗಲಿ ವಿಸ್ರಂಭಃ ಸಂಜಾತಃ ಯೇಷಾಂ ಇತಿ ವಿಸ್ರಂಭಿತಾಃ ಎಂದು ಇತಚ್ ಪ್ರತ್ಯಯ ಮಾಡಬೇಕು. (೩-೨-೫೬ನೇ ಸೂತ್ರ) 'ಯಸ್ಯ ವಿಭಾಷಾ' (೭-೨-೧೫ನೇ ಸೂತ್ರ) (ಉದಿತಃ ಪರಸ್ಯ ಉದಿತೋ ವಾ ಕ್ತ್ವಾ ಇಡ್ ವಾ) ಎಂದು ವಿಕಲ್ಪದಿಂದ ಹೇಳಿದ ಇಟ್‌ಗೆ ಯಸ್ಯ ಕ್ವಚಿತ್ ವಿಭಾಷಯಾ ಇಡ್ ವಿಹಿತಃ ತತೋ ನಿಷ್ಠಾಯಾಃ ಇಟ್ ನ ಸ್ಯಾತ್ ಎಂದು ಇಟ್ ನಿಷೇಧ ಮಾಡಿದ್ದರಿಂದ ವಿಸ್ರಂಭಿತಾಃ ಎನ್ನುವಲ್ಲಿ ಇಟ್ ಹೇಗೆ ಎಂಬ ಶಂಕೆಗೆ ಅವಕಾಶವಿಲ್ಲ.

ಅವರ ಕಾಮ ಎಂತಹುದು ಎಂದು ಹೇಳುವರು.

**ಪೂರ್ವಂ ನಿರ್ಜಿತ್ಯಷಡ್ವರ್ಗಂ ಜೇಷ್ಯಾಮೋ ರಾಜಮಂತ್ರಿಣಃ ।**
**ತತಃ ಸಚಿವಪೌರಾಪ್ತಕರೀಂದ್ರಾನಥ ಕಂಠಕಾನ್ ॥ ೩ ॥**

ಪೂರ್ವಂ=ಮೊದಲಿಗೆ ಷಡ್ವರ್ಗಂ=ಕಾಮಾದಿ ಅರಿಷಡ್ವರ್ಗಗಳನ್ನು (ಭೂ ಜಯ ವಿರೋಧಿಯಾದ ವಿಷಯಗಳನ್ನು) ನಿರ್ಜಿತ್ಯ=ಗೆದ್ದು ಅಥವಾ ರಾಜರಿಗೆ ಇರಬೇಕಾದ ಸಂಧಿ ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ,(೧.ರಾಷ್ಟ್ರಕ್ಕೆ ದೈವಿಕ ತೊಂದರೆಯಾದಾಗ ಮತ್ತು ಶತ್ರುಗಳು ತನಗಿಂತ ಪ್ರಬಲರಿರುವಾಗ ರಾಜನು ಅವರೊಡನೆ ಸ್ನೇಹಬೆಳಿಸುವದು ೨.ಯುದ್ಧ ೩.ಯುದ್ಧಕ್ಕಾಗಿ ಪ್ರಯಾಣ ೪.ರಾಜನು ಯುದ್ಧ ಮಾಡಲು ಕಾಲನಿರೀಕ್ಷಿಸುತ್ತ ಕೂಡುವದು. ೫.ಕಪಟದಿಂದ ಎರಡು ರೀತಿ ಒಯ್ಯುವದು ಪ್ರಬಲ ದುರ್ಬಲ ಶತ್ರುಗಳಲ್ಲಿ ಪ್ರಬಲನನ್ನು ಸೇರಿ ದುರ್ಬಲನೊಡನೆ ಯುದ್ಧ ಮಾಡುವದು ಮುಂತಾದವು. ೬.ಪ್ರಬಲ ಶತ್ರುವಿರೋಧವಾದಾಗ ಬೇರೆಯವರನ್ನು ಆಶ್ರಯಿಸುವದು) ಇವುಗಳನ್ನು ನಿರ್ಜಿತ್ಯ=ಸಂಪಾದಿಸಿ ರಾಜಮಂತ್ರಿಣಃ=ರಾಜಮಂತ್ರಿಗಳು ತತಃ=ನಂತರ ಸಚಿವಾನ್=ರಾಜಸಹಾಯಕರಾದ ಅಮಾತ್ಯರನ್ನು ಪೌರಾನ್=ಪಟ್ಟಣದ ಆಡಳಿತಗಾರರನ್ನು ಆಪ್ತಾನ್=ರಾಜನ ವಿಶ್ವಾಸಿಗರನ್ನು ಕರೀಂದ್ರಾನ್=ಆನೆಗಳನ್ನು ಅಥ ಕಂಠಕಾನ್=ಉಳಿದ ಕ್ಷುದ್ರಪ್ರಾಣಿಗಳನ್ನು ಜೇಷ್ಯಾಮ=ಗೆಲ್ಲುವೆವು.

**ಏವಂ ಕ್ರಮೇಣ ಜೇಷ್ಯಾಮಃ ಪೃಥ್ವೀಂ ಸಾಗರಮೇಖಲಾಮ್ ।**
**ಇತ್ಯಾಶಾಬದ್ಧಹೃದಯಾ ನಪಶ್ಯಂತ್ಯಂತಿಕೇऽಂತಕಮ್ ॥ ೪ ॥**

ಏವಂ=ಈ ರೀತಿಯಾಗಿ ಕ್ರಮೇಣ=ಕ್ರಮವಾಗಿ ಆ ಆ ದೇಶದ ರಾಜರನ್ನು ಗೆದ್ದು ಸಾಗರಮೇಖಲಾಂ=ಸಮುದ್ರವೇ ಸೀಮಾಧಾರವಾಗಿವುಳ್ಳ ಪೃಥಿವೀಂ=ಭೂಮಂಡಲವನ್ನು ಜೇಷ್ಯಾಮಃ=ಗೆಲ್ಲುವೆವು ಇತಿ=ಈ ರೀತಿಯಾಗಿ ಆಶಾಬದ್ಧಹೃದಯಾಃ=ಆಶೆಯಿಂದ ತುಂಬಿದ ಮನಸ್ಸುಳ್ಳವರಾಗಿ ಅಂತಿಕೇ=ಸಮೀಪದಲ್ಲೇ ಇರುವ ಅಂತಿಕಂ=ಮರಣವನ್ನು ನ ಪಶ್ಯಂತಿ=ತಿಳಿಯವದಿಲ್ಲ

**ಸಮುದ್ರಾವರಣಾಂ ಜಿತ್ವಾ ಮಾಂ ವಿಶಂತ್ಯಬ್ಧಿಮೋಜಸಾ ।**
**ಕಿಯದಾತ್ಮಜಯಸ್ಯೈತನ್ಮುಕ್ತಿರಾತ್ಮಜಯೇ ಫಲಮ್ ॥ ೫ ॥**

ಸಮುದ್ರಾವರಣಾಂ=ಸಮುದ್ರದಿಂದ ಆವೃತವಾದ ಮಾಂ=ನನ್ನನ್ನು ಜಿತ್ವಾ=ಗೆದ್ದು ಓಜಸಾ=ತಮ್ಮ ಸಾಮರ್ಥ್ಯದಿಂದ ಅಬ್ಧಿಂ ವಿಶಂತಿ=ಸಮುದ್ರದಲ್ಲಿರುವ ದ್ವೀಪಗಳನ್ನು ಗೆಲ್ಲಬೇಕೆಂದು ವಿಚಾರ ಮಾಡುವರು. ಆತ್ಮಜಯಸ್ಯ=ಮನೋಜಯಕ್ಕೆ ಇದಂ=ಭೂ ದ್ವೀಪ, ಜಯಗಳು ಕಿಯತ್=ಎಷ್ಟು ಫಲವುಳ್ಳದ್ದಾದೀತು. ಆತ್ಮಜಯೇ=ಮನೋಜಯ-ವಿದ್ದರೆ ಫಲಂ=ಮುಕ್ತಿಯೇ ಆಗುವದು. ಅಲ್ಪಫಲಕವಾದ್ದರಿಂದ ಅವರ ಕಾಮವು ವ್ಯರ್ಥ.

**ವಿಶೇಷ-** ಮುಕ್ತಿ ಪಡೆಯುವವಗೆ ಮಿಕ್ಕ ಫಲಗಳು ಕೃಷಿಕನಿಗೆ ಧಾನ್ಯದ ಜೊತೆಗೆ ಹುಲ್ಲು ತಾನಾಗಿಯೇ ಬರುವಂತೆ ಬಂದೇ ಬರುವವು.

**ಯಾಂ ವಿಸೃಜ್ಯೈವ ಮನವಸ್ತತ್ಸುತಾಶ್ಚ ಕುರೂದ್ವಹ ।**
**ಗತಾ ಯಥಾಗತಂ ಯುದ್ಧೇ ತಾಂ ಮಾಂ ಜ್ಯೇಷ್ಯಂತ್ಯಬುದ್ಧಯಃ ॥ ೬ ॥**

ಯಾಂ=ಯಾವ ನನ್ನನ್ನು ಮನವಃ=ಮನುಗಳು ತತ್ಸುತಾಃ=ಮನುಪುತ್ರರು ವಿಸೃಜ್ಯೈವ=ಬಿಟ್ಟೇ ಯಥಾಗತಂ ತಥಾ ಗತಾಃ=ಹೇಗೆ ಬಂದರೋ ಹಾಗೆ ಹೋದರು ಕುರೂದ್ವಹ=ಪರೀಕ್ಷಿತನೇ ತಾಂ=ಅಂತಹ ಜೊತೆಗೆ ಬರದಿರುವ ಮಾಂ=ನನ್ನನ್ನು ಅಬುದ್ಧಯಃ=ಸದ್ಬುದ್ಧಿ ಇಲ್ಲದಿರುವ ಈ ರಾಜರು ಜೇಷ್ಯಂತಿ=ಗೆಲ್ಲಲಿಚ್ಛಿಸುವರು.

**ವಿಶೇಷ-** ಬೇರೆ ರಾಜರೊಡನೆ ಭೂಮಿಗಾಗಿ ಯುದ್ಧ ಮಾಡುವುದಿರಲಿ ತಮ್ಮವರಲ್ಲಿಯೂ ಭೂಮಿಗಾಗಿ ಯುದ್ಧ ಮಾಡುವದರಿಂದ ತಮಗೂ ಸುಖಿಸಿಗುವುದು ದುರ್ಲಭವೇ ಎಂದು ಹೇಳುವರು.

**ಮತ್ಕೃತೇ ಪಿತೃಪುತ್ರಾಣಾಂ ಭ್ರಾತೃಣಾಂ ಚಾಪಿ ವಿಗ್ರಹಃ ।**
**ಜಾಯತೇ ಹ್ಯಸತಾಂ ರಾಜ್ಯೇ ಮಮತಾಬದ್ಧಚೇತಸಾಮ್ ॥ ೭ ॥**

ಮತ್ಕೃತೇ=ನನಗಾಗಿ ಪಿತೃಪುತ್ರಾಣಾಂ=ತಂದೆ ಮಕ್ಕಳಿಗೆ ಚ=ಮತ್ತು ಭ್ರಾತೃಣಾಂ ಅಪಿ=ಸಹೋದರರಿಗೂ ಸಹ ಕಲಹವು ರಾಜ್ಯೇ=ರಾಜ್ಯದಲ್ಲಿ ಮಮತಾ ಬದ್ಧಚೇತಸಾ= ನನ್ನದೆಂಬ ದುರಾಗ್ರಹವುಳ್ಳ ಅಸತಾಂ=ದುಷ್ಟರಿಗೆ ಜಾಯತೇ=ಉಂಟಾಗುವದು.

**ವಿಶೇಷ**-ಅಪಿ ಶಬ್ದವು ಯುದ್ಧಕ್ಕೆ ಆಸ್ಪದವಿಲ್ಲದವರಿಗೂ ಸಹ ಎಂಬರ್ಥದಲ್ಲದೆ. ತನಗೊಬ್ಬನಿಗೆ ಆಪತ್ತು ಬಂದರೂ ಯುದ್ಧಬಿಡುವದಿಲ್ಲವೆಂದು ಹೇಳುವರು. ಚಾಪಿ ವಿಗ್ರಹಃ ಎನ್ನುವಲ್ಲಿ ಚಾಪಿ ಚಾಸೌ ವಿಗ್ರಹಶ್ಚ ಚಾಪಿವಿಗ್ರಹಃ ಎಂದು ವಿಗ್ರಹ ಮಾಡಬೇಕು. ಇದರಿಂದ ಸಾಯುವವರೆಗೆ ವೈರವಿರುವದೆಂದು ಸೂಚಿತವಾಗುವುದು. ಚಾಪ ಎಂದರೆ ಧನಸ್ಸು ಅದುಳ್ಳದ್ದು ಚಾಪಿ. ಚಾಪಿಯಾದದೇಹ ಎಂದರೆ ಕೊನೆಯ ವರೆಗೆ ಧನಸ್ಸು ಧರಿಸಿದ ದೇಹ ಎಂದರ್ಥವಾಗುವದು.

**ಮಮೈವೇಯಂ ಮಹೀಕೃತ್ಸ್ನಾ ನತೇ ಮೂಢೇತಿ ವಾದಿನಃ ।**
**ಸ್ಪರ್ಧಮಾನಾ ಮಿಥೋ ಘ್ನಂತಿ ಮ್ರಿಯಂತೇ ಮತ್ಕೃತೇ ನೃಪಾಃ ॥ ೮ ॥**

ಇಯಂ ಮಹೀ=ಈ ಭೂಮಿಯು ಕೃತ್ಸ್ನಾ=ಸಂಪೂರ್ಣವಾಗಿ ಮಮ ಏವ=ನನ್ನದು ಮಾತ್ರ ಮೂಢ=ಮೂರ್ಖನೇ, ತೇ ನ=ನಿನ್ನದು ಅಲ್ಲ ಇತಿ ವಾದಿನಃ ಎಂದು ಮುಖತಃ ಹೇಳುತ್ತ ಸ್ಪರ್ಧಮಾನಾಃ=ಪರಸ್ಪರ ಸ್ಪರ್ಧಿಸುತ್ತಾ ಮಿತಃ ಘ್ನಂತಿ=ಒಬ್ಬರನ್ನೊಬ್ಬರು ಕೊಲ್ಲುವರು ಹೀಗೆ ಮತ್ಕೃತೇ=ನನಗಾಗಿ ನೃಪಾಃ=ರಾಜರು ಮ್ರಿಯಂತೇ=ಸಾಯುವರು.

**ಪೃಥು ಪೂರೂರವಾ ಗಾಧಿರ್ಭರತೋ ನಹುಷೋಽರ್ಜುನಃ ।**
**ಮಾಂಧಾತಾ ಸಗರೋ ರಾಮಃ ಖಟ್ವಾಂಗೋ ಧುಂಧುಹಾ ರಘುಃ ॥ ೯ ॥**

**ತೃಣಬಿಂದುರ್ಯಯಾತಿಶ್ಚ ಶರ್ಯಾತಿ ಶಂತನುರ್ಗಯಃ ।**
**ಭಗೀರಥಃ ಕುವಲಯಾಶ್ವಃ ಕಕುಸ್ಥೋ ನೈಷದೋ ನೃಪಃ ॥ ೧೦ ॥**

**ಹಿರಣ್ಯಕಶಿಪುರ್ವೃತ್ರೋ ರಾವಣೋ ಲೋಕರಾವಣಃ ।**
**ನಮುಚಿಃ ಶಂಬರೋ ಭೌಮೋ ಹಿರಣ್ಯಾಕ್ಷೋಽಥ ತಾರಕಃ ॥ ೧೧ ॥**

**ಅನ್ಯೇ ಚ ಬಹವೋ ದೈತ್ಯಾ ರಾಜಾನೋ ಯೇ ಪ್ರಜೇಶ್ವರಾಃ ।**
**ಸರ್ವೇ ಸರ್ವವಿದಃ ಶೂರಾಃ ಸರ್ವೇ ಸರ್ವಜಿತೋಽಜಿತಾಃ ॥ ೧೨ ॥**

**ಮಮತಾಂ ಮಯ್ಯಮರ್ತ್ಯಾಯಾಂ ಕೃತ್ವೋಚ್ಚೈರ್ಮರ್ತ್ಯಧರ್ಮಿಣಃ ।**
**ಕಥಾವಶೇಷಾಃ ಕಾಲೇನ ಹ್ಯಕೃತಾರ್ಥಾ ಕೃತಾ ಅಹೋ ॥ ೧೩ ॥**

*ತಾತ್ಪರ್ಯ ಅವತಾರಿಕಾ- ಮನುಷ್ಯರ ಮಧ್ಯದಲ್ಲಿ ಶ್ರೀರಾಮನನ್ನು ಹೇಳಿದ್ದು ಎಷ್ಟು ಸರಿ? ಮನುಷ್ಯ ಎಂದು ಹೇಳುವುದಾದರೂ ಆ ಮನುಷ್ಯರ ಧರ್ಮಗಳು ಅವನಿಗೆ ಹೇಗೆ ಉಪಪನ್ನವಾಗುತ್ತವೆ? ಎನ್ನುವ ಪ್ರಶ್ನೆಗೆ ಆಚಾರ್ಯರು ತಾತ್ಪರ್ಯದಲ್ಲಿ ಹೀಗೆ ಉತ್ತರವನ್ನು ನೀಡುತ್ತಾರೆ.*

ತಾತ್ಪರ್ಯ- **ಜೀವವಿಷ್ಣೋರಭೇದಶ್ಚ ದೇಹಯೋಗವಿಯೋಜನೇ । ವಿಷ್ಣೋರ್ದುಃಖಂ ವ್ರಣಿತ್ವಾತ್ ಪರಾಭಾವಸ್ತಥೈವ ಚ । ಅಸ್ವಾತಂತ್ರ್ಯಂ ಚ ವೇದಾದಾವುಕ್ತವತ್ ಭಾಸತೇ ವಿಭೋಃ । ಕ್ವಚಿತ್ಕ್ವಚಿತ್ ವಿಮೋಹಾಯ ದೈತ್ಯಾದೀನಾಂ ದುರಾತ್ಮನಾಮ್ । ಇತಿ ಬ್ರಹ್ಮಾಂಡೇ ।**

ಜೀವ ಹಾಗು ವಿಷ್ಣುವಿನ ಅಭೇದ, ಭಗವಂತನಿಗೆ ದೇಹದ ಸಂಬಂಧ ಹಾಗು ವಿಯೋಗಗಳು ವಿಷ್ಣುವಿನ ದುಃಖಪ್ರಸಂಗಗಳು, ಅವನ ಪರಾಭವಗಳು ಹಾಗು ಅಸ್ವಾತಂತ್ರ್ಯಗಳನ್ನು ವೇದಾದಿಗಳಲ್ಲಿ ಹೇಳಿದ್ದು ಅಸುರ ಜನಮೋಹನಕ್ಕಾಗಿ ಎಂದು ತಿಳಿಯುವದು.

**ವಿಶೇಷ-** ಕೆಲವೆಡೆ 'ಜೀವವಿಷ್ಣೋರಭೇದಃ,' ಎಂದು ಮತ್ತೆ ಕೆಲವೆಡೆ 'ಸರ್ವಂ ಖಲು ಇದಂ ಬ್ರಹ್ಮ' ಎಂದು ಜೀವ-ಬ್ರಹ್ಮರಿಗೆ ಅಭೇದವನ್ನು, ದೇಹ ಯೋಗ-ವಿಯೋಗ ಅರ್ಥಾತ್ ಉತ್ಪತ್ತಿ ನಾಶಗಳನ್ನು ಕೆಲವೆಡೆ, 'ವಿಷ್ಣೋಃದುಃಖಂ' ಶ್ರೀಹರಿಗೆ ದುಃಖವು ಮತ್ತೆ ಕೆಲವೆಡೆ, 'ವ್ರಣಿತ್ವ' ಮುಂತಾದವು ರಾಮನಾಗಿ ಅವತರಿಸಿದಾಗ ಹೇಳಿದ್ದಿದೆ. 'ಪರಾಭವಃ' ಪರಶುರಾಮನು ಭೀಷ್ಮರೊಡನೆ ಸೋತಂತೆ ಮತ್ತು ಅಂಬಾಳನ್ನು ಕೂಡಿಸಲು ಆಗದಂತೆ ಅಸ್ವಾತಂತ್ರವು ವೇದ ಮತ್ತು ಪುರಾಣಾದಿಗಳಲ್ಲಿ ಹೇಳಿದಂತೆ ಕಾಣುವದು. ತಿಳಿದು ಕೊಳ್ಳುವವನ ದೋಷದಿಂದ ಹಾಗೆ ಅರ್ಥವಾಗುವುದೇ ಹೊರತು ಹಾಗೆ ನಿಜವಾಗಿ ಹೇಳಿರುವದಿಲ್ಲ ಎಂಬುದನ್ನು 'ಉಕ್ತವತ್ ಭಾಸತೇ' ಎಂಬ ಮಾತಿನಿಂದ ಸೂಚಿಸಿರುವರು. ಹೀಗೆ ಮಿಶ್ರವಾದ ಮಾತುಗಳನ್ನು ಹೇಳಲು ಪ್ರಯೋಜನವಾದರೂ ಏನು ಎಂದರೆ ದುಷ್ಟರಾದ ದೈತ್ಯರಿಗೆ ಮೋಹ ಬರಲಿ ಎಂಬುದೇ ಉದ್ದೇಶ. ಇಲ್ಲವಾದರೆ ಅವರ ಗತಿಗೆ ಯಾರೂ ಹೋಗಲಿಕ್ಕಿಲ್ಲದಂತೆ ಆದೀತು ಎಂದು ಭಾವ.

ಅಳಿದು ಹೋದ ಕೆಲವು ರಾಜರ ಹೆಸರನ್ನು ಹೇಳುವರು. ಪೃಥುರಾಜ ಇವನು ತನ್ನ ಸಮೀಕರಣ ಮಾಡಿದವನಾದುದರಿಂದ ಇವನ ಹೆಸರನ್ನು ಭೂದೇವಿಯು ಮೊದಲಿಗೆ ಹೇಳಿರುವಳು. ಎಂದು ಸತ್ಯಧರ್ಮರ ಅಭಿಪ್ರಾಯ. ಕೆಲವರು ಪರಮಾತ್ಮನ ಆವಿಷ್ಟ ಅವತಾರನಾದುದರಿಂದ ಮೊದಲಿಗೆ ಧರೆಯು ಪೃಥುವನ್ನು ಹೇಳಿರುವಳು ಎಂದು ಹೇಳುವರು. ಇವರು ಮುಂದೆ ಸಾಕ್ಷಾತ್ ಶ್ರೀಹರಿಯಾದ ರಾಮನನ್ನು ಹೇಳಿದುದನ್ನು ನೋಡಿದಂತೆ ಕಾಣುವುದಿಲ್ಲ ರಾಮ ಶಬ್ದಾರ್ಥವನ್ನೂ ಹೇಳಲಿಲ್ಲ ಆದ್ದರಿಂದ ಪೃಥುಗಳನ್ನು (ಸ್ಥೂಲಬುದ್ಧಿಗಳು) ದೊಡ್ಡವರು ಎನ್ನುತ್ತಾರ ಸತ್ಯಧರ್ಮರು. ೨.ಪುರೂರವ ೩.ಗಾಧಿರಾಜ(ವಿಶ್ವಾಮಿತ್ರನ ತಂದೆ) ೪.ಭರತ ೫.ನಹುಷ(ಇಂದ್ರನ ಇನ್‌ಚಾರ್ಜ) ೬.ಕಾರ್ತವೀರ್ಯಾರ್ಜುನ ೭.ಮಾಂಧಾತಾ ೮.ಸಗರ ೯.ರಾಮ (ಶ್ರೀ ಹರಿಯ ಅವತಾರ) ಇವನು ಎಲ್ಲರಂತೆ ತನ್ನನ್ನು ಬಿಟ್ಟು ಅಂದರೆ ದೇಹತ್ಯಾಗ ಮಾಡಿ ಹೋದವನಲ್ಲ ಆದರೂ ರಾಜ್ಯಭಾರ ಮಾಡುವದನ್ನು ತ್ಯಜಿಸಿ ಹೋಗಿರುವದರಿಂದ ಇವರ ಪಂಕ್ತಿಯಲ್ಲಿ ಪಂಕ್ತಿರಥಸುತನನ್ನು ಸೇರಿಸಿರುವಳು ಎಂದು ತಿಳಿಯಬೇಕು. (ಪಂಕ್ತಿರಥಃ=ದಶರಥನೆಂದರ್ಥ) ಅಥವಾ ಪರಶುರಾಮನನ್ನು ಅಥವಾ ರಾಮ ಎಂಬ ಹೆಸರಿನ ಒಬ್ಬ ರಾಜನೆಂದು ತಿಳಿಯಬೇಕು. ಇವನೊಬ್ಬ ರಾಜಸಾಮಾನ್ಯನೆಂದು ತಿಳಿಯುವದೇ ಯೋಗ್ಯ ೧೩ ನೇ ಶ್ಲೋಕದಲ್ಲಿ 'ಮಮತಾಂ ಮಯಿ ಕೃತ್ವಾ' ಎಂದು ಹೇಳಿದುದಕ್ಕೆ ಅನುಕೂಲವಾಗುವದು. ಇಲ್ಲವಾದರೆ ಭಗವಂತನಿಗೆ ಮಮತೆಯು ಕೂಡುವುದಿಲ್ಲ ಹೀಗಿಟ್ಟುಕೊಂಡು ಕೆಲವರು ಪೃಥುವನ್ನು ಮೊದಲು ಹೇಳಲು ಕೊಟ್ಟ ಕಾರಣ ಸಮಂಜಸವೇ ಆಗುವುದು. ೧೦.ಖಟ್ವಾಂಗ (ಒಂದೇ ಮುಹೂರ್ತದಲ್ಲಿ ಸಾಧನ ಮಾಡಿದವನು) ೧೧.ದುಂದುಹಾ (ಧಂಧು ಮಾರ) ೧೨.ರಘುರಾಜ ೧೩.ತೃಣಬಿಂದು ೧೪.ಯಯಾತಿ ೧೫.ಶರ್ಯಾತಿ (ಯಯಾತಿ ಭ್ರಾತೃ)೧೬.ಶಂತನು ರಾಜ ೧೭.ಗಯ ೧೮.ಭಗೀರಥನು ೧೯.ಕುವಲಯಾಶ್ವ ೨೦.ಕಕುಸ್ಥ ೨೧.(ನೈಷಧ ನೃಪ)ನಲ ೨೨. ಹಿರಣ್ಯಕಶಿಪು ೨೩.ವೃತ್ರಾಸುರ ೨೪.ಲೋಕಭಯಂಕರನಾದ ರಾವಣ ೨೫.ನಮುಚಿ ೨೬.ಶಂಬರಾಸುರ ೨೭.ಭಗದತ್ತ (ನರಕಾಸುರನ ಮಗ)೨೮.ಹಿರಣ್ಯಾಕ್ಷ ೨೦.ತಾರಕಾಸುರ ಅನ್ಯೇ ಬಹವಃ ದೈತ್ಯಾಃ=ಇನ್ನೂ ಬಹಳ ಜನ ದೈತ್ಯರು ಪ್ರಜೇಶ್ವರಾಃ= ಪ್ರಜಾಪಾಲಕರಾದ ರಾಜಾನಃ=ರಾಜರು ಸರ್ವೇ=ಎಲ್ಲರೂ ಸರ್ವವಿದಃ=ಎಲ್ಲವನ್ನೂ ತಿಳಿದವರು ಶೂರಾಃ=ಪರಾಕ್ರಮಿಗಳು ಸರ್ವಜಿತಾಃ=ಎಲ್ಲವನ್ನು ಗೆದ್ದವರು ಅಜಿತಾಃ= ತಾವು ಸೋಲದವರು.

ಮರ್ತ್ಯಧರ್ಮಿಣಃ=ಮರಣ ಸ್ವಭಾವದ ಶರೀರವುಳ್ಳ ಏತೇ=ಇವರು ಅಮರ್ತ್ಯಾಯಾಂ=ಮರಣ ರಹಿತಳಾದ ಮಯಿ=ನನ್ನಲ್ಲಿ ಉಚ್ಚೈಃ=ಬಹಳವಾಗಿ ಮಮತಾಂ ಕೃತ್ವಾ=ಇಲ್ಲದಿರುವ ಸ್ವಾಮಿತ್ವವನ್ನು ತಿಳಿದು ಅಭಿಮಾನ ಮಾಡಿ ಅಕೃತಾರ್ಥಾಃ=ಪೂರ್ಣವಾಗದಿರುವ ಸಂಕಲ್ಪವುಳ್ಳವರಾಗಿ ಮನೋಭಿಲಾಷೆ ತೀರದಿರುವಾಗಲೇ ಕಾಲೇನ=ಕಾಲ ಬಲದಿಂದ ಕಥಾವಶೇಷಾ ಕೃತಾ ಅಹೋ=ಅವರ ಕಥೆ ಮಾತ್ರ ಉಳಿಯಿತೇ ಹೊರತು ಅವರು ಉಳಿಯಲಿಲ್ಲ ಆಶ್ಚರ್ಯವು.

**ಕಥಾ ಇಮಾಸ್ತೇ ಕಥಿತಾ ಮಹೀಯಸಾಂ**
**ವಿತಾಯ ಲೋಕೇಷು ಯಶಃ ಪರೇಯುಷಾಮ್ ।**
**ವಿಜ್ಞಾನವೈರಾಗ್ಯವಿವಕ್ಷಯಾ ವಿಭೋ**
**ವಚೋ ವಿಭೂತಿರ್ನತು ಪಾರಮಾರ್ಥ್ಯಮ್** ॥ ೧೪ ॥

ಲೋಕೇಷು=ಜಗತ್ತಿನಲ್ಲಿ ತೇ=ನಿನ್ನ ಯಶಃ=ಕೀರ್ತಿಯನ್ನು ವಿತತ್ಯ=ವಿಸ್ತಾರಗೊಳಿಸಿ ಪರೇಯುಷಾಂ=ಪರಲೋಕಕ್ಕೆ ತೆರಳಿದ ಮಹೀಯಸಾಂ=ಮನು ಮುಂತಾದ ಉತ್ತಮ ಪುರುಷರ ಇಮಾಃ=ಈ ಚರಿತ್ರೆಗಳು ಮಯಾ=ನನ್ನಿಂದ ವಿಜ್ಞಾನವೈರಾಗ್ಯವಿವಕ್ಷಯಾ= ಯೋಗ್ಯರಾದ ಮನುಷ್ಯರಿಗೆ ವೈರಾಗ್ಯ-ಜ್ಞಾನಗಳುಂಟಾಗಲಿ ಎಂದು ಕಥಿತಾಃ= ಹೇಳಲ್ಪಟ್ಟಿವೆ. ನತು ಪಾರಮಾರ್ಥ್ಯಂ=ಇದೇ ಮುಖ್ಯವೆಂದಲ್ಲ. ವಚೋವಿಭೂತಿಃ= ಉಳಿದ ವಾಕ್ಯಗಳು ಬಹಳವಾಗಿವೆಯಷ್ಟೇ. ನ ಪಾರಮಾರ್ಥ್ಯಂ=ಪುರುಷಾರ್ಥ ಸಾಧನವಲ್ಲ 'ವಾಚೋ ವಾಗ್ಲಾಪನಂ ಹಿ ತತ್' ಎಂದುದರಿಂದ ಅನ್ಯವಿಷಯಕವಾದ ಬಹುಮಾತುಗಳು ಉಪಯೋಗವಿಲ್ಲ. ಅಥವಾ ವಾಚೋವಿಭೂತಿ ರಾಜರ ಕೃತಿಗಳನೇಕವಾದುದರಿಂದ ನಾನಾವಿಧವಾಗಿದೆ. ನತು ಪಾರಮಾರ್ಥ್ಯಂ=ಮುಖ್ಯ- ಪ್ರಯೋಜನವುಳ್ಳದ್ದಲ್ಲ ಆದರೆ ಮುಖ್ಯಾರ್ಥಕ್ಕೆ ಕಾರಣವಾದ್ದರಿಂದ ಕೇಳಲು ಯೋಗ್ಯವೆ.

**ವಿಶೇಷ-** ರಾಜರ ವೈಭವ ವರ್ಣನವೇ ಪರಮ ಪುರುಷಾರ್ಥವಲ್ಲ, ಕಿಂತು ಆ ವೈಭವವು ಶ್ರೀಹರಿಯ ಅನುಗ್ರಹದಿಂದ ಬಂದದ್ದು. ಆದರೆ ನಶ್ವರವೆಂದು ತಿಳಿದು ಭಗವಂತನ ಉತ್ತಮತ್ವ ಜ್ಞಾನ ಮಾಡಿಕೊಂಡು ಉಳಿದವು ಅನಿತ್ಯವೆಂದು ವೈರಾಗ್ಯ ತಾಳಿರಿ ಎನ್ನುವದಕ್ಕಾಗಿಯೇ ಈ ಕಥೆಗಳು ಆದರಣೀಯವೆಂದು ತಿಳಿಯುವುದು.

*ಶ್ರೀಹರಿಯ ಗುಣಕಥನವನ್ನು ಮಾಡುವರು*

**ಯತ್ರೋತ್ತಮಶ್ಲೋಕಗುಣಾನುವಾದಃ ಸಂಗೀಯತೇऽಭೀಕ್ಷ್ಣಮಮಂಗಲಘ್ನಃ ।**
**ತಮೇವ ನಿತ್ಯಂ ಶ್ರುಣುತಾದಭೀಕ್ಷ್ಣಂ ಕೃಷ್ಣೇऽಮಲಾಂ ಭಕ್ತಿಮಭೀಪ್ಸಮಾನಃ ॥ ೧೫ ॥**

ಯತ್ರ=ಯಾವ ಗ್ರಂಥದಲ್ಲಿ ಅಮಂಗಲಘ್ನಃ=ಅಶುಭನಾಶಕವಾದ ಉತ್ತಮಶ್ಲೋಕಗುಣಾನುವಾದಃ=ಉತ್ತಮರಾದ ರಮಾಬ್ರಹ್ಮಾದಿಗಳಿಂದ ಕೀರ್ತನೀಯವಾದ ಶ್ರೀಹರಿಯ ಗುಣಕಥನವು ಸಂಗೀಯತೇ=ಮುಖ್ಯವಾಗಿ ಗಾನಮಾಡಲ್ಪಡುವದೋ ಅಂಥಹ ಅಭೀಕ್ಷ್ಣಂ=ಅಪೇಕ್ಷಿತವಾದದ್ದನ್ನು ಕೊಡುವ ತಂ ಏವ=ಆ ಗುಣಕಥಾವನ್ನು ಕೃಷ್ಣೇ=ಶ್ರೀಕೃಷ್ಣನಲ್ಲಿ ಅಮಲಾಂ ಭಕ್ತಿಂ=ನಿರ್ಮಲವಾದ ಭಕ್ತಿಯನ್ನು ಅಭೀಪ್ಸಮಾನಃ=ಇಚ್ಛಿಸುವವರು ಶ್ರುಣುತಾತ್=ಕೇಳಿರಿ.

ರಾಜೋವಾಚ

**ಕೇನೋಪಾಯೇನ ಭಗವನ್ ಕಲೇರ್ದೋಷಾನ್ ಕಲೌ ಜನಾಃ ।**
**ವಿಧಮಿಷ್ಯಂತ್ಯುಪಚಿತಾಂ ತನ್ಮೇ ಬ್ರೂಹಿ ಯಥಾ ಮುನೇ ॥ ೧೬ ॥**

ಹೇ ಭಗವನ್=ಪೂಜ್ಯರಾದ ಮುನೇ=ಜ್ಞಾನಿಗಳಾದ ಶುಕಾಚಾರ್ಯರೇ ಕಲೌ=ಕಲಿಯುಗದಲ್ಲಿರುವ ಜನಾಃ=ಜನರು ಕಲೇಃ=ಕಲಿಯಿಂದ ಉಂಟಾದ ಉಪಚಿತಾನ್=ಬಹಳವಾಗಿ ಬೆಳೆದ ದೋಷಾನ್=ದೋಷಗಳನ್ನು ಕೇನ ಉಪಾಯೇನ=ಯಾವ ಉಪಾಯದಿಂದ ವಿಧಮಿಷ್ಯಂತಿ=ಪರಿಹರಿಸಿಕೊಳ್ಳುವರು ತತ್=ಆ ಉಪಾಯವನ್ನು ಮೇ=ನನಗೆ ಯಥಾ=ಯಥಾವತ್ತಾಗಿ ಬ್ರೂಹಿ=ಹೇಳಿರಿ.

**ಯುಗಾನಿ ಯುಗಮಾನಂ ಚ ಮಾನಂ ಪ್ರಲಯಕಲ್ಪಯೋಃ ।**
**ಕಾಲಸ್ಯೇಶ್ವರರೂಪಸ್ಯ ಗತಿಂ ವಿಷ್ಣೋರ್ಮಹಾತ್ಮನಃ ॥ ೧೭ ॥**

ಯುಗಾನಿ=ಯುಗಗಳು ಯುಗಮಾನಂ=ಯುಗಗಳ ಪ್ರಮಾಣವನ್ನು ಪ್ರಲಯ ಕಲ್ಪಯೋಃ=ನಾಶ-ಸ್ಥಿತಿಗಳ ಮಾನಂ=ಪ್ರಮಾಣವನ್ನು ಮಹಾತ್ಮನಃ=ವ್ಯಾಪ್ತನಾದ ಕಾಲಸ್ಯ=ಕಾಲನಾಮಕನಾದ ಈಶ್ವರಸ್ಯ ರೂಪಸ್ಯ=ನಿಯಾಮಕರನ್ನು ನಿಯಮಿಸುವ ವಿಷ್ಣೋಃ ಗತಿಂ=ಶ್ರೀಹರಿಯ ಗಮನ ಪ್ರಕಾರವನ್ನು ಬ್ರೂಹಿ=ಹೇಳಿರಿ.

*ಪ್ರಶ್ನೆಯ ಪ್ರಕಾರ ಕಲಿದೋಷ ನಿರಾಕರಣ ರೀತಿಯನ್ನು ಮೊದಲೇ ಹೇಳಬೇಕಿದ್ದರೂ ಯುಗಧರ್ಮ ಹೇಳಿದ ಮೇಲೆ ಅದನ್ನು ಹೇಳುವುದು ಸುಲಭ. ಆದರಲ್ಲಿ ಕೃತಯುಗ ಪ್ರಧಾನವಾದ ಕಾರಣ ಅದರ ಧರ್ಮಗಳನ್ನು ಮೊದಲಿಗೆ ಹೇಳುವರು.*

ಶ್ರೀಶುಕ ಉವಾಚ

**ಕೃತೇ ಪ್ರವರ್ತತೇ ಧರ್ಮಶ್ಚತುಷ್ಪಾತ್ ತಜ್ಜನೈರ್ಧೃತಃ ।**
**ಸತ್ಯಂ ದಯಾ ತಪೋ ದಾನಮಿತಿ ಪಾದಾ ವಿಭೋ ನೃಪ ॥ ೧೮ ॥**

ಹೇ ನೃಪ=ರಾಜನೇ ಕೃತೇ=ಕೃತಯುಗದಲ್ಲಿ ತಜ್ಜನೈಃ=ಆ ಯುಗದಲ್ಲಿ ಜನಿಸಿದ ಜನರಿಂದ ಸತ್ಯಂ=ಭೂತಹಿತವು ದಯಾ=ತನ್ನಕ್ಕಿಂತ ಕಡಿಮೆಯಾದವರಲ್ಲಿ ಕೃಪೆ ಮಾಡುವದು ತಪಃ=ಕೃಚ್ಛ್ರ ಚಾಂದ್ರಾಯಣಾದಿಗಳು ದಾನಂ=ಸತ್ಪಾತ್ರರಿಗೆ ಹಣ ನೀಡುವದು ಈ ನಾಲ್ಕು ಪಾದಗಳು ಚತುಷ್ಪಾತ್ ಧರ್ಮಃ=ಈ ನಾಲ್ಕು ಪಾದಗಳಿಂದ ಸಹಿತವಾದ ಧರ್ಮಃ=ಧರ್ಮವು ಧೃತಃ=ಧರಿಸಲ್ಪಟ್ಟದ್ದಾಗಿ ಪ್ರವರ್ತತೇ=ನಡೆಯುವದು.

*ಆಗಿನ ಜನರ ಲಕ್ಷಣವನ್ನು ಹೇಳುವರು.*

**ಸಂತುಷ್ಟಾಃ ಕರುಣಾ ಮೈತ್ರಾಃ ಶಾಂತಾ ದಾಂತಾಸ್ತಿತಿಕ್ಷವಃ ।**
**ಆತ್ಮಾರಾಮಾಃ ಸಮದೃಶಃ ಪ್ರಾಯಃ ಆಶ್ರಮಿಣೋ ಜನಾಃ ॥ ೧೯ ॥**

ಸಂತುಷ್ಟಾಃ=ಭಗವಂತನ ಇಚ್ಛಾನುಸಾರ ದೊರತದ್ದರಿಂದ ಸಂತೋಷವುಳ್ಳವರು ಮೈತ್ರಾಃ=ಸಜ್ಜನರಲ್ಲಿ ಸ್ನೇಹವುಳ್ಳವರು ಶಾಂತಾಃ ಚ=ಭಗವನಿಷ್ಠೆಯುಳ್ಳವರು ದಾಂತಾಃ=ಇಂದ್ರಿಯನಿಗ್ರಹವುಳ್ಳವರು ತಿತಿಕ್ಷವಃ ಚ=ಸಹನಶೀಲರು(ಸುಖದುಃಖ ಮೊದಲಾದ ದ್ವಂದ್ವ ಸಹಿಷ್ಣುಗಳು)ಆತ್ಮಾರಾಮಾಃ=ಭಗವಂತನಲ್ಲೇ ಸಂತೋಷ-ಪಡುವವರು ಸಮದೃಶಃ=ವಸ್ತುಗಳನ್ನು ಯಥಾರ್ಥವಾಗಿ ತಿಳಿಯುವವರು ಮತ್ತು ಭಗವಂತನನ್ನು ಎಲ್ಲೆಡೆ ಇರುವನು ನಿರ್ದೋಷನು ಎಂದು ತಿಳಿಯುವವರು. ಪ್ರಾಯಃ=ಬಹಳವಾಗಿ ಜನಾಃ=ಜನರು ಆಶ್ರಮಿಣಃ=ಪ್ರಶಸ್ತವಾದ ಆಶ್ರಮವುಳ್ಳವರು. (ನಾಲ್ಕೂ ಆಶ್ರಮಗಳೂ ಸರಿಯಾಗಿ ನಡೆಯುವವು ಎಂದರ್ಥ.)

*ಕ್ರಮ ಪ್ರಾಪ್ತವಾದ ತ್ರೇತಾಯುಗದ ಧರ್ಮವನ್ನು ಹೇಳುವರು.*

**ತ್ರೇತಾಯಾಂ ಧರ್ಮಪಾದಾನಾಂ ತುರ್ಯಾಂಶೋ ಹೀಯತೇ ಶನೈಃ ।**
**ಅಧರ್ಮಪಾದೈರನೃತಹಿಂಸಾಽಸಂತೋಷವಿಗ್ರಹೈಃ ॥ ೨೦ ॥**

ತ್ರೇತಾಯಾಂ=ತ್ರೇತಾಯುಗದಲ್ಲಿ ಧರ್ಮಪಾದಾನಾಂ=ಧರ್ಮದ ನಾಲ್ಕು ಪಾದಗಳ ಮಧ್ಯದಲ್ಲಿ ತುರ್ಯಃ ಅಂಶಃ=ನಾಲ್ಕನೆಯದಾದ ದಾನವು(ಶನೈಃ ಹೀಯತೇ) ಅಧರ್ಮಪಾದೈಃ=ಅಧರ್ಮದ ಅಂಶಗಳಾದ ಅನೃತಹಿಂಸಾಸಂತೋಷವಿಗ್ರಹೈಃ=ಸುಳ್ಳು ಹೇಳುವದು,ಪ್ರತ್ಯಕ್ಷವಾಗಿಯೋ ಅಪ್ರತ್ಯಕ್ಷವಾಗಿಯೋ ತೊಂದರೆ ಕೊಡುವದು,

ಅಸಂತೋಷ, ಅಲಂಬುದ್ಧಿ ಇಲ್ಲದಿರುವದು, ಜಗಳ, ಇವುಗಳಿಂದ ಕ್ರಮವಾಗಿ ನಿಧಾನವಾಗಿ ಕಡಿಮೆಯಾಗುವದು.

*ಆಗಿನ ಜನರ ಧರ್ಮ ಹೇಳುವರು.*

**ತದಾ ಕ್ರಿಯಾ ತಪೋ ನಿಷ್ಠಾ ನಾತಿಹಿಂಸ್ರಾ ನ ಲಂಪಟಾಃ ।**
**ತ್ರೈವರ್ಗಿಕಾಸ್ತ್ರಯೀ ವೃದ್ಧಾ ವರ್ಣಾ ಬ್ರಹ್ಮೋತ್ತರಾ ನೃಪಾಃ ॥ ೨೧ ॥**

ತದಾ=ತ್ರೇತಾಯುಗದಲ್ಲಿ ಕ್ರಿಯಾ=ಯಜ್ಞಮುಂತಾದವು ತಪಃ=ಚಾಂದ್ರಾಯಣಾದಿಗಳು ಅವುಗಳಲ್ಲಿ ನಿಷ್ಠಾಃ=ಆಸಕ್ತರು ನ ಅತಿಹಿಂಸ್ರಾಃ=ಬಹಳ ಹಿಂಸೆ ಮಾಡುವವರಲ್ಲ ನ ಲಂಪಟಾಃ=ವಿಷಯಾಭಿಲಾಷೆಯಿಲ್ಲದವರು ತ್ರೈವರ್ಗಿಕಾಃ=ಧರ್ಮ,ಅರ್ಥ,ಕಾಮಗಳನ್ನು ಇಚ್ಛಿಸುವವರು ತ್ರಯೀವೃದ್ಧಾಃ=ವೇದವಿದ್ಯಾವಿಶಾರದರು, ಅಧ್ಯಯನ, ಅಧ್ಯಾಪನಗಳಿಂದ ವೇದವನ್ನು ಪೋಷಿಸುವವರು ನೃಪಾಃ=ರಾಜರು ಬ್ರಹ್ಮೋತ್ತರಾಃ ವರ್ಣಾಃ=ಬ್ರಾಹ್ಮಣರೇ ಉತ್ತಮರಾಗಿವುಳ್ಳವರು ಇತರ ವರ್ಣದವರು (ಬ್ರಾಹ್ಮಣರ ಅಧಿಕತೆಯನ್ನು ಒಪ್ಪುವರೆಂದರ್ಥ.)

**ತಪಃಸತ್ಯದಯಾದಾನೇಷ್ವರ್ಧಂ ಹ್ರಸತಿ ದ್ವಾಪರೇ ।**
**ಹಿಂಸಾऽತುಷ್ಟ್ಯನೃತದ್ವೇಷೈರ್ಧರ್ಮಸ್ಯಾಧರ್ಮಲಕ್ಷಣೈಃ ॥ ೨೨ ॥**

ಅಧರ್ಮಲಕ್ಷಣೈಃ ಚ=ಅಧರ್ಮದ ಪಾದಗಳಾದ ಹಿಂಸಾತುಷ್ಟಿಅನೃತದ್ವಷೈಃ= ಹಿಂಸೆ,ಅತೃಪ್ತಿ,ಸುಳ್ಳು,ಮಿತ್ರಭೇದಗಳಿಂದ ಧರ್ಮಸ್ಯ=ಧರ್ಮದ ತಪಃಸತ್ಯದಯಾ-ದಾನೇಷು=ತಪಸ್ಸು,ಸತ್ಯ,ದಯಾ,ದಾನಗಳಲ್ಲಿ ಅರ್ಧಂ=ಎರಡು ಅಂಶಗಳು ದ್ವಾಪರೇ=ದ್ವಾಪರಯುಗದಲ್ಲಿ ಹ್ರಸತಿ=ಕಡಿಮೆಯಾಗುವದು. (ಇದರಿಂದ ದ್ವೌ=ಎರಡು ಪರೌ=ಧರ್ಮಪಾದಗಳು ನಾಶವಾಗುವವು ಅಥವಾ ಉಳಿಯುವವು. ಇದೆಲ್ಲ ಯಾವ ಯುಗದಲ್ಲಿ ನಡೆಯುವದೋ ಅದು ದ್ವಾಪರ. ಇದು ದ್ವಾಪರವೆಂಬ ಶಬ್ದನಿರ್ವಚನ ದಿಂದಲೇ ಸೂಚಿತವಾಗುವದು.

**ವಿಶೇಷ-** ಇಲ್ಲಿ ಪೂರ್ವಾರ್ಧದಲ್ಲಿಯಾಗಲಿ ಉತ್ತರಾರ್ಧದಲ್ಲಿ ಯಾಗಲಿ ಪಾಠಕ್ರಮ ವಿವಕ್ಷಿತವಲ್ಲ. ಅಂತೂ ಎರಡು ಪಾದಗಳು ಕಡಮೆಯಾಗುವದರಲ್ಲೇ ತಾತ್ಪರ್ಯವು. ಯಾವುದರಿಂದ ಯಾವುದು ಹೋಗುವದೋ ಹಾಗೆ ನಿರೂಪಿಸಬೇಕು.

**ಯಶಸ್ವಿನೋ ಮಹಾಶಾಲಾಃ ಸ್ವಾಧ್ಯಾಯಾಧ್ಯಯನೇ ರತಾಃ ।**
**ಆಢ್ಯಾ ಕುಟುಂಬಿನೋ ದೃಷ್ಟಾ(ದೃಪ್ತಾಃ)ವರ್ಣಾಕ್ಷತ್ರದ್ವಿಜೋತ್ತಮಾಃ ॥ ೨೩ ॥**

ಮಹಾಶಾಲಾಃ=ಯಜ್ಞಮಾಡತಕ್ಕವರು ಯಶಸ್ವಿನಃ=ಕೀರ್ತಿಯುಳ್ಳವರು ಸ್ವಾಧ್ಯಾಯಾಧ್ಯಯನೇ ರತಾಃ=ವೇದಾಧ್ಯಯನದಲ್ಲಿ ಆಸಕ್ತರು ಆಢ್ಯಾಃ=ಸಂಪತ್ತುವುಳ್ಳವರು ಕುಟುಂಬಿನಃ=ಗೃಹಸ್ಥಾಶ್ರಮಿಗಳು ಕ್ಷತ್ರದ್ವಿಜೋತ್ತಮಾಃ ವರ್ಣಾಃ ದೃಷ್ಟಾಃ=ಕ್ಷತ್ರಿಯರು ಮತ್ತು ಬ್ರಾಹ್ಮಣರು ಉತ್ತಮರು ಎಂದು ಕಾಣುವರು ಇತರ ವರ್ಣದವರು.

**ಕಲೌ ತು ಧರ್ಮಹೇತೂನಾಂ ಪರ್ಯಾಸೋಽಧರ್ಮಹೇತುಭಿಃ ।**
**ಏಧಮಾನೈಃ ಕ್ಷೀಯಮಾಣೋ ಹ್ಯಂತೇ ಸೋಽಪಿ ವಿನಂಕ್ಷ್ಯತಿ ॥ ೨೪ ॥**

ಕಲೌ ತು=ಕಲಿಯುಗದಲ್ಲಾದರೂ ಏಧಮಾನೈಃ=ಬೆಳೆದಿರುವ ಅಧರ್ಮಹೇತುಭಿಃ= ಅಧರ್ಮ ಕಾರಣಗಳಿಂದ ಧರ್ಮಹೇತೂನಾಂ=ಧರ್ಮ ಕಾರಣಗಳ ಪರ್ಯಾಸಃ= ನಾಶವಾಗುವದು ಸೋಽಪಿ=ಧರ್ಮವೂ ಸಹ ಕ್ಷೀಯಮಾಣಃ=ಕಡಿಮೆಯಾಗುತ್ತ ಅಂತೇ=ಕೊನೆಗೊಮ್ಮೆ ವಿನಶ್ಯತಿ=ನಾಶವಾಗುವದು.

**ತಸ್ಮಿನ್ ಲುಬ್ಧಾ ದುರಾಚಾರಾಃ ನಿರ್ದಯಾ ಶುಷ್ಕವೈರಿಣಃ ।**
**ದುರ್ಭಗಾಃ ಭೂರಿದರ್ಷಾಶ್ಚ ಶೂದ್ರದಾಸೋತ್ತರಾಃ ಪ್ರಜಾಃ ॥ ೨೫ ॥**

ಪ್ರಜಾಃ=ಜನರು ತಸ್ಮಿನ್=ಕಲಿಯುಗದಲ್ಲಿ ಲುಬ್ಧಾಃ=ಲೋಭಿಗಳು ದುರಾಚಾರಾಃ= ನಿಷಿದ್ಧಕಾರ್ಯ ಮಾಡುವವರು ನಿರ್ದಯಾಃ=ಕರುಣೆ ಇಲ್ಲದವರು ಶುಷ್ಕವೈರಿಣಃ= ಕಾರಣ ಪ್ರಯೋಜನವಿಲ್ಲದೆ ದ್ವೇಷ ಮಾಡುವವರು. ದುರ್ಭಗಾಃ=ದುರ್ದೈವಿಗಳು ಭೂರಿದರ್ಷಾಃ=ಬಹಳ ಸಿಟ್ಟಿನವರು ಶೂದ್ರದಾಸೋತ್ತರಾಃ=ಮೇಲಿನ ವರ್ಣದವರು ಶೂದ್ರರ ದಾಸರಾಗುವರು.

**ಸತ್ವಂ ರಜಸ್ತಮ ಇತಿ ದೃಶ್ಯಂತೇ ಪುರುಷೇ ಗುಣಾಃ ।**
**ಕಾಲಸಂಚೋದಿತಾಸ್ತೇ ವೈ ಪರಿವರ್ತಂತ ಆತ್ಮನಿ ॥ ೨೬ ॥**

ಪುರುಷೇ=ಮನುಷ್ಯನಲ್ಲಿ ಸತ್ವಂ ರಜಃ ತಮ ಇತಿ ಗುಣಾಃ ದೃಶ್ಯಂತೇ=ಸತ್ವ ರಜ, ತಮೋ ಎಂಬ ಗುಣಗಳು ಕಂಡುಬರುವವು. ತೇ=ಅವುಗಳು ಕಾಲಸಂಚೋದಿತಾಃ ಚ=ಮುಖ್ಯವಾಗಿ ಕಾಲ ನಾಮಕ ಶ್ರೀಹರಿಯಿಂದಲೂ ಅಮುಖ್ಯವಾಗಿ ಕಾಲದಿಂದಲೂ ಪ್ರೇರಿತವಾಗಿ ಆತ್ಮನಿ=ಮನಸ್ಸಿನಲ್ಲಿ ಪರಿವರ್ತಂತೇ=ಒಂದಾದ ಮೇಲೆ ಒಂದರಂತೆ ಇರುವವು.

**ಪ್ರಸೀದತಿ ಯದಾ ಸತ್ತ್ವಂ ಮನೋಬುದ್ಧೀಂದ್ರಿಯಾಣಿ ಚ ।**
**ಪದಾ ಕೃತಯುಗಂ ವಿದ್ಯಾತ್ ಜ್ಞಾನೇ ತಪಸಿ ಯದ್ರುಚಿಃ ॥ ೨೭ ॥**

ಯದಾ=ಯಾವಾಗ ಸತ್ವಂ ಪ್ರಸೀದತಿ=ಸತ್ವಗುಣವು ತನ್ನ ಕಾರ್ಯೋನ್ಮುಖವಾಗುವದೋ ಮನೋಬುದ್ಧೀಂದ್ರಿಯಾಣಿ ಚ=ಮನಸ್ಸು ಬುದ್ಧಿ ಇಂದ್ರಿಯಗಳು ಸತ್ವಗುಣಾನುಸಾರ ಪ್ರಸನ್ನವಾಗುವವು ತದಾ=ಆಗ ಕೃತಯುಗಂ ವಿದ್ಯಾತ್=ಕೃತಯುಗವು ಬಂದಿತೆಂದು ತಿಳಿಯಬೇಕು. ಯತಃ=ಯಾವ ಮನಃಪ್ರಸಾದಾದಿಗಳಿಂದ, ಕೃತಯುಗ ಪ್ರಭಾವದಿಂದ ಜ್ಞಾನೇ=ಜ್ಞಾನದಲ್ಲಿ ತಪಸಿ=ತಪಸ್ಸಿನಲ್ಲಿ ರುಚಿಃ=ಆಸಕ್ತಿಯು ಇರುವದು.

**ಯದಾ ಧರ್ಮೇಷು ಕಾಮೇಷು ಭಕ್ತಿರ್ಯಶಸಿ ದೇಹಿನಾಮ್ ।**
**ತದಾ ತ್ರೇತಾರಜೋವೃತ್ತಿರಿತಿ ಜಾನೀತ ಬುದ್ಧಿಮಾನ್ ॥ ೨೮ ॥**

ಯದಾ=ಯಾವಾಗ ಧರ್ಮೇಷು=ಧರ್ಮಗಳಲ್ಲಿ ಕಾಮೇಷು=ಕಾಮ್ಯಕರ್ಮಗಳಲ್ಲಿ ಮತ್ತು ವಿಷಯಗಳಲ್ಲಿ ದೇಹಿನಾಂ=ಜನರಿಗೆ ಯಶಸಿ=ಕೀರ್ತಿಯನ್ನು ಸಂಪಾದಿಸುವಲ್ಲಿ ಭಕ್ತಿಃ=ಸ್ನೇಹವು ಉಂಟಾಗುವದೋ ತದಾ=ಆಗ ಬುದ್ಧಿಮಾನ್=ಬುದ್ಧಿವಂತನನ್ನು ರಜೋವೃತ್ತಿಃ=ರಜೋಗುಣ ಕಾರ್ಯವಾದ ತ್ರೇತಾ ಇತಿ ಜಾನೀತ=ತ್ರೇತಾಯುಗ ಬಂದಿತೆಂದು ತಿಳಿಯಬೇಕು.

**ಯದಾ ಲೋಭಸ್ತ್ವಸಂತೋಷೋ ಮಾನೋ ದಂಭೋಽಥ ಮತ್ಸರಃ ।**
**ಕರ್ಮಣಾಂ ಚಾಪಿ ಕಾಮ್ಯಾನಾಂ ದ್ವಾಪರಂ ತದ್ರಜಸ್ತಮಃ ॥ ೨೯ ॥**

ಯದಾ=ಯಾವಾಗ ಲೋಭಃ=ಜಿಪುಣತೆಯು ಅಸಂತೋಷಃ=ಸಂತೋಷವಿಲ್ಲದಿರುವದು ಮಾನಃ=ಅಭಿಮಾನವು ದಂಭಃ=ಇಲ್ಲದಿರುವ ಮಹತ್ವವನ್ನು ತೋರಿಸುವದು ಅಥ=ಮತ್ತು ಮತ್ಸರಃ=ಮಾತ್ಸರ್ಯವು ಕಾಮ್ಯಾನಾಂ ಕರ್ಮಣಾಂ ಚಾಪಿ=ಕಾಮ್ಯಕರ್ಮವಿಷಯದಲ್ಲಿ ಆಸಕ್ತಿಯುಂಟಾಗುವದೋ ತದಾ=ಆಗ ಅದು ರಜಸ್ತಮಃ=ರಜೋಗುಣ ತಮೋಗುಣಗಳಿಂದ ಪ್ರವರ್ತಿತವಾದ ದ್ವಾಪರಂ=ದ್ವಾಪರಯುಗವೆಂದು ಜಾನೀಹಿ=ತಿಳಿ

**ಯದಾ ಮಾಯಾನೃತಂ ತಂದ್ರಾನಿದ್ರಾಹಿಂಸಾವಿಷಾದನಮ್ ।**
**ಶೋಕಮೋಹೌ ಭಯಂ ದೈನ್ಯಂ ಸ ಕಲಿಸ್ತಾಮಸಃ ಸ್ಮೃತಃ ॥ ೩೦ ॥**

ಯದಾ=ಯಾವಾಗ ಮಾಯಾನೃತಂ=ಕಪಟತನವು, ಸುಳ್ಳುಹೇಳುವದು ತಂದ್ರಾನಿದ್ರಾಹಿಂಸಾವಿಷಾದನಮ್=ಆಲಸ್ಯ-ನಿದ್ರೆ-ಹಿಂಸೆ-ತನ್ನ ಮನಸ್ಸಿಗೂ ಪರರಿಗೂ ದುರ್ಬಲತೆಯನ್ನುಂಟು ಮಾಡುವದು ಶೋಕಮೋಹೌ=ದುಃಖ,ಮೂರ್ಛೆ ಅಥವಾ ಭ್ರಮವು ಭಯಂ=ಭಯವು ಹೆದರಿಕೆ ದೈನ್ಯಂ=ದೀನತೆಯು ಉಂಟಾಗುವವೋ ಸಃ ಚ= ಅದು ತಾಮಸಃ ಕಲಿಃ ಸ್ಮೃತಃ=ತಮೋಗುಣದಿಂದ ಪ್ರವರ್ತಿಸುವ ಕಲಿಯುಗವೆಂದು ಹೇಳಲ್ಪಟ್ಟಿದೆ.

**ಯಸ್ಮಾತ್ ಕ್ಷುದ್ರದೃಶೋ ಮರ್ತ್ಯಾಃ ಕ್ಷುದ್ರಭಾಗ್ಯಾ ಮಹಾಶನಾಃ ।**
**ಕಾಮಿನಃ ವೃತ್ತಿಹೀನಾಶ್ಚ ಸ್ವೈರಿಣ್ಯಶ್ಚ ಸ್ತ್ರಿಯೋಽಸತೀಃ** ॥ ೩೧ ॥

ಯಸ್ಮಾತ್=ಯಾವ ಕಲಿಯ ದೋಷದಿಂದ ಕ್ಷುದ್ರದೃಶಃ=ಅಲ್ಪಜ್ಞಾನವುಳ್ಳವರು ಕ್ಷುದ್ರಭಾಗ್ಯಾಃ=ಮಂದಭಾಗ್ಯರು ಮಹಾಶನಾಃ=ಏಕಾಂತದಲ್ಲಿ ಪಂಕ್ತಿಪಾವನರಲ್ಲದವರ ಪಂಕ್ತಿಯಲ್ಲಿ ಗುರುಭೋಜನ ಮಾಡುವವರು ವೃತ್ತಿಹೀನಾಃ=ಜೀವನೋಪಾಯ- ವಿಲ್ಲದವರು ಕಾಮಿನಃ=ವ್ಯಭಿಚಾರಿಗಳು ಮರ್ತ್ಯಾಃ=ಜನರಲ್ಲಿ ಹೇಳಿದಂತಿರುವರು ಸ್ತ್ರಿಯಃ ಚ= ಸ್ತ್ರೀಯರೂ ಕೂಡ ಅಸತೀಃ=ದುಷ್ಟರು ಸ್ವೈರಿಣ್ಯಃ=ವ್ಯಭಿಚಾರಿಣಿಯರು ಆಗುವರು.

**ದಸ್ಯೂತ್ಕೃಷ್ಟಾ ಜನಪದಾ ವೇದಾ ಪಾಖಂಡದೂಷಿತಾಃ ।**
**ರಾಜನ್ಯಶ್ಚ ಪ್ರಜಾಭಕ್ಷಾಃ ಶಿಶ್ನೋದರಪರಾ ದ್ವಿಜಾಃ** ॥ ೩೨ ॥

ದಸ್ಯೂತ್ಕೃಷ್ಟಾಃ=ಕಳ್ಳರಿಂದ ತುಂಬಿದ ಜನಪದಾಃ=ದೇಶಗಳು ವೇದಾಃ=ವೇದಗಳು ಪಾಖಂಡದೂಷಿತಾಃ=(ಪಾಪಚಿಹ್ನೆವುಳ್ಳವರಿಂದ)ವಿಪರೀತಾರ್ಥಮಾಡುವುದರಿಂದ ಕಲುಷಿತವಾದವುಗಳಾಗುತ್ತವೆ. ರಾಜನ್ಯಃ=ರಾಜರು ಪ್ರಜಾಭಕ್ಷ್ಯಾಃ=ಪ್ರಜೆಗಳನ್ನೇ ತಿನ್ನುವವರು ದ್ವಿಜಾಃ=ಬ್ರಾಹ್ಮಣರು ಶಿಶ್ನೋದರಪರಾಃ=ಅಶನ ವ್ಯಸನಗಳಲ್ಲಿ ಮಾತ್ರ ಆಸಕ್ತರು ಆಗುತ್ತಾರೆ.

**ಅವ್ರತಾ ವಟವೋಽಶೌಚಾ ಭಿಕ್ಷವಶ್ಚ ಕುಟುಂಬಿನಃ ।**
**ತಪಸ್ವಿನೋ ಗ್ರಾಮವಾಸಾ ನ್ಯಾಸಿನೋಽತ್ಯ(ಪ್ಯ)ರ್ಥಲೋಲುಪಾಃ** ॥ ೩೩ ॥

ವಟವಃ=ಬ್ರಹ್ಮಚಾರಿಗಳು ಅವ್ರತಾಃ=ಮಹಾವ್ರತ ಅಗ್ನಿಕಾರ್ಯ ಮುಂತಾದ ವ್ರತವಿಲ್ಲದವರು ಕುಟುಂಬಿನಃ=ಗೃಹಸ್ಥರು ಭಿಕ್ಷವಃ=ಭಿಕ್ಷುಕರಂತೆ ಯಾರಿಗೂ ಏನನ್ನು ಕೊಡಲಾರರು. ತಪಸ್ವಿನಃ=ವಾನಪ್ರಸ್ಥರು ಗ್ರಾಮವಾಸಾಃ=ಊರಿನಲ್ಲೇ ವಾಸಿಸುವವರು. ನ್ಯಾಸಿನಃ=ಹೊರಗೆ ವಿರಕ್ತರಂತೆ ಕಾಣುವ ಸಂನ್ಯಾಸಿಗಳು ಅರ್ಥಲೋಲುಪಾಃ=ಹಣ ಸಂಪಾದಿಸುವ ಆಶೆಯುಳ್ಳವರು ಅಶೌಚಾಃ=ಅವರವರಿಗೆ ವಿಹಿತವಾದ ಶುದ್ಧಿಯಿಲ್ಲದವರು ಆಗುವರು.

*ಭಾಮಿನಿಯರ ಸ್ಥಿತಿಯನ್ನು ಹೇಳುವರು.*

**ಹ್ರಸ್ವಕಾಯಾ ಮಹಾಹಾರಾ ಭೂರ್ಯಪತ್ಯಾಗತಹ್ರಿಯಃ ।**
**ಶಶ್ವತ್ಕಟುಕಭಾಷಿಣ್ಯಃ ಚೌರ್ಯಮಾಯೋರುಸಾಹಸಾಃ** ॥ ೩೪ ॥

ಹ್ರಸ್ವಕಾಯಾಃ=ಗಿಡ್ಡವಾದ ದೇಹವುಳ್ಳವರು ಮಹಾಹಾರಾಃ=ಬಹಳ ಆಹಾರ ತಿನ್ನುವವರು ಭೂರ್ಯಪತ್ಯಾಃ=ಬಹಳ ಮಕ್ಕಳುಳ್ಳವರು ಅಥವಾ ಬಹಳ ಜನರಿಂದ ಮಕ್ಕಳುಳ್ಳವರು ಗತಹ್ರಿಯಃ=ನಿರ್ಲಜ್ಜರು(ನಾಚಿಕೆ ಇಲ್ಲದವರು) ಶಶ್ವತ್ಕಟುಕಭಾಷಿಣ್ಯಃ= ಯಾವಾಗಲೂ ಪರರನ್ನು ನೋಯಿಸುವಂಥ ಮಾತನಾಡುವವರು ಚೌರ್ಯಮಾಯೋ-ರುಸಾಹಸಾಃ=ಕಳ್ಳತನ ಕಪಟತನಗಳಲ್ಲಿಯೇ ಅತಿಯಾದ ಸಾಹಸವುಳ್ಳವರು.

**ಪಣಯಿಷ್ಯಂತಿ ವೈ ಕ್ಷುದ್ರಾ ಕಿರಾಟಾನ್ ಕೂಟಕಾರಿಣಃ ।**
**ಅನಾಪದ್ಯಪಿ ಮಂಸ್ಯಂತೇ ವಾರ್ತಾಂ ಸಾಧುಜಿಗುಪ್ಸಿತಾಮ್ ॥ ೩೫ ॥**

ಕ್ಷುದ್ರಾಃ=ದರಿದ್ರರು ಕೂಟಕಾರಿಣಃ=ಕಪಟವ್ಯಾಪಾರ ಮಾಡುವವರು ಕಿರಾಟಾನ್= ಪಕ್ವವಾದ ಫಲಗಳನ್ನು(ಮಾರಬಾರದ್ದನ್ನು) ಪಣಯಿಷ್ಯಂತಿ=ಮಾರುವವರು ಅನಾಪದ್ಯಪಿ =ಆಪತ್ತು ಇಲ್ಲದಿರುವಾಗಲೂ ಸಾಧುಜಿಗುಪ್ಸಿತಾಂ=ಸಜ್ಜನರಿಂದ ನಿಂದಿತವಾದ ವಾರ್ತಾಂ=ಬಡ್ಡಿ ವ್ಯವಹಾರವನ್ನು ಮಂಸ್ಯಂತೇ=ಒಳ್ಳೆಯದೆಂದು ತಿಳಿಯುವರು.

**ವಿಶೇಷ-** ಕೂಟಕಾರಿಣಃ ಎಂಬುದಕ್ಕೆ ವಿಜಯಧ್ವಜರು ಗಂಜಿಗಾಗಿ ವಿವಾದ ಮಾಡುವವರು. ಅಥವಾ ಲೋಹವಿದ್ಯೆ ಸ್ವಭಾವವುಳ್ಳವರು ಎಂದು ಅರ್ಥಮಾಡಬಹುದು ಎನ್ನುತ್ತಾರೆ.

**ಪತಿಂ ತ್ಯಕ್ಷ್ಯಂತಿ ನಿರ್ದ್ರವ್ಯಂ ಭೃತ್ಯಾ ಅಪ್ಯಖಿಲೋತ್ತಮಮ್ ।**
**ಭೃತ್ಯಂ ವಿಪನ್ನಂ ಪತಯಃ ಕೌಲಂ ಗಾಶ್ಚಾಪಯಸ್ವಿನೀಃ ॥ ೩೬ ॥**

ನಿರ್ದ್ರವ್ಯಂ=ಹಣವಿಲ್ಲದಿರುವ ಪತಿಂ=ಗಂಡನನ್ನು(ಹೆಂಡತಿಯು) ಭೃತ್ಯಾಃ=ಆಳುಗಳು ಅಖಿಲೋತ್ತಮಮಪಿ=ಬೇರೆ ಎಲ್ಲ ಗುಣಗಳಿಂದ ಉತ್ತಮನಾಗಿದ್ದರೂ ತ್ಯಕ್ಷ್ಯಂತಿ=ಬಿಟ್ಟು ಬಿಡುವರು. ಪತಯಃ=ಒಡೆಯರಾದರೂ ವಿಪನ್ನಂ ಭೃತ್ಯಂ=ಏನಾದರೂ ವಿಪತ್ತಿಗೆ ಒಳಗಾದರೆ ತ್ಯಕ್ಷ್ಯಂತಿ=ಬಿಟ್ಟು ಬಿಡುವರು. ಇದೇನು ಹೊಸದೇನಲ್ಲ ಕೌಲಂ= ಕುಲಪರಂಪರೆಯಾಗಿ ಬಂದಿರುವ ಗಾಃ ಚ=ಆಕಳನ್ನೂ ಸಹ ಅಪಯಸ್ವಿನೀಃ=ಮುಪ್ಪಾದ ಮೇಲೆ ಹಾಲು ಕೊಡದಿರುವಾಗ ತ್ಯಕ್ಷ್ಯಂತಿ=ಬಿಟ್ಟು ಬಿಡುವರು.

**ಪಿತೃನ್ ಭ್ರಾತೃನ್ ಸ್ವಸ್ರನ್ ಜ್ಞಾತೀನ್ ಹತ್ವಾ ಸೌರತಸೌಹೃದಾಃ ।**
**ಶ್ವಶುರಶ್ಯಾಲಸಂವಾದಾದೀನಾಸ್ತ್ರೈಣಾ ಕಲೌ ನರಾಃ ॥ ೩೭ ॥**

ಪಿತೃನ್=ತಂದೆಯನ್ನು ಭ್ರಾತೃನ್=ಅಣ್ಣತಮ್ಮಂದಿರನ್ನು ಸ್ವಸ್ರನ್=ತಂಗಿಯರನ್ನು ಜ್ಞಾತೀನ್=ಸಂಬಂಧಿಕರನ್ನು ಹತ್ವಾ=ಕೊಂದು ಸೌರತಸೌಹೃದಾಃ=ಸುರತಸಂಬಂಧಿಗಳಲ್ಲಿ

ಪ್ರೇಮವುಳ್ಳವರು ಶ್ವಶುರಶ್ಯಾಲಸಂವಾದಾಃ=ಮಾವ ಭಾವ ಮೈದುನ ಇವರೊಡನೆ ಪ್ರೇಮ ಸಂಭಾಷಣೆ ಮಾಡುವವರು ಆವರ ವಿಷಯದಲ್ಲಿ ಆದೀನಾಃ=ಸಿರಿವಂತರು ದೀನಾಃ=ಬೇರೆಯವರಿಗೆ ದರಿದ್ರರು ಸ್ತ್ರೈಣಾಃ=ಸ್ತ್ರೀ ಲೋಲುಪರು.

**ಶೂದ್ರಾ ಪ್ರತಿಗ್ರಹಿಷ್ಯಂತಿ ತಪೋ ವೇಷೋಪಜೀವನಃ।**
**ಧರ್ಮಂ ವಕ್ಷ್ಯಂತ್ಯಧರ್ಮಜ್ಞಾ ಅದಿರುಹ್ಯೋತ್ತಮಾಸನಮ್ ॥ ೩೮ ॥**

ಶೂದ್ರಾಃ=ಶೂದ್ರರು ತಪಃ ಗ್ರಹಿಷ್ಯಂತಿ=ತಪಸ್ಸು ಮಾಡುವರು ವೇಷೋಪಜೀವನಃ= ಬ್ರಾಹ್ಮಣವೇಷದಿಂದ ಜೀವನ ಸಾಗಿಸುವವರು. ಅಧರ್ಮಜ್ಞಂ=ಸ್ವಯಂ ಧರ್ಮವನ್ನು ಅರಿಯದವರು ಉತ್ತಮಾಸನಂ ಅಧಿರುಹ್ಯ=ವ್ಯಾಸಪೀಠವನ್ನೇರಿ ಧರ್ಮಂ ವಕ್ಷ್ಯಂತಿ= ತನಗೆ ತಿಳಿದದ್ದನ್ನು ಧರ್ಮವೆಂದು ಹೇಳುವರು.

**ನಿತ್ಯಂ ಉದ್ವಿಗ್ನಮನಸೋ ದುರ್ಭಿಕ್ಷಕರಕರ್ಶಿತಾಃ।**
**ನಿರನ್ನೇ ಭೂತಲೇ ರಾಜನ್ನನಾವೃಷ್ಟಿಭಯಾತುರಾಃ ॥ ೩೯ ॥**

ನಿತ್ಯಂ=ದಿನವೂ ಉದ್ವಿಗ್ನಮನಸಃ=ಕಳ್ಳಕಾಕರ ಭಯದಿಂದ ವ್ಯಗ್ರವಾದ ಮನಸ್ಸುಳ್ಳವರು ದುರ್ಭಿಕ್ಷಕರಕರ್ಶಿತಾಃ=ರಾಜರುಗಳು ದುರ್ಭಿಕ್ಷದಿಂದಲೂ ಪ್ರಜರು ಕರದಿಂದಲೂ ದುಃಖಿತರು ರಾಜನ್=ಪರೀಕ್ಷಿತನೇ ಏವಂ=ಈ ರೀತಿಯಾಗಿ ಭೂತಲೇ=ಭೂಮಿಯಲ್ಲಿ ನಿರನ್ನೇ=ಅನ್ನವಿಲ್ಲದಂತೆ ಆಗುತ್ತಿರಲು ಅನಾವೃಷ್ಟಿಭಯಾತುರಾಃ=ಮಳೆಯಾಗದಿರು- ವದರಿಂದಲೂ ಭಯಗ್ರಸ್ತರಾಗುವರು.

**ವಾಸೋಽನ್ನಪಾನಶಯನವ್ಯವಾಯಸ್ನಾನಭೂಷಣೈಃ।**
**ಹೀನಾಃ ಪಿಶಾಚಸಂದರ್ಶಾಃ ಭವಿಷ್ಯಂತಿ ಕಲೌ ಪ್ರಜಾಃ ॥ ೪೦ ॥**

ಕಲೌ=ಕಲಿಯುಗದಲ್ಲಿ ಪ್ರಜಾಃ=ಜನರು ವಾಸೋಽನ್ನಪಾನಶಯನವ್ಯವಾಯ- ಸ್ನಾನಭೂಷಣೈಃ=ವಸ್ತ್ರಗಳು,ಆಹಾರ,ನೀರು,ನಿದ್ರೆ, ಗ್ರಾಮ್ಯಸುಖ,ಸ್ನಾನ,ಅಲಂಕಾರಗಳಿಂದ ಹೀನಾಃ=ರಹಿತರಾಗಿ ಪಿಶಾಚಸಂದರ್ಶಾಃ=ದೆವ್ವಗಳಂತೆ ಕಾಣಿಸುವವರು ಭವಿಷ್ಯಂತಿ= ಆಗುವರು.

**ಕಲೌ ಕಾಕಿಣಿಕೇಽಪ್ಯರ್ಥೇ ವಿಗೃಹ್ಯ ತ್ಯಕ್ತಸೌಹೃದಾಃ।**
**ತ್ಯಕ್ಷ್ಯಂತಿ ಹಿ ಪ್ರಿಯಾನ್ ಪ್ರಾಣಾನ್ ಹನಿಷ್ಯಂತಿ ಸ್ವಕಾನಪಿ ॥ ೪೧ ॥**

ಕಲೌ=ಕಲಿಯುಗದಲ್ಲಿ ಕಾಕಿಣಿಕೇಽಪ್ಯರ್ಥೇ=ಕವಡೆ ಕಾಸಿಗಾಗಿ(ಅಲ್ಪ ಹಣಕ್ಕಾಗಿ) ವಿಗೃಹ್ಯ ಚ=ವಿರೋಧ ಮಾಡಿ ತ್ಯಕ್ತಸೌಹೃದಾಃ=ಸೌಹಾರ್ದವನ್ನು ಬಿಟ್ಟು ಪ್ರಿಯಾನ್

ಪ್ರಾಣಾನ್ ತ್ಯಕ್ಷ್ಯಂತಿ=ಪ್ರಿಯವಾದ ಪ್ರಾಣವನ್ನೂ ಬಿಡುವರು. ತಾನು ಪ್ರಬಲನಾಗಿದ್ದರೆ ಸ್ವಕಾನ್ ಅಪಿ=ತನ್ನವರಾಗಿದ್ದರೂ ಹನಿಷ್ಯಂತಿ=ಕೊಲ್ಲುವರು.

**ನ ರಕ್ಷ್ಯಂತಿ ಮನುಜಾಃ ಸ್ಥವಿರೌ ಪಿತರಾವಪಿ ।**
**ಪುತ್ರೀಂ ಭಾರ್ಯಾಂ ಚ ಕುಲಜಾಂ ಕ್ಷುದ್ರಾಃ ಶಿಶ್ನೋದರಂಭರಾಃ ॥ ೪೨ ॥**

ಕ್ಷುದ್ರಾಃ=ಕ್ಷುಲ್ಲಕರಾದ ಮನುಜಾಃ=ಮನುಷ್ಯರು ಶಿಶ್ನೋದರಂಭರೇ ಸಂತಃ=ಕೇವಲ ಇಂದ್ರಿಯಗಳ ಪ್ರೀತಿಗಾಗಿ ಹೊಟ್ಟೆ ತುಂಬಿಕೊಳ್ಳುವದರಲ್ಲೇ ಆಸಕ್ತರಾಗಿ ಸ್ಥವಿರೌ= ಮುದಕರಾದ ಪಿತರಾವಪಿ=ತಂದೆ ತಾಯಿಗಳನ್ನೂ ನ ರಕ್ಷ್ಯಂತಿ=ರಕ್ಷಿಸಲಾರರು. ಪುತ್ರೀಂ= ಮಗಳನ್ನು ಕುಲಜಾಂ=ಉತ್ತಮಕುಲದಲ್ಲಿ ಜನಿಸಿದ ಭಾರ್ಯಾಂ ಅಪಿ=ಹೆಂಡತಿಯನ್ನೂ ನ ರಕ್ಷ್ಯಂತಿ=ರಕ್ಷಿಸುವದಿಲ್ಲ.

**ಕಲೌ ನ ರಾಜನ್ ಜಗತಾಂ ಪರಂ ಗುರುಂ**
**ತ್ರಿಲೋಕನಾಥಾನತಪಾದಪಂಕಜಮ್ ।**
**ಪ್ರಾಯೇಣ ಮರ್ತ್ಯಾ ಭಗವಂತಮಚ್ಯುತಂ**
**ಯಕ್ಷ್ಯಂತಿ ಪಾಖಂಡವಿಭಿನ್ನಚೇತಸಃ ॥ ೪೩ ॥**

ಹೇರಾಜನ್=ಪರೀಕ್ಷಿತನೇ ಕಲೌ=ಕಲಿಯುಗದಲ್ಲಿ ಮರ್ತ್ಯಾಃ=ಮನುಷ್ಯರು ಪ್ರಾಯೇಣ=ಬಹಳವಾಗಿ ಪಾಖಂಡವಿಭಿನ್ನಚೇತಸಃ=ದುಷ್ಟ ಮತಗಳಿಂದ ಮೋಹಿತರಾಗಿ ಜಗತಾಂ ಗುರುಂ=ಸಮಸ್ತ ಜಗತ್ತಿಗೆ ಗುರುವಾದ ತ್ರಿಲೋಕನಾಥಾನತಪಾದಪಂಕಜಂ= ಮೂರು ಲೋಕಗಳಿಗೆ ನಿಯಾಮಕರಾದ ಬ್ರಹ್ಮಾದಿಗಳಿಂದ ನಮಸ್ಕೃತವಾದ ಪಾದಪದುಮಗಳುಳ್ಳ ಭಗವಂತಂ ಅಚ್ಯುತಂ=ಷಡ್ಗುಣೈಶ್ವರ್ಯಸಂಪನ್ನನಾದ ನಾಶ ರಹಿತನಾದ ಶ್ರೀಹರಿಯನ್ನು ನ ಯಕ್ಷ್ಯಂತಿ=ಪೂಜಿಸುವದಿಲ್ಲ.

**ಯನ್ನಾಮಧೇಯಂ ಮ್ರಿಯಮಾಣ ಆತುರಃ**
**ಪತನ್ ಸ್ಖಲನ್ ವಾ ವಿವಶೋ ಗೃಣನ್ ಪುಮಾನ್ ।**
**ವಿಮುಕ್ತಕರ್ಮಾರ್ಗಲಉತ್ತಮಾಂ ಗತಿಂ**
**ಪ್ರಾಪ್ನೋತಿ ಯಕ್ಷ್ಯಂತಿ ನ ತಂ ಕಲೌ ಜನಾಃ ॥ ೪೪ ॥**

ಪುಮಾನ್=ಮನುಷ್ಯನು ಮ್ರಿಯಮಾಣಃ=ಸಾಯುತ್ತಿರುವವನು ಆತುರಃ=ರೋಗ ಪೀಡಿತನು ಪತನ್=ಬೀಳುತ್ತ ಸ್ಖಲನ್=ಎಡವುತ್ತ ವಾ=ಆಗಲಿ ವಿವಶಃ=ಅನ್ಯಮನಸ್ಕನಾಗಿಯೂ ಯನ್ನಾಮಧೇಯಂ=ಯಾವ ಶ್ರೀಹರಿಯ ನಾಮವನ್ನು ಗೃಣನ್=ಉಚ್ಚರಿಸುವವನಾಗಿ

ವಿಮುಕ್ತಕರ್ಮಾರ್ಗಲಃ=ಕರ್ಮವೆಂಬ ಬಾಗಿಲಅಗಳಿಯನ್ನು ಕಳೆದುಕೊಂಡು (ಪ್ರತಿಬಂಧಕಕರ್ಮಗಳಿಂದ ಮುಕ್ತನಾಗಿ ಎಂದರ್ಥ) ಉತ್ತಮಾಂ ಗತಿಂ ಪ್ರಾಪ್ನೋತಿ=ಮುಕ್ತಿಯನ್ನು ಹೊಂದುವನೋ ತಂ=ಅಂಥಹ ಭಗವಂತನನ್ನು ಕಲೌ ಜನಾಃ=ಕಲಿಯುಗದ ಜನರು ನ ಯಕ್ಷ್ಯಂತಿ=ಪೂಜಿಸುವದಿಲ್ಲ.

*ಕಲಿಯ ದೋಷಗಳನ್ನು ಹೇಳಿ ಅದರ ಪರಿಹಾರ ಹೇಗಾಗುವದೆಂಬ ಪ್ರಶ್ನೆಗೆ ಉತ್ತರಿಸುವರು*

**ಪುಂಸಾಂ ಕಲಿಕೃತಾನ್ ದೋಷಾನ್ ದ್ರವ್ಯದೇಶಾತ್ಮಸಂಭವಾನ್ ।**
**ಸರ್ವಂ ಹರತಿ ಚಿತ್ತಸ್ಥೋ ಭಗವಾನ್ ಪುರುಷೋತ್ತಮಃ ॥ ೪೫ ॥**

ಪುಂಸಾಂ=ಅಧಿಕಾರಿಗಳ ದ್ರವ್ಯದೇಶಾತ್ಮಸಂಭವಾನ್=ದ್ರವ್ಯದಿಂದ ಬರುವ ಮದ, ದೇಶನಿಮಿತ್ತಕ ಆಚಾರ ದೋಷ, ಸ್ವಭಾವ ಅಥವಾ ದೇಹದಿಂದ ಸಂಭವಿಸುವ ಪರರಮಣಿರಮಣ ಮುಂತಾದ ಕಲಿಕೃತಾನ್=ಕಲಿನಿಮಿತ್ತ ದೋಷಗಳನ್ನು ಚಿತ್ತಸ್ಥಃ =ಮನಸ್ಸಿನಲ್ಲಿ ಸ್ಮರಿಸಲ್ಪಟ್ಟ ಭಗವಾನ್=ಸರ್ವೋತ್ತಮನಾದ ಪುರುಷೋತ್ತಮಃ=ಶ್ರೀಹರಿಯು ಸರ್ವಂ ಹರತಿ=ಎಲ್ಲವನ್ನು ಪರಿಹರಿಸುವನು.

*ಚಿತ್ತಸ್ಥನಾಗಲು ಸಾಧನ ಹೇಳುವರು.*

**ಶ್ರುತಃ ಸಂಕೀರ್ತಿತೋ ಧ್ಯಾತಃ ಪೂಜಿತಶ್ಚಾದೃತೋಽಪಿ ವಾ ।**
**ನೃಣಾಂ ಧುನೋತಿ ಭಗವಾನ್ ಹೃಸ್ಥೋ ಜನ್ಮಾಯುತಾ ಶುಭಮ್ ॥ ೪೬ ॥**

ಶ್ರುತಃ=ಗುರುಮುಖದಿಂದ ಕೇಳಲ್ಪಟ್ಟು ಸಂಕೀರ್ತಿತಃ=ಭಕ್ತಿಯಿಂದ ಸ್ತುತಿಸಲ್ಪಟ್ಟು ಧ್ಯಾತಃ=ಮನಸ್ಸಿನಲ್ಲಿ ಧ್ಯಾನಮಾಡಲ್ಪಟ್ಟು ಪೂಜಿತಃ=ಪೂಜಿಸಲ್ಪಟ್ಟು ಆದೃತಃ=ಆದರಿಸಲ್ಪಟ್ಟು (ಭಕ್ತಿಗೆ ವಿಷಯನಾಗಿ) ಭಗವಾನ್=ಶ್ರೀಹರಿಯು ನೃಣಾಂ=ಜನರ ಹೃಸ್ಥಃ=ಚಿತ್ತದಲ್ಲಿದ್ದು ಜನ್ಮಾಯುತಾಶುಭಂ=ಅನಂತ ಜನ್ಮಗಳಲ್ಲಿ ಮಾಡಿದ ಅನೇಕ ಜನ್ಮ ಪ್ರಾಪಕವಾದ ಪಾಪವನ್ನು ಧುನೋತಿ=ಪರಿಹರಿಸುವನು.

**ಯಥಾ ಹೇಮ್ನಿ ಸ್ಥಿತೋ ವಹ್ನಿರ್ದುರ್ವರ್ಣಂ ಹಂತಿ ಧಾತುಜಮ್ ।**
**ಏವಮಾತ್ಮಗತೋ ವಿಷ್ಣುರ್ಯೋಗಿನಾಮಶುಭಾಶಯಮ್ ॥ ೪೭ ॥**

ಯಥಾ=ಹೇಗೆ ಹೇಮ್ನಿ=ಬಂಗಾರದಲ್ಲಿ ಸ್ಥಿತಃ=ಇರುವ ವಹ್ನಿಃ=ಅಗ್ನಿಯು ಧಾತುಜಂ=ತಾಮ್ರಮೊದಲಾದವುಗಳ ಮಿಶ್ರಣದಿಂದ ಉಂಟಾದ ದುರ್ವರ್ಣಂ=ದುಷ್ಟವಾದ ವರ್ಣವನ್ನು ಹಂತಿ=ನಾಶಮಾಡುವದೋ ಏವಂ=ಹಾಗೆ ಆತ್ಮಗತಃ ವಿಷ್ಣುಃ=

ಮನಸ್ಸಿನಲ್ಲಿರುವ ಶ್ರೀಹರಿಯು ಯೋಗಿನಾಂ=ಶ್ರವಣಾದಿಗಳುಳ್ಳವರ್ನ ಅಶುಭಾಶಯಂ ಹಂತಿ=ಕೇವಲ ಪಾಪಾಧಾರಕರ್ಮಗಳನ್ನು ನಾಶಗೊಳಿಸುವನು.

*ವಿದ್ಯಾದಿಸಾಧನಗಳಿರುವಾಗ ಪ್ರತ್ಯೇಕ ಭಗವತ್‌ಸ್ಥಿತಿ ಏಕೆ ಹೇಳುವುದು ಎಂದು ಹೇಳುವರು.*

**ವಿದ್ಯಾತಪಃಪ್ರಾಣನಿರೋಧಮಂತ್ರೈಃ ತೀರ್ಥಾಭಿಷೇಕವ್ರತದಾನಜಾಪ್ಯೈಃ ।**
**ನಾತ್ಯಂತಶುದ್ಧಿಂ ಲಭತೇಽಂತರಾತ್ಮಾ ಯಥಾ ಹೃದಿಸ್ಥೇ ಭಗವತ್ಯನಂತೇ ॥ ೪೮ ॥**

ವಿದ್ಯಾತಪಃಪ್ರಾಣನಿರೋಧಮಂತ್ರೈಃ=ಜ್ಞಾನವು, ಕೃಚ್ಛ್ರಾಂದ್ರಾಯಣಾದಿಗಳು ಪ್ರಾಣಾಯಾಮವು ಹಾಗು ಮಂತ್ರಗಳಿಂದ ತೀರ್ಥಸ್ನಾನ ,ಚಾತುರ್ಮಾಸ್ಯ ಏಕಾದಶೀ ಮುಂತಾದ ವ್ರತಗಳಿಂದ, ವಿವಿಧ ದಾನಗಳಿಂದ ಜಾಪ್ಯೈಃ=ಜಪಯೋಗ್ಯ ಮಂತ್ರಗಳಿಂದ ಅಂತರಾತ್ಮಾ=ಮನಸ್ಸು ಯಥಾ=ಹೇಗೆ ಅನಂತೇ=ಭಗವತಿ ಹೃದಿಸ್ಥೇ ಶುದ್ಧ್ಯಂತಿ=ಶ್ರೀಹರಿಯು ಹೃದಿಸ್ಥನಾಗುತ್ತಿರಲು, ಶುದ್ಧಿಯಾಗುವಂತೆ ಅತ್ಯಂತಶುದ್ಧಿಂ ನ ಲಭತೇ=ಪರಮ-ಪವಿತ್ರತೆಯನ್ನು ಹೊಂದಲಾರದು.

*ಪರೀಕ್ಷಿತನೇ ಇದೇ ಸಮಯ. ನಿನಗೆ ಮತ್ತೇ ಈ ಸಮಯ ಸಿಗುವುದಿಲ್ಲ ಕಾರಣ ಹೇಳಿದ್ದರಿಂದ ಮರೆಯಬೇಡವೆಂದು ಹೇಳುವರು.*

**ತಸ್ಮಾತ್ ಸರ್ವಾತ್ಮನಾ ರಾಜನ್ ಹೃದಿಸ್ಥಂ ಕುರು ಕೇಶವಮ್ ।**
**ಮ್ರಿಯಮಾಣೋಹ್ಯವಹಿತಸ್ತತೋ ಯಾಸಿ ಪರಾಂಗತಿಮ್ ॥ ೪೯ ॥**

ತಸ್ಮಾತ್=ಆದ್ದರಿಂದ ರಾಜನ್=ಪರೀಕ್ಷಿತರಾಜನೇ ಮ್ರಿಯಮಾಣಃ=ಸಾಯುವವನು ಸರ್ವಾತ್ಮನಾ=ಸಾಧ್ಯವಾದ ಎಲ್ಲ ಪ್ರಯತ್ನಗಳಿಂದ ಅವಹಿತಃ ಚ=ಸಮಾಧಾನದಿಂದ ಕೇಶವಂ=ಶ್ರೀಹರಿಯನ್ನು ಹೃದಿಸ್ಥಂ=ಹೃದಯದಲ್ಲಿ ಧರಿಸಿದ್ದೇ ಆದರೆ ತತಃ=ಅದರಿಂದ ಪರಾಂ ಗತಿಂ ಯಾಸಿ=ಉತ್ತಮವಾದ ಗತಿಯನ್ನು ಪಡೆಯುವಿ.

**ಮ್ರಿಯಮಾಣೈರಭಿಧ್ಯಾತಃ ಭಗವಾನ್ ಪರಮೇಶ್ವರಃ ।**
**ಆತ್ಮಭಾವಂ ನಯತ್ಯಂಗ ಸರ್ವಾತ್ಮಾ ಸರ್ವಸಂಭವಃ ॥ ೫೦ ॥**

ಮ್ರಿಯಮಾಣೈಃ=ಸಾಯತಕ್ಕವರಿಂದ ಭಗವಾನ್ ಪರಮೇಶ್ವರಃ=ಷಡ್ಗುಣಸಂಪನ್ನನಾದ ಶ್ರೀಹರಿಯು ಅಭಿಧ್ಯಾತಃ=ಧ್ಯಾನಿಸಲ್ಪಡಬೇಕು ಧ್ಯಾತನಾದ ಅವನು ಸರ್ವಾತ್ಮಾ ಎಲ್ಲವನ್ನು ಸ್ವೀಕರಿಸುವ ಸರ್ವಸಂಭವಃ=ಮೋಚಕತ್ವ-ಬಂಧಕತ್ವ ಮುಂತಾದ ಬೇರೆ ಕಡೆಗೆ ಒಬ್ಬರಲ್ಲೇ ಕಾಣದಿರುವ ಎಲ್ಲ ಧರ್ಮಗಳಿಗೆ ಆಶ್ರಯನಾದ ಹೇ ಅಂಗ=ರಾಜನೇ

ಆತ್ಮಭಾವಂ ನಯತಿ=ಜೀವನ ಸ್ವಭಾವವನ್ನು ಹೊಂದಿಸುವವನು. (ಸ್ವರೂಪಜ್ಞಾನ ರೂಪ ಮುಕ್ತಿಯನ್ನು ನೀಡುವನು ಎಂದು ಭಾವ.)

**ಕಲೇರ್ದೋಷನಿಧೇಃ ರಾಜನ್ನಸ್ತಿಹ್ಯೇಕೋ ಮಹಾನ್ ಗುಣಃ ।**
**ಕೀರ್ತನಾದೇವ ಕೃಷ್ಣಸ್ಯ ಮುಕ್ತಬಂಧಃ ಪರಂ ವ್ರಜೇತ್ ॥ ೫೧ ॥**

ಹೇ ರಾಜನ್=ಪರೀಕ್ಷಿತರಾಜನೇ ದೋಷನಿಧೇಃ=ದೋಷಗಳಿಗೆ ಆಶ್ರಯನಾದ ಕಲೇಃ ಏಕಃ ಮಹಾನ್ ಗುಣಃ ಅಸ್ತಿ=ಒಂದು ದೊಡ್ಡ ಗುಣವು ಕಲಿಯುಗದಲ್ಲಿ ಇದೆ ಅದೇನೆಂದರೆ ಕೃಷ್ಣಸ್ಯ ಕೀರ್ತನಾದೇವ=ಶ್ರೀಹರಿಯ ನಾಮಸ್ಮರಣದಿಂದ (ಹಿಂದಿನ ಪುಣ್ಯದಿಂದ ಒದಗಿದ) ಕಲಿಯುಗದಲ್ಲಿರುವ ಅಧಿಕಾರಿಯೂ ಮುಕ್ತಬಂಧಃ ಸನ್=ಸರ್ವ ಕರ್ಮಬಂಧದಿಂದ ಮುಕ್ತನಾಗಿ ಪರಂ ವ್ರಜೇತ್=ಪರಮಾತ್ಮನನ್ನು ಹೊಂದುವನು.

**ವಿಶೇಷ-** ಅತಿದುರ್ಲಭವಾದ ಹರಿ ಸ್ಮರಣವು ಪೂರ್ವ ಪುಣ್ಯದಿಂದ ಲಭಿಸಿದ್ದಾದರೆ ನಂತರ ಮುಕ್ತಿಯು ಸುಲಭವೆಂದು ಭಾವ.

*ಧ್ಯಾನಾದಿಮಹಾಸಾಧನಗಳಿರುವಾಗ ಕೀರ್ತನವೇ ಗತಿ ಪ್ರದ ಎಂದು ಹೇಳಿದ್ದು ಹೇಗೆ ಎಂದರೆ ಶ್ರೀಹರಿಯೇ ಯುಗಾನುಸಾರ ಸಾಧನೆಗಳ ವ್ಯವಸ್ಥೆಯನ್ನು ಮಾಡಿದ್ದಾನೆ ಎಂದು ಹೇಳುವರು.*

**ಕೃತೇ ಯದ್ ಧ್ಯಾಯತೋ ವಿಷ್ಣುಂ ತ್ರೇತಾಯಾಂ ಯಜತೋ ಮಖೈಃ ।**
**ದ್ವಾಪರೇ ಪರಿಚರ್ಯಾಯಾಂ ಕಲೌ ತದ್ಧರಿಕೀರ್ತನಾತ್ ॥ ೫೨ ॥**

ಕೃತೇ=ಕೃತಯುಗದಲ್ಲಿ ಧ್ಯಾಯತಃ=ಧ್ಯಾನಮಾಡುವವನಿಗೆ ಯತ್=ಯಾವ ಫಲವು ತತ್=ಅದು ತ್ರೇತಾಯಾಂ=ತ್ರೇತಾಯುಗದಲ್ಲಿ ಮಖತಃ ಚ=ಯಜ್ಞದಿಂದ ಪೂಜಿಸುವವನಿಗೆ ಆಗುವದು.(ಆ ಕಾಲದಲ್ಲಿ ಆಚರಿಸಿದ ಧ್ಯಾನ ಕಡಿಮೆ ಯಾಗ ಹೆಚ್ಚು ಎಂದು ಭಾವ.) ದ್ವಾಪರೇ ತು=ದ್ವಾಪರಯುಗದಲ್ಲಿ ತ್ರೇತಾಯುಗದಲ್ಲಿ ಯಾಗದಿಂದ ಬರುವ ಫಲವು ಪರಿಚರ್ಯಯಾ=ಸೇವೆಯಿಂದ ಬರುವದು. ಇಲ್ಲಿ ಧ್ಯಾನ-ಯಜ್ಞಗಳು ಅಮುಖ್ಯ ಪರಿಚರ್ಯೆಯೇ ಮುಖ್ಯವೆಂದು ಭಾವ. ಕಲೌ=ಕಲಿಯುಗದಲ್ಲಿ ತದ್ ಹರಿಕೀರ್ತನಾತ್=ಶ್ರೀಹರಿಯ ಕೀರ್ತನದಿಂದಾಗುವದು ಕಾರಣ ಕಲಿಯುಗದಲ್ಲಿ ಶ್ರೀಹರಿಯ ಕೀರ್ತನೆಯೇ ಯುಕ್ತವಾದುದು.

॥ ಇಲ್ಲಿಗೆ ಮೂರನೇ ಅಧ್ಯಾಯವು ಸಮಾಪ್ತವಾಯಿತು ॥

# ಅಥ ಚತುರ್ಥೋಽಧ್ಯಾಯಃ

**ಸಾರಾಂಶ**

ಕಲ್ಪ ಎಂದರೇನು ? ಪ್ರಳಯ ಎಂದರೆ ಯಾವುದು ? ಈ ಮೊದಲಾದ ವಿಷಯಗಳನ್ನು ಶುಕಾಚಾರ್ಯರು ಇಲ್ಲಿ ನಿರೂಪಿಸುತ್ತಿದ್ದಾರೆ. ಒಂದು ಸಾವಿರ ಮಹಾಯುಗಗಳು (ನಾಲ್ಕುಯುಗಗಳು ಸೇರಿದರೆ ಒಂದು ಮಹಾಯುಗ)ಉರುಳಿದರೆ ಅದುವೇ ಚತುರ್ಮುಖಬ್ರಹ್ಮನ ಒಂದು ಹಗಲು ಎನಿಸುತ್ತದೆ. ಬ್ರಹ್ಮದೇವರ ಒಂದು ಹಗಲನ್ನೇ ಒಂದು ಕಲ್ಪ ಎಂಬುದಾಗಿ ಕರೆಯುತ್ತಾರೆ. ಇಂತಹ ಬ್ರಹ್ಮದೇವರ ಒಂದು ಹಗಲಿನಲ್ಲಿ ಹದಿನಾಲ್ಕು ಮನ್ವಂತರಗಳು ಉರಳಿ ಹದಿನಾಲ್ಕು ಮನುಗಳು ಆಳಿ ಹೋಗುವರು. ಅವುಗಳೇ ಹದಿನಾಲ್ಕು ಮನ್ವಂತರಗಳು. ಇಷ್ಟು ದಿನಗಳು ಅಂದರೆ ಬ್ರಹ್ಮದೇವರ ಒಂದು ದಿನ. ಇದು ಗತಿಸಿದ ಮೇಲೆ ಒಂದು ಪ್ರಲಯವು ನಡೆಯುವುದು. ಈ ಪ್ರಲಯವೂ ಒಂದು ಸಹಸ್ರಯುಗ ಪರ್ಯಂತವಾಗಿ ಇರುವುದು. ಇದನ್ನೇ ಬ್ರಹ್ಮದೇವರ ಒಂದು ರಾತ್ರಿ ಎನ್ನಲಾಗುತ್ತದೆ.(ಬ್ರಹ್ಮದೇವರ ಈ ರಾತ್ರಿಕಾಲವು) ಈ ಕಲ್ಪ ಪ್ರಳಯದಲ್ಲಿ ಮೂರು ಲೋಕಗಳು ಲಯ ಹೊಂದುವವು. ಇನ್ನು ನೈಮಿತ್ತಿಕ ಪ್ರಲಯದಲ್ಲಿ ನಾರಾಯಣನು ಜಗತ್ತನ್ನು ಉಪಸಂಹರಿಸಿ ಮಲಗುತ್ತಾನೆ. ಬ್ರಹ್ಮದೇವರೂ ಭಗವಂತನ ನಾಭಿಕಮಲದಲ್ಲಿ ಮಲಗಿರುತ್ತಾರೆ. ಹೀಗೆ ಬ್ರಹ್ಮದೇವರ ಕ್ರಮದಲ್ಲಿ ನೂರು ವರ್ಷಗಳು ಮುಗಿಯುತ್ತಿರಲು ಆಗ ಮಹತ್ತತ್ವ ಮೊದಲಾದವುಗಳು ನಾಶಹೊಂದುವವು. ಇದನ್ನು ಪ್ರಾಕೃತಪ್ರಳಯವೆಂದು ಕರೆಯುತ್ತಾರೆ. ಮುಂದೆ ಏಳು ಪ್ರಕೃತಿಗಳ ನಾಶ ಹೊಂದುವ ಕ್ರಮವನ್ನು ವಿಸ್ತಾರವಾಗಿ ತಿಳಿಸುತ್ತಾರೆ.

ಪ್ರಳಯಕಾಲದಲ್ಲಿ ಪ್ರಪಂಚಕ್ಕೆ ಆಧಾರನಾದ ಭಗವಂತನು ಜ್ಞಾನಾತ್ಮಕಳಾದ ಲಕ್ಷ್ಮೀ ದೇವಿ ಹಾಗು ಮುಕ್ತರಲ್ಲಿ ಜ್ಯೋತಿರೂಪದಿಂದಿದ್ದು ಇಂದ್ರಿಯಗಳಿಗೂ ವಿಷಯನಾಗಿ

ಸಮಸ್ತವೇದ ಪ್ರತಿನಾದ್ಯನಾಗಿಯೂ ಇರುವನು. ಭಗವಂತನ ಅನುಗ್ರಹ ಯಾವುದರ ಮೇಲೆ ಇದೆ ಅದು ಸ್ಪಷ್ಟವಾಗಿ ರಕ್ಷಿತವಾಗುತ್ತದೆ. ಒಂದು ವೇಳೆ ಭಗವಂತನು ಪ್ರತಿಕೂಲನಾದರೆ ಜಗತ್ತಿನ ಸಂಹಾರವು ಎಂಬುದು ಅನ್ವಯ ವ್ಯತಿರೇಕಗಳಿಂದ ಸಿದ್ಧವಾಗಿರುತ್ತದೆ. ದೀಪ, ಕಣ್ಣು ಕಾಣುವ ರೂಪ ಈ ಮೂರು ಜ್ಯೋತಿಷ್ಷಿಗಳ ಶಕ್ತಿಯ ಹೊರತಾಗಿ ಪ್ರತ್ಯೇಕವಾಗಿ ಸ್ವತಂತ್ರವಾಗಿ ಬೆಳಗುವದಿಲ್ಲವೋ ಹಾಗೆಯೇ ಬುದ್ಧ್ಯಾದಿಗಳು, ಇಂದ್ರಿಯಗಳ ವಿಷಯಗಳಾದ ತನ್ಮಾತ್ರಾಗಳು ಭಗವಂತನ ಶಕ್ತಿಯ ಹೊರತಾಗಿ ಯಾವ ಕೆಲಸವನ್ನು ಮಾಡಲಾರವು. ಹೀಗಿರುವಾಗ ಎಲ್ಲ ಇಂದ್ರಿಯಗಳು ತದಭಿಮಾನಿದೇವತೆಗಳು ಭಗವದಧೀನರಾಗಿಯೇ ವ್ಯಾಪಾರಗಳನ್ನು ಮಾಡುವರು. ಜಾಗ್ರತ್ ಸ್ವಪ್ನ ಸುಷುಪ್ತಿ ಎಂಬ ಈ ಮೂರು ಅವಸ್ಥೆಗಳು ಜೀವರಿಗೆ ಹೊರತು ಭಗವಂತನಿಗಲ್ಲ. ಹೀಗೆ ಇನ್ನೂ ಅನೇಕ ವಿಷಯಗಳನ್ನು ಈ ಅಧ್ಯಾಯದಲ್ಲಿ ಹೇಳಿರುವರು.

*ಶ್ರೀಹರಿಯ ಕಟಾಕ್ಷದಿಂದ ಆಕ್ಷಿಪ್ತವಾದ ಪ್ರಲಯದ ಪ್ರಕಾರವನ್ನು ಭಾಗವತ ಪ್ರವೃತ್ತಿಯನ್ನು ಈ ಅಧ್ಯಾಯದಲ್ಲಿ ಹೇಳುವರು.*

ಶ್ರೀ ಶುಕ ಉವಾಚ

**ಕಾಲಸ್ತೇ ಪರಮಾಣ್ವಾದಿರ್ದ್ವಿಪರಾರ್ಧಾವಧಿರ್ನೃಪ ।**
**ಕಥಿತೋ ಯುಗಮಾನಂ ಚ ಶ್ರುಣು ಕಲ್ಪಲಯಾವಥ ॥ ೧ ॥**

ಹೇ ನೃಪ=ರಾಜನೇ ತೇ=ನಿನಗೆ ಪರಮಾಣ್ವಾದಿಃ=ಪರಮಾಣು ಕಾಲ ಮೊದಲುಗೊಂಡು ದ್ವಿಪರಾರ್ಧಾವಧಿಃ=ಬ್ರಹ್ಮದೇವರ ಒಂದು ನೂರು ವರ್ಷವೇ ಕೊನೆಯಾಗಿಯುಳ್ಳ ಕಾಲಃ=ಕಾಲವು ಚ=ಮತ್ತು ಯುಗಮಾನಂ=ಯುಗ ಪ್ರಮಾಣವೂ ಸಹ ಕಥಿತಃ=ಮೂರನೇಯ ಸ್ಕಂಧ ೧೨ ನೆಯ ಅಧ್ಯಾಯದ ೪ ನೆಯ ಶ್ಲೋಕದಲ್ಲಿ 'ಸ ಕಾಲಃ ಪರಮಾಣು ರ್ವೈ' ಎಂದಾರಂಭಿಸಿ ಅಥ=ಕಾಲ ನಿರೂಪಿಸಿದ ನಂತರ ೧೯ ನೇಯ ಶ್ಲೋಕದಲ್ಲಿ 'ಚತ್ವಾರಿ ತ್ರೀಣಿ ದ್ವೇ ಚೈಕಂ ಕೃತಾದಿಷು ಯಥಾ ಕ್ರಮಮ್ । ಸಂಖ್ಯಾತಾನಿ ಸಹಸ್ರಾಣಿ ದ್ವಿಗುಣಾನಿ ಶತಾನಿ ಚ' ಎಂದು ಹೇಳಲ್ಪಟ್ಟಿದೆ. ಕಲ್ಪಲಯೌ=ಕಲ್ಪ ಮತ್ತು ಪ್ರಲಯಗಳನ್ನು ಶ್ರುಣು=ಕೇಳು.

**ವಿಶೇಷ-** ರಾಜನು ಪ್ರಲಯಕಲ್ಪಯೋಃ(೩-೧೬)ಎಂದು ಪ್ರಶ್ನೆ ಮಾಡಿದ ಪ್ರಕಾರ ಲಯ ಕಲ್ಪೌ ಎಂದು ಹೇಳಬೇಕಿದ್ದರೂ ಭಗವಂತನೊಬ್ಬನ ಅಧೀನವಾದ ಮತ್ತು ಬೀಜಾಂಕುರ ಪರಂಪರೆಗೆ ವಿಶ್ರಾಂತಿ ಇಲ್ಲದಿರುವಂತೆ ಇಲ್ಲಿಯೂ ಸ್ಥಿತಿ ಲಯ

ಪರಂಪರೆಗೆ ವಿಶ್ರಾಂತಿ ಇಲ್ಲದಿರುವದರಿಂದ ಕಲ್ಪಲಯೌ ಎಂದು ಹೇಳಿರುವರು ಎಂದು ತಿಳಿಯಬೇಕು.

ಇಲ್ಲಿ ಹೇಳಿದ ಕ್ರಮದಿಂದ ಮೊದಲು ಕಲ್ಪ ಸ್ವರೂಪವನ್ನು ಹೇಳುವರು.

**ಚತುರ್ಯುಗಸಹಸ್ರಂ ತು ಬ್ರಹ್ಮಣೋ ದಿನಮುಚ್ಯತೇ ।**
**ಸ ಕಲ್ಪೋ ಯತ್ರ ಮನವಃ ಚತುರ್ದಶ ವಿಶಾಂಪತೇ ॥ ೨ ॥**

ಚತುರ್ಯುಗಸಹಸ್ರಂ=ನಾಲ್ಕು ಯುಗಗಳ ಒಂದು ಸಾವಿರ ಅಂದರೆ ಒಂದು ಸಾವಿರ ಮಹಾಯುಗವು(ನಾಲ್ಕು ಯುಗವೆಂದರೆ ಒಂದು ಮಹಾಯುಗ) ಬ್ರಹ್ಮಣಃ ದಿನಂ ಉಚ್ಯತೇ=ಬ್ರಹ್ಮದೇವರ ಒಂದು ಹಗಲು ಎಂದು ಹೇಳಲ್ಪಡುತ್ತದೆ. ಯತ್ರ= ಯಾವ ದಿನದಲ್ಲಿ ಮನವಃ ಚತುರ್ದಶ=ಹದಿನಾಲ್ಕು ಮನ್ವಂತರಗಳಾಗುವವೋ ಸಃ= ಅದು ಕಲ್ಪಃ=ಕಲ್ಪವೆಂದು ಉಚ್ಯತೇ=ಹೇಳಲ್ಪಡುವದು.

**ಯದಂತೇ ಪ್ರಲಯಸ್ತಾವಾನ್ ಬ್ರಾಹ್ಮೀ ರಾತ್ರಿರುದಾಹೃತಾ ।**
**ತ್ರಯೋ ಲೋಕಾ ಇಮೇ ಯತ್ರ ಕಲ್ಪ್ಯಂತೇ ಪ್ರಲಯಾಯ ಹಿ ॥ ೩ ॥**

ಯದಂತೇ=ಯಾವ ಹಗಲಿನ ಕೊನೆಗೆ ಬ್ರಾಹ್ಮೀ=ಬ್ರಹ್ಮ ಸಂಬಂಧಿಯಾದ ತಾವಾನ್ ರಾತ್ರಿಃ ಉದಾಹೃತಾ=ಅಷ್ಟೇ ಒಂದು ಸಾವಿರ ಮಹಾಯುಗ ರಾತ್ರಿಯಂದು ಹೇಳಲ್ಪಟ್ಟಿದೆ. ಯತ್ರ= ಯಾವ ಬ್ರಹ್ಮದೇವರ ರಾತ್ರಿಯಲ್ಲಿ ಇಮೇ ತ್ರಯೋ ಲೋಕಾಃ= ಭೂಃಭುವಃಸ್ವಃ ಈ ಮೂರುಲೋಕಗಳು ಪ್ರಲಯಾಯ ಕಲ್ಪ್ಯಂತೇ=ಪ್ರಲಯವಾಗುವವು ಎಂದು ಭಾವ.

**ಏಷಃ ನೈಮಿತ್ತಿಕಃ ಪ್ರೋಕ್ತಃ ಪ್ರಲಯೋ ಯತ್ರ ವಿಶ್ವಸೃಕ್ ।**
**ಶೇತೇऽನಂತಾಸನೋ (ನೇ) ವಿಶ್ವಮಾತ್ಮಸಾತ್ ಕೃತ್ಯಚಾತ್ಮಭೂಃ ॥ ೪ ॥**

ಏಷಃ ಪ್ರಲಯಃ=ಈ ಪ್ರಲಯವು ನೈಮಿತ್ತಿಕಃ ಪ್ರೋಕ್ತಃ=(ಒಂದು ನಿಮಿತ್ತದಿಂದ ಆದ ಕಾರಣ) ನೈಮಿತ್ತಕವೆಂದು ಕರಿಸಿಕೊಳ್ಳಲ್ಪಟ್ಟಿದೆ. ವಿಶ್ವಸೃಕ್=ಜಗತ್ತನ್ನು ಸೃಷ್ಟಿಸುವ ನಾರಾಯಣನು ವಿಶ್ವಂ=ಜಗತ್ತನ್ನು ಆತ್ಮಸಾತ್‌ಕೃತ್ಯ=ತನ್ನ ಉದರದಲ್ಲಿರಿಸಿಕೊಂಡು ಅನಂತಾಸನಃ=ಅನಂತಾಸನನಾದ(ಅಂತಾಸನೇ ಎಂಬ ಪಾಠದಲ್ಲಿ ಶೇಷನ ಮೇಲೆ ಮಲಗುವವನು ಎಂದು ಅರ್ಥ)ಆತ್ಮಭೂಶ್ಚ ಶೇತೇ=ಚತುರ್ಮುಖನೂ ಸಹ ಮಲಗುವನು. ಇವರೀರ್ವರ ಶಯನ ನಿಮಿತ್ತಕವಾದುದರಿಂದ ಈ ಪ್ರಲಯವು ನೈಮಿತ್ತಿಕ ಪ್ರಲಯವೆನಿಸುವುದು.

**ವಿಶೇಷ-** ಗೀತೆಯಲ್ಲಿ (೮-೧೭) 'ಸಹಸ್ರಯುಗಪರ್ಯಂತಮಹರ್ಯದ್ ಬ್ರಹ್ಮಣೋ ವಿದುಃ । ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ' ಎಂದು ಹಗಲು ರಾತ್ರಿಗಳಿಗೆ ಪ್ರತ್ಯೇಕವಾಗಿ ಒಂದು ಸಾವಿರಯುಗಗಳನ್ನು ಹೇಳಿದೆ. ಇಲ್ಲಿ (ಭಾ-೧೨-೪-೨) 'ಚತುರ್ಯುಗಸಹಸ್ರಂ ತು ಬ್ರಹ್ಮಣೋ ದಿನಮುಚ್ಯತೇ' ಎಂದು ಹೇಳಿದೆ. ಮತ್ತು 'ಚತುರ್ಯುಗಸಹಸ್ರಾಣಿ ದಿನಮೇಕಂ ಪಿತಾಮಹಃ' ಎಂದೂ ಇದೇ ಭಾಗವತದಲ್ಲಿ ಹೇಳಿದೆ. ಇಲ್ಲಿ ನಾಲ್ಕು ಸಾವಿರ ಯುಗ ಹಗಲು, ಅಷ್ಟೇ ರಾತ್ರಿ ಎಂದು ಹೇಳಿದಂತಾಯಿತು. ಕಾರಣ ಗೀತೆ ಹಾಗು ಭಾಗವತಗಳಿಗೆ ವಿರೋಧ ಕಾಣುವುದು ಎನ್ನುವದು ಸರಿಯಲ್ಲ.

ಶ್ರೀಮದಾನಂದತೀರ್ಥಭಗವತ್ಪಾದರು ಹಾಗು ಶ್ರೀಮಟ್ಟೀಕಾಕೃತ್ಪಾದರು ಗೀತಾಭಾಷ್ಯ ಪ್ರಮೇಯದೀಪಿಕಾಗಳಲ್ಲಿ ಗೀತೆಗೆ ಹೀಗೆ ವ್ಯಾಖ್ಯಾನಮಾಡಿರುವರು. ಮೇಲೆ ಹೇಳಿದ ವಿಭಿನ್ನವಾದ ಮಾತುಗಳಿಗೆ ವಿರೋಧವೇ ಇಲ್ಲ. ಎರಡಕ್ಕೂ ವಿಷಯಗಳೇ ಬೇರೆ. ಗೀತಾಭಾಷ್ಯದಲ್ಲಿ ಹೀಗೆ ಹೇಳಿದೆ **'ಸಹಸ್ರ ಶಬ್ದೋ ಅನೇಕವಾಚೀ । ಬ್ರಹ್ಮ ಪರಮ್ ।**

ಈ ಮಾತಿಗೆ ಪ್ರಮೇಯದೀಪಿಕೆಯ ವ್ಯಾಖ್ಯಾನ ಹೀಗಿದೆ.

'ಅತ್ರ ಸಹಸ್ರಶಬ್ದಃ ದಶ ಶತವಾಚೀ ಇತಿ ಪ್ರತೀತಿನಿರಾಸಾಯಾಹ -**ಸಹಸ್ರೇತಿ** । ಬಹುಶಬ್ದ ಪರ್ಯಾಯೋ ಅಯಮ್ । ನತು ಪ್ರಸಿದ್ಧಾರ್ಥಮ್ । ವಿರಿಂಚಾಹೋರಾತ್ರಯೋಃ ಪ್ರಸಿದ್ಧ ಸಹಸ್ರಚತುರ್ಯುಗಪರ್ಯಂತತ್ವಾತ್ ಕಥಮೇತತ್ ಇತ್ಯತಃ ಆಹ -**ಬ್ರಹ್ಮೇತಿ** । ತಥಾ ಚ ದ್ವಿಪರಾರ್ಧಪ್ರಲಯಸ್ಯ ಆದಿಸೃಷ್ಟೇಶ್ಚ ಅತ್ರ ವಿವಕ್ಷಿತತ್ವಾದುಕ್ತಂ ಯುಕ್ತಮ್ । ' ಸಾ ವಿಶ್ವರೂಪಸ್ಯ ರಜನೀ ಇತಿ ಶ್ರುತಿಃ ' 'ದ್ವಿಪರಾರ್ಧಪ್ರಲಯ ಏವ ಅತ್ರ ವಿವಕ್ಷಿತಃ' 'ಅವ್ಯಕ್ತಾದ್ವ್ಯಕ್ತಯ ಸರ್ವಾಃ' ಇತ್ಯುಕ್ತೇಃ । ಉಕ್ತಂ ಚ ಮಹಾಕೌರ್ಮೇ 'ಅನೇಕಯುಗಪರ್ಯಂತಂ ಮಹಾವಿಷ್ಣೋಸ್ತಥಾ ನಿಶಾ । ರಾತ್ರ್ಯಾದೌ ಲೀಯತೇ ಸರ್ವಮಹರಾದೌ ತು ಜಾಯತೇ ' ಇತಿ ಯಃ ಸಃ ಸರ್ವಭೂತೇಷು ಇತಿ ವಾಕ್ಯಶೇಷಾಚ್ಚ।

ಇನ್ನು ಪ್ರಮೇಯದೀಪಿಕೆಯು ಹೀಗೆ ಹೇಳುತ್ತದೆ.

'ಅತ್ರ ಸಹಸ್ರಶಬ್ದಃ ದಶಶತವಾಚೀ ಇತಿ ಪ್ರತೀತಿನಿರಾಸಾಯಾಹ - **ಸಹಸ್ರೇತಿ** । ಬಹುಶಬ್ದ ಪರ್ಯಾಯೋಽಯಮ್ । ನತು ಪ್ರಸಿದ್ಧಾರ್ಥಮ್ । ವಿರಿಂಚಾಹೋರಾತ್ರಯೋಃ ಪ್ರಸಿದ್ಧ ಸಹಸ್ರಚತುರ್ಯುಗಪರ್ಯಂತತ್ವಾತ್ ಕಥಮೇತತ್ ಇತ್ಯತಃ ಆಹ - **ಬ್ರಹ್ಮೇತಿ** ।

ತಥಾ ಚ ದ್ವಿಪರಾರ್ಧಪ್ರಲಯಸ್ಯ ಆದಿಸೃಷ್ಟೇಶ್ಚ ಅತ್ರ ವಿವಕ್ಷಿತತ್ವಾದುಕ್ತಂ ಯುಕ್ತಮ್ । ನನು ಪರಸ್ಯ ಬ್ರಹ್ಮಣಃ ನಿತ್ಯತ್ವಾತ್ ಅಹೋರಾತ್ರೇ ನ ಸ್ತಃ ತತ್ಕಥಂ ತತ್ಪರಮೇ ತದಿತ್ಯತಃ ಆಹ

- **ಸೇತಿ** । ಸಾ ನಿರ್ವ್ಯಾಪಾರಾವಸ್ಥಾ ಪರಿಪೂರ್ಣರೂಪಸ್ಯಾಪಿ ಹರೇಃ ರಜನೀತ್ಯರ್ಥಃ । ಅನೇನ ಅಹರಪಿ ಸಿದ್ಧಮ್ । ಭವೇದೇತತ್ ದ್ವಿಪರಾರ್ಧಪ್ರಲಯಸ್ಯ ಆದಿಸೃಷ್ಟೇಶ್ಚ ವಿವಕ್ಷಾ ಇತ್ಯತ್ರ ಪ್ರಮಾಣಂ ಸ್ಯಾದಿತ್ಯತ ಆಹ -**ದ್ವಿಪರಾರ್ಧೇತಿ** । ಏವಂ ಆದಿಸೃಷ್ಟಿಶ್ಚ ಇತ್ಯಪಿ ಗ್ರಾಹ್ಯಮ್ । ನಹಿ ಅವಾಂತರಸೃಷ್ಟಿಪ್ರಲಯಯೋಃ ಸರ್ವಕಾರ್ಯೋತ್ಪತ್ತಿಃ ವಿನಾಶಾವಿತಿ ಭಾವಃ । ಆಗಮಾಂತರಸಮ್ಮತೇಶ್ಚ ಏವಂ ಇತ್ಯಾಹ -**ಉಕ್ತಂ ಚೇತಿ** । ಇತೋಪ್ಯೇವಮಿತ್ಯಾಹ ಇತಿ । ನಹಿ ಅವಾಂತರಪ್ರಲಯೇ ಸರ್ವೇಷಾಂ ಆಕಾಶಾದೀನಾಂ ಭೂತಾನಾಂ ನಾಶಃ । ನಾಪಿ ವಿರಿಂಚಸ್ಯ ಪಂಚಭೂತನಾಶೇಪ್ಯವಿನಾಶಿತ್ವಂ ಇತಿ ಭಾವಃ ।

ಗೀತೆಯ ೮ ನೇ ಅಧ್ಯಾಯ ೧೭ ನೇ ಶ್ಲೋಕದಲ್ಲಿರುವ ಸಹಸ್ರ ಶಬ್ದಕ್ಕೆ ಗೀತಾಭಾಷ್ಯ -ಪ್ರಮೇಯದೀಪಿಕೆಗಳು ಹೀಗೆ ಅರ್ಥವನ್ನು ಹೇಳುತ್ತವೆ. ಇಲ್ಲಿರುವ ಸಹಸ್ರಶಬ್ದಕ್ಕೆ ಪ್ರಸಿದ್ಧವಾದ ಹತ್ತುನೂರು(ಸಾವಿರ)ವರ್ಷ ಎಂದು ಅರ್ಥ ಮಾಡಬಾರದು ಎಂದು ತಿಳಿಸಲು ಆಚಾರ್ಯರು ಅನೇಕ ವಾಚಕವೆಂದು ವ್ಯಾಖ್ಯಾನಿಸುವರು. ಚತುರ್ಮುಖನ ಹಗಲು ರಾತ್ರಿಗಳು ಪ್ರಸಿದ್ಧವಾದ ನಾಲ್ಕು ಸಾವಿರಯುಗ ಪರಿಮಾಣವಾದುದರಿಂದ ಸಾವಿರವೆಂದು ಹೇಳಿದುದು ಹೇಗೆ ಎಂದು ಶಂಕಿಸಿ ಇಲ್ಲಿ ಬ್ರಹ್ಮ ಶಬ್ದಕ್ಕೆ ಪರಬ್ರಹ್ಮನೆಂದು ಅರ್ಥ ಮಾಡಿರುವರು. ಮತ್ತು ಇಲ್ಲಿ ದ್ವಿಪರಾರ್ಧಪ್ರಲಯ(ಮಹಾಪ್ರಲಯ) ಆದಿಸೃಷ್ಟಿಗಳು ವಿವಕ್ಷಿತವಾಗಿರುವುದರಿಂದ ಹೇಳಿದುದು ಸರಿಯಾಗಿದೆ. ಶ್ರೀಹರಿಯು (ಪರಬ್ರಹ್ಮ)ನಿತ್ಯನಾದುದರಿಂದ ಅವನಿಗೆ ಹಗಲು ರಾತ್ರಿ ಮುಂತಾದ ಕಾಲಕೃತ ವ್ಯತ್ಯಾಸ ನಿದ್ರೆ ಹೇಳುವುದು ಹೇಗೆ ಎಂದು ಶಂಕಿಸಿ ಆಚಾರ್ಯರು ಶ್ರುತಿಯನ್ನು ಉದಾಹರಿಸಿರುವರು. ನಿರ್ವ್ಯಾಪಾರವಾಗಿರುವುದೇ ಪರಿಪೂರ್ಣನಾದ ಹರಿಗೆ ರಜನಿ ಹೊರತು (ನಿದ್ರೆ ಅಥವಾ ಆಯುಷ್ಯ ಮಾಪಕ ಹಗಲು ರಾತ್ರಿಯಲ್ಲ) ಈ ವಿಷಯದಲ್ಲಿ ಪ್ರಮಾಣಬೇಕಲ್ಲ ಎಂದರೆ ಗೀತೆಯ ಮುಂದಿನ ಶ್ಲೋಕವೇ ಪ್ರಮಾಣವಾಗುತ್ತದೆ. ಏಕೆಂದರೆ ಅಲ್ಲಿ ಹಗಲಿನಲ್ಲಿ ಎಲ್ಲ ಕಾರ್ಯಗಳ ಸೃಷ್ಟಿ ರಾತ್ರಿಯಲ್ಲಿ ಎಲ್ಲ ಕಾರ್ಯಗಳ ನಾಶ ಹೇಳಿರುವರು. ಇದು ಅವಾಂತರ ಸೃಷ್ಟಿ ಪ್ರಲಯದಲ್ಲಿ ಸಾಧ್ಯವಿಲ್ಲ ಕಾರಣ ಮಹಾಪ್ರಲಯ ಆದಿಸೃಷ್ಟಿಗಳೇ ವಿವಕ್ಷಿತವಾಗಿವೆ. ಕೂರ್ಮಪುರಾಣವು ಈ ಮಾತನ್ನೇ ಸ್ಪಷ್ಟಪಡುಸುತ್ತದೆ. ಮತ್ತು ಎಲ್ಲ ಭೂತಗಳ ನಾಶವಾದಾಗಲೂ ನಾಶವಾಗುವದಿಲ್ಲವೆಂದೂ ಹೇಳುವುದು. ಇದರಿಂದಲೂ ಮಹಾಪ್ರಲಯ ಆದಿಸೃಷ್ಟಿಗಳೇ ಗೀತೆಯಲ್ಲಿ ಹೇಳಿದ್ದು ಎಂದು ತಿಳಿಯುವುದು. ಅವಾಂತರ ಪ್ರಲಯದಲ್ಲಿ ಆಕಾಶಾದಿಭೂತಗಳು ನಾಶವಾಗುವುದಿಲ್ಲ ಭೂತನಾಶವಾದ ಮೇಲೆ ವಿರಿಂಚನು ಉಳಿಯುವದಿಲ್ಲ ಕಾರಣ ಉಳಿದವನು ಪರಬ್ರಹ್ಮನೇ ಎಂದು ಭಾವ.

ಈಗ ಇಲ್ಲಿ ಹೇಳಿದ್ದು ನೈಮಿತ್ತಿಕ ಪ್ರಲಯ ಕಾರಣ ಯಾವ ವಿರೋಧವಿಲ್ಲ. ಇದೇ ರೀತಿ ವಾಕ್ಯಾಂತರ ವಿರೋಧವನ್ನೂ ಪರಿಹರಿಸಿಕೊಳ್ಳಬಹುದು.

ಪ್ರಾಕೃತಿಕ ಲಯವನ್ನು ಹೇಳುವರು.

**ದ್ವಿಪರಾರ್ಧೇ ತ್ವತಿಕ್ರಾಂತೇ ಬ್ರಹ್ಮಣಃ ಪರಮೇಷ್ಠಿನಃ ।**
**ತದಾ ಪ್ರಕೃತಯಃ ಸಪ್ತ ಕಲ್ಪ್ಯಂತೇ ಪ್ರಲಯಾಯ ವೈ ॥ ೫ ॥**

ಪರಮೇಷ್ಠಿನಃ ಬ್ರಹ್ಮಣಃ ಚ=ಸತ್ಯಲೋಕಾಧಿಪತಿಯಾದ ಚತುರ್ಮುಖ ಬ್ರಹ್ಮನ ದ್ವಿಪರಾರ್ಧೇ=ನೂರು ವರ್ಷಗಳು ಅತಿಕ್ರಾಂತೇ=ಮುಗಿಯುತ್ತಿರಲು ತದಾ=ಆಗ ಸಪ್ತ ಪ್ರಕೃತಯಃ=ಏಳು ಪ್ರಕೃತಿ ಕಾರ್ಯಗಳಾದ ಪಂಚಭೂತಗಳು ಮಹತತ್ತ್ವ ಅಹಂಕಾರ ತತ್ತ್ವಗಳು ಪ್ರಲಯಾಯ ಕಲ್ಪ್ಯಂತೇ=ನಾಶವಾಗುವವು.

**ಏಷ ಪ್ರಾಕೃತಿಕೋ ರಾಜನ್ ಪ್ರಲಯೋ ಯತ್ರ ಲೀಯತೇ ।**
**ಆಂಡಕೋಶಸ್ತು ಸಂಘಾತೋ ವಿಘಾತ ಉಪಸಾದಿತೇ ॥ ೬ ॥**

ರಾಜನ್=ರಾಜನೇ ವಿಘಾತೇ ಉಪಸಾದಿತೇ=ಪ್ರಲಯವು ಸಮೀಪಿಸಿದಾಗ ಸಂಘಾತಃ ಚ=ಪಂಚಭೂತಗಳು,ಮಹತತ್ತ್ವ ಅಹಂಕಾರತತ್ತ್ವ ಹಾಗು ಇನ್ನುಳಿದ ತತ್ತ್ವಗಳ ಸಮೂಹಾತ್ಮಕವಾದ ಆಂಡಕೋಶಃ=ಬ್ರಹ್ಮಾಂಡವು ಯತ್ರ=ಎಲ್ಲಿ ಲೀಯತೇ=ಮುಳುಗುವದೋ(ನಾಶವಾಗುವದು)ಏಷಃ=ಇದು ಪ್ರಾಕೃತಿಕಃ ಪ್ರಲಯಃ=ಪ್ರಾಕೃತಿಕ ಪ್ರಲಯವೆನಿಸಿಕೊಳ್ಳುವದು.

**ಪರ್ಜನ್ಯಃ ಶತವರ್ಷಾಣಿ ಭೂಮೌ ರಾಜನ್ ನ ವರ್ಷತಿ ।**
**ತದಾ ನಿರನ್ನೇ ಹ್ಯನ್ಯೋನ್ಯಂ ಭಕ್ಷ್ಯಮಾಣಾಃ ಕ್ಷುಧಾರ್ದಿತಾಃ ॥**
**ಕ್ಷಯಂ ಯಾಸ್ಯಂತಿ ಶನಕೈಃ ಕಾಲೇನೋಪದ್ರುತಾ ಪ್ರಜಾಃ ॥ ೭ ॥**

ಪರ್ಜನ್ಯಃ=ಮೋಡಗಳು ಶತವರ್ಷಾಣಿ=ನೂರು ವರ್ಷಗಳು ಭೂಮೌ=ಭೂಮಿಯಲ್ಲಿ ನ ವರ್ಷತಿ=ಮಳೆಗರೆಯದಿರಲು ರಾಜನ್=ರಾಜನೇ ಯದಾ=ಯಾವಾಗ ನಿರನ್ನೇ=ಲೋಕವು ಅನ್ನವಿಲ್ಲದಂತಾಗುವದೋ ತದಾ=ಆಗ ಕ್ಷುಧಾರ್ದಿತಾಃ=ಹಸಿವೆಯಿಂದ ಪೀಡಿತರಾಗಿ ಅನ್ಯೋನ್ಯಂ ಭಕ್ಷ್ಯಮಾಣಾಃ=ಒಬ್ಬರನ್ನೊಬ್ಬರು ತಿನ್ನುತ್ತ ಕಾಲೇನ=ಸಂಹಾರಕನಾದ ಶ್ರೀಹರಿಯಿಂದ ಉಪದ್ರುತಾಃ=ಪೀಡೆಗೆ ಒಳಗಾದವರಾಗಿ ಶನಕೈಃ ಕ್ಷಯಂ ಯಾಸ್ಯಂತಿ=ದುರ್ಬಲನನ್ನು ಪ್ರಬಲನು ಕಬಳಿಸುವನು ಹಿ=ನಿಧಾನವಾಗಿ ನಾಶವಾಗುವದು.

**ಸಾಮುದ್ರಂ ದೈಹಿಕಂ ಭೌಮಂ ರಸಂ ಸಾಂವರ್ತಕೋ ರವಿಃ ।**
**ರಶ್ಮಿಭಿಃ ಪಿಬತೇ ಘೋರೈಃ ಸರ್ವಂ ನೈವ ವಿಮುಂಚತಿ ॥ ೮ ॥**

ಸಾಮುದ್ರಂ=ಸಮುದ್ರದ ಮತ್ತು ದೈಹಿಕಂ=ದೇಹದಲ್ಲಿರುವ ರಸಂ=ನೀರನ್ನು ಅಥವಾ ರೇತಸ್ಸನ್ನು ಭೌಮಂ=ಭೂಮಿಯಲ್ಲಿರುವ ನೀರನ್ನೂ ಸಾಂವರ್ತಕಃ ರವಿಃ=ಪ್ರಲಯಕಾಲದ ಸೂರ್ಯನು ಘೋರೈಃ ರಶ್ಮಿಭಿಃ=ಪ್ರಖರವಾದ ಕಿರಣಗಳಿಂದ ಪಿಬತೇ=ಕುಡಿಯುವನು (ಸೆಳೆಯುವನು)ಸರ್ವಂ=ಕುಡಿದ ನೀರನ್ನು ನ ವಿಮುಂಚತಿ=ಮೋಡಗಳ ದ್ವಾರಾ ಬಿಡುವದಿಲ್ಲ.

**ತತಃ ಸಾಂವರ್ತಕೋ ವಹ್ನಿಃ ಸಂಕರ್ಷಣಮುಖೋತ್ಥಿತಃ ।**
**ದಹತ್ಯನಿಲವೇಗೋತ್ಥಃ ಶೂನ್ಯಾನ್ ಭುವಿವರಾನಥ ॥ ೯ ॥**

ತತಃ=ನಂತರ ಸಂಕರ್ಷಣಮುಖೋತ್ಥಿತಃ=ರುದ್ರಾಂತರ್ಗತ ಸಂಕರ್ಷಣನ ಮುಖದಿಂದ ಹೊರಟ ಅನಿಲವೇಗೋತ್ಥಃ=ಗಾಳಿಯಿಂದುಂಟಾದ ವೇಗವುಳ್ಳ ಸಾಂವರ್ತಕಃ ವಹ್ನಿಃ=ಪ್ರಲಯಕಾಲದ ಬೆಂಕಿಯು ಪ್ರಾಯಃ=ಬಹಳವಾಗಿ ಶೂನ್ಯಾನ್=ಪ್ರಾಣಿರಹಿತವಾದ ಭೂವಿವರಾನ್=ಭೂಮಿಯ ಬಿಲಗಳುಳ್ಳ ಅತಲಾದಿಲೋಕಗಳನ್ನು ದಹತಿ=ಸುಡುವದು.

**ಉಪರ್ಯಧಃ ಸಮಂತಾಶ್ಚ ಶಿಖಾಭಿಃ ವಹ್ನಿಸೂರ್ಯಯೋಃ ।**
**ದಹ್ಯಮಾನಂ ವಿಭಾತ್ಯಂಡಂ ದಗ್ಧಗೋಮಯಪಿಂಡವತ್ ॥ ೧೦ ॥**

ವಹ್ನಿಸೂರ್ಯಯೋಃ=ಬೆಂಕಿ ಮತ್ತು ಸೂರ್ಯರ ಶಿಖಾಭಿಃ=ಜ್ವಾಲೆಗಳಿಂದ ಉಪರಿ=ಮೇಲೆ ಅಧಃ=ಕೆಳಗೆ ಸಮಂತಾತ್=ಸುತ್ತಲೂ ದಹ್ಯಮಾನಂ=ಸುಡುತ್ತಿರುವ ಅಂಡಂ=ಬ್ರಹ್ಮಾಂಡವು ದಗ್ಧ ಗೋಮಯಪಿಂಡವತ್ ವಿಭಾತಿ=ಸುಟ್ಟ ಶಗಣೆಯ ಉಂಡೆಯಂತೆ ಕಾಣುವದು.

**ತತಃ ಪ್ರಚಂಡಪವನೋ ವರ್ಷಾಣಾಂ ಅಧಿಕಂ ಶತಮ್ ।**
**ಪರಃ ಸಾಂವರ್ತಕೋ ವಾತಿ ಧೂಮ್ರಂ ಖಂ ರಜಸಾವೃತಮ್ ॥ ೧೧ ॥**

ತತಃ=ನಂತರ ಸಾಂವರ್ತಕಃ=ಪ್ರಲಯ ಕಾಲೀನವಾದ ಪ್ರಚಂಡಃ ಪವನಃ=ಬಿರುಗಾಳಿಯು ಪರಃ=(ಪರಿತಃ)ಸುತ್ತಲೂ ವರ್ಷಾಣಾಂ ಅಧಿಕಂ ಶತಂ=ನೂರು ವರ್ಷಕ್ಕೂ ಸ್ವಲ್ಪ ಹೆಚ್ಚು ಕಾಲ ವಾತಿ=ಬೀಸುವದು. ಖಂ=ಆಕಾಶವು ರಜಸಾವೃತಂ=ಧೂಳಿಯಿಂದಾವರಿಸಲ್ಪಟ್ಟು ಧೂಮ್ರಂ ಭವತಿ=ಹೊಗೆಯಾಗುವದು.

**ತತೋ ಮೇಘಕುಲಾನ್ಯಂಗ ಚಿತ್ರವರ್ಣಾನ್ಯನೇಕಶಃ ।**
**ಶತವರ್ಷಾಣಿ ವರ್ಷಂತಿ ನಂದಂತಿ ರಭಸಸ್ವರೈಃ ॥ ೧೨ ॥**

ಹೇ ಅಂಗ=ರಾಜನೇ ಚಿತ್ರವರ್ಣಾನಿ=ಬೇರೆ ಬೇರೆ ಬಣ್ಣದ ಅನೇಕಶಃ=ಬಹಳ ಮೇಘಕುಲಾನಿ=ಮೋಡಗಳ ಸಮೂಹಗಳು ಶತವರ್ಷಾಣಿ=ನೂರು ವರ್ಷಗಳು ವರ್ಷಂತಿ=ಮಳೆಗರೆಯುವವು. ರಭಸಸ್ವರೈಃ ನಂದಂತಿ=ದೊಡ್ಡ ಶಬ್ದಗಳನ್ನು ಮಾಡುವವು.

*ಅನೇಕ ಬಣ್ಣದ ಮೇಘಗಳ ವರ್ಣನೆ ಮಹಾಭಾರತ ವನಪರ್ವದಲ್ಲಿ 191ನೆಯ ಅಧ್ಯಾಯ 74ನೇಯ ಶ್ಲೋಕದಿಂದ ಪ್ರಾರಂಭ ಮಾಡಿ ಈ ರೀತಿ ಹೇಳಿದೆ.*

'ತತೋ ಗಜಕುಲಪ್ರಖ್ಯಾಸ್ತಡಿನ್ಮಾಲಾ ವಿಭೂಷಿತಾಃ ।
ಉತ್ತಿಷ್ಠಂತಿ ಮಹಾಮೇಘಾಃ ನಭಸ್ಯದ್ಭುತದರ್ಶನಾಃ ।
ಕೇಚಿನ್ನಿಲೋತ್ಪಲಶ್ಯಾಮಾಃ ಕೇಚಿತ್ಕುಮುದಸನ್ನಿಭಾಃ ।
ಕೇಚಿತ್ಕಿಂಜಲ್ಕಸಂಕಾಶಾಃ ಕೇಚಿತ್ ಪೀತಾ ಪಯೋಧರಾಃ ।
ಕೇಚಿದ್ಧಾರಿದ್ರಸಂಕಾಶಾಃ ಕೇಚಿನ್ಮಕರಸನ್ನಿಭಾಃ ।
ಕೇಚಿತ್ಕಮಲಪತ್ರಾಭಾಃ ಕೇಚಿದ್ಧಿಂಗುಲಸಪ್ರಭಾಃ ।
ಕೇಚಿತ್ಪುರವರಾಕಾರಾ ಕೇಚಿದ್ಗಜಕುಲೋಪಮಾಃ ।
ಕೇಚಿದಂಜನಸಂಕಾಶಾ । ವಿದ್ಯುನ್ಮಾಲಾಪಿ ನದ್ಧಾಃ ಗಾಃ ಸಮುತ್ತಿಷ್ಠಂತಿ ವೈ ಘನಾಃ । ಎಂದು.

**ತತ ಏಕೋದಕಂ ವಿಶ್ವಂ ಬ್ರಹ್ಮಾಂಡವಿವರಾಂತರಮ್ ।**
**ತದಾ ಭೂಮೇರ್ಗಂಧಗುಣಂ ಗ್ರಸಂತ್ಯಾಪ ಉಪಪ್ಲವೇ ॥ ೧೩ ॥**

ತತಃ=ಅನಂತರ ಬ್ರಹ್ಮಾಂಡವಿವರಾಂತರಂ=ಬ್ರಹ್ಮಾಂಡದಲ್ಲಿರುವ ವಿಶ್ವಂ=ಎಲ್ಲವೂ ಏಕೋದಕಂ ಭವತಿ=ಜಲಮಯವಾಗುವದು. (ಪಂಚಭೂತದಲ್ಲಿ ಲಯ ಹೇಳುವರು.) ತದಾ=ಆಗ ಉಪಪ್ಲವೇ ಪ್ರಲಯಕಾಲದಲ್ಲಿ ತನ್ನಿಂದ ಹುಟ್ಟಿದ ಭೂಮೇಃ=ಭೂಮಿಗೆ ಕಾರಣವಾದ (ಉಪಚಾಯಕವಾದ) ಗಂಧಗುಣಂ=ಗಂಧವೆಂಬ ಗುಣವೆಂದುಕರೆಸಿ-ಕೊಳ್ಳುವ ಮಾತ್ರಾ ದ್ರವ್ಯವನ್ನು ಆಪಃ=ನೀರು ಗ್ರಸತಿ=ನುಂಗುವದು. ಗಂಧಕ್ಕೆ ಜಲದಲ್ಲಿ ಲಯವೆಂದು ಭಾವ.

**ವಿಶೇಷ-** ಕೆಲವೆಡೆ ಗ್ರಸಂತಿ ಎಂದೂ ಪಾಠವಿದೆ ಅದೂ ಆಗಬಹುದು. ಆದರೆ ಆಪಃ ಎಂಬ ಬಹುವಚನಾಂತ ಶಬ್ದವಿರುವಾಗ ಗ್ರಸತಿ ಎಂದು ಏಕವಚನ ಸರಿಯಲ್ಲ ಎನ್ನಲಾಗದು. ಈ ರೀತಿ ನಿಯಮವಿಲ್ಲ. 'ಅಪ್ತೇಜಸೋಃ ಕಾರ್ಯಂ' ಎಂದು ಪ್ರಯೋಗವಿದೆ. ಇಲ್ಲವಾದರೆ ಅಪ್ತೇಜಸಾಂ ಎಂದಾಗ ಬೇಕಿತ್ತು. ಸ್ವಾಭಾವಿಕವಾದ

ಶಬ್ದದ ಬಹುತ್ವವು ತನಗೆ ಅನ್ವಯಿಸಬೇಕಾದ ವಿಶೇಷಣ ಮತ್ತು ಆಖ್ಯಾತದ (ಧಾತೂತ್ತರ ಪ್ರತ್ಯಯ) ಬಹುವನಚಕ್ಕೆ ಕಾರಣವಲ್ಲ ಎಂದಿಟ್ಟು ಕೊಂಡೇ ಪೆದ್ದಿಭಟ್ಟರು 'ಜಾಯಾ ಪ್ರತಿಗಾಹಿತಗಂಧಮಾಲ್ಯಾಂ' ಎಂಬಲ್ಲಿ ಜಾಯಯಾ ಪ್ರತಿಗ್ರಾಹಿತೇ ಗಂಧಾಶ್ಚ ಮಾಲ್ಯಂಚೇತಿ ಯಯಾ ಸಾ ಎಂದು ವ್ಯಾಖ್ಯಾನಿಸುವರು.

*ಗಂಧವನ್ನು ನೀರು ನುಂಗಿದ ಮೇಲೆ ಏನಾಗುವದು ಎಂದು ಹೇಳುವರು.*

**ಗ್ರಸ್ತಗಂಧಾ ತು ಪೃಥಿವೀ ಪ್ರಲಯತ್ವಾಯ ಕಲ್ಪತೇ ।**
**ಅಪಾಂ ರಸಮಥೋ ತೇಜಸ್ತಾಲೀಯಂತೇಽಥ ನೀರಸಾಃ** ॥ ೧೪ ॥

ಗ್ರಂಸ್ತಗಂಧಾ ತು=ನೀರಿನಲ್ಲಿ ಗಂಧವು ಲಯವಾಗುತ್ತಿರಲು ಪೃಥಿವೀ=ಪೃಥಿವಿಯು ಪ್ರಲಯಾಯ ಕಲ್ಪತೇ=ತಾನು ನಾಶವಾಗುವದು. ಅಥ=ನಂತರ ಅಪಾಂ ರಸಂ=ನೀರಿಗೆ ಕಾರಣವಾದ ರಸವೆಂಬ ಮಾತ್ರಾವನ್ನು ತೇಜಃ=ಅಗ್ನಿಯು ಗ್ರಸತಿ=ನುಂಗುವದು. ನಿರಸಾಃ ತಾಃ=ರಸವಿಲ್ಲದ ನೀರುಗಳು ಲೀಯಂತೇ=ನಾಶವಾಗುವವು.

**ಗ್ರಸತೇ ತೇಜಸೋ ರೂಪಂ ವಾಯುಸ್ತದ್ರಹಿತಂ ತದಾ ।**
**ಲೀಯತೇ ಚಾನಿಲೇ ತೇಜೋ ವಾಯೋಃ ಖಂ ಗ್ರಸತೇ ಗುಣಮ್** ॥ ೧೫ ॥

ತೇಜಸಃ ರೂಪಂ=ತೇಜಸ್ಸಿಗೆ ಕಾರಣವಾದ ರೂಪವನ್ನು ವಾಯುಃ ಗ್ರಸತಿ=ವಾಯುವು ನುಂಗುವದು ತದ್ರಹಿತಂ ತೇಜಃ=ರೂಪವಿಲ್ಲದ ತೇಜಸ್ಸು ಅನಿಲೇ=ವಾಯುವಿನಲ್ಲಿ ಲೀಯತೇ=ಲಯವಾಗುವದು ವಾಯೋಃ ಗುಣಂ=ವಾಯುವಿಗೆ ಕಾರಣವಾದ ಸ್ಪರ್ಶವನ್ನು ಖಂ=ಆಕಾಶವು ಗ್ರಸತೇ=ನುಂಗುವುದು.

**ಸ ವೈ ವಿಶತಿ ಖಂ ರಾಜನ್ ತತಶ್ಚ ನಭಸೋ ಗುಣಮ್ ।**
**ಶಬ್ದಂ ಗ್ರಸತಿ ಭೂತಾದಿರ್ನಭಸ್ತಮನುಲೀಯತೇ** ॥ ೧೬ ॥

ರಾಜನ್=ಪರೀಕ್ಷಿತನೇ ಸಃ=ವಾಯುವು ಖಂ ವಿಶತಿ=ಆಕಾಶದಲ್ಲಿ ಲಯವಾಗುವದು. ತತಃ=ನಂತರ ನಭಸಃ=ಆಕಾಶದ ಗುಣವಾದ ಶಬ್ದಂ=ಶಬ್ದವನ್ನು ಭೂತಾದಿಃ ಗ್ರಸತಿ=ತಾಮಸ ಅಹಂಕಾರವು ನುಂಗುವದು. ತಮನು=ಶಬ್ದ ಲಯವಾದ ಮೇಲೆ ನಭಃ=ಆಕಾಶವು ಅಹಂಕಾರದಲ್ಲಿ ಲಯವಾಗುವದು.

**ತೈಜಸಾನೀಂದ್ರಿಯಾಣ್ಯಂಗ ದೇವಾ ವೈಕಾರಿಕಾಗುಣೈಃ** ॥ ೧೭ ॥

ಹೇ ಅಂಗ=ರಾಜನೇ ತೈಜಸಾನಿ ಇಂದ್ರಿಯಾಣಿ=ತೈಜಸ ಅಹಂಕಾರ ಕಾರ್ಯವಾದ ಇಂದ್ರಿಯಗಳು ತೈಜಸ ಅಹಂಕಾರದಲ್ಲಿ ವೈಕಾರಿಕಾಃ ದೇವಾಃ=ವೈಕಾರಿಕ ದೇವತೆಗಳ ದೇಹಗಳು ಗುಣೈಃ=ತಮ್ಮ ಗುಣಗಳೊಡನೆ ವೈಕಾರಿಕ ಅಹಂಕಾರದಲ್ಲಿ ಲಯವಾಗುವದು.

**ಮಹಾನ್ ಗ್ರಸತ್ಯಹಂಕಾರಂ ಗುಣಾಃ ಸತ್ವಾದಯಶ್ಚ ತಮ್ ।**
**ಗ್ರಸತೇಽವ್ಯಾಕೃತಂ ಬೀಜಂ ಗುಣಾನ್ ಕಾಲೇನ ಚೋದಿತಮ್ ॥ ೧೮ ॥**

ಅಹಂಕಾರಂ=ತ್ರಿವಿಧ ಅಹಂಕಾರವನ್ನು ಮಹಾನ್=ಮಹತತ್ತ್ವವು ಗ್ರಸತಿ=ನುಂಗುವದು ತಂ=ಮಹತತ್ತ್ವವನ್ನು ಸತ್ವಾದಯಃ ಗುಣಾಃ ಗ್ರಸಂತಿ=ಸತ್ವಾದಿಗುಣಗಳು ನುಂಗುವವು. ಗುಣಾನ್=ಸತ್ವಾದಿಗಳನ್ನು ಕಾಲೇನ ಚೋದಿತಃ=ಕಾಲನಾಮಕ ಶ್ರೀಹರಿಯಿಂದ ಪ್ರೇರಿತವಾದ ಬೀಜಂ=ಎಲ್ಲದ್ದಕ್ಕೂ ಮೂಲ ವ್ಯಂಜಕವಾದ ಅವ್ಯಾಕೃತಂ=ಅವ್ಯಾಕೃತ ತತ್ತ್ವವು (ಪ್ರಕೃತಿಯು) ಗ್ರಸತೇ=ನುಂಗುವದು.

ಪಂಚಭೂತಗಳ ಲಯವಿಷಯದಲ್ಲಿ ಇಲ್ಲಿಯ ವಾಕ್ಯಗಳು ಮೇಲ್ನೋಟಕ್ಕೆ ಒಂದು ವಿಧವಾದ ಅರ್ಥವನ್ನು ನೀಡುವವು. ಮೂರನೆಯ ಸ್ಕಂಧದಲ್ಲಿ ಸ್ಪಷ್ಟವಾಗಿ ಸೃಷ್ಟಿಯನ್ನು ನಿರೂಪಿಸಿರುವದರಿಂದ ಆದರ ವಿಪರೀತ ಕ್ರಮದಿಂದ ಲಯವನ್ನು ಕೆಳಗಿನಂತೆ ತಿಳಿಯಬೇಕು.

ಪೃಥಿವಿಯು ತನಗೆ ಉಪಾದಾನವಾದ ಪೃಥಿವೀಭೂತಸೂಕ್ಷ್ಮದಲ್ಲಿ ಲಯವಾಗುವದು. ಈ ಭೂತಸೂಕ್ಷ್ಮವು ತನಗೆ ಉಪಚಾಯಕವಾದ ಗಂಧತನ್ಮಾತ್ರಾದಲ್ಲಿ ಲಯವಾಗುವದು. ಆ ತನ್ಮಾತ್ರಾವು ಗಂಧಮಾತ್ರಾ ಸೂಕ್ಷ್ಮದಲ್ಲಿ ಲಯವಾಗುವದು. ಗಂಧಾಮಾತ್ರಾವು ಜಲಭೂತದಿಂದ ಉಪಚಿತವಾದದ್ದರಿಂದ ಜಲದಲ್ಲಿ ಲಯವಾಗುವದು. ಜಲವು ಜಲಭೂತಸೂಕ್ಷ್ಮದಲ್ಲಿ ಲಯವಾಗಿ ರಸಮಾತ್ರಾದಲ್ಲಿ ಲಯವಾಗುವದು. ರಸಮಾತ್ರಾಕ್ಕೆ ರಸಸೂಕ್ಷ್ಮದಲ್ಲಿ ಲಯ. ಆದಕ್ಕೆ ಉಪಚಾಯಕ ಅಗ್ನಿ ಭೂತದಲ್ಲಿ ಲಯ. ಅಗ್ನಿಗೆ ಅಗ್ನಿಸೂಕ್ಷ್ಮದಲ್ಲಿ ಲಯ(ರೂಪ ಸೂಕ್ಷ್ಮದಲ್ಲಿ ಮುಖ್ಯ ಲಯ) ವಾಯುವಿಗೆ ವಾಯುಸೂಕ್ಷ್ಮದಲ್ಲಿ ಲಯ. ಉಪಚಾಯಕಸ್ಪರ್ಶತನ್ಮಾತ್ರಾ ವಿಯೋಗ. ಸ್ಪರ್ಶಕ್ಕೆ ಆಕಾಶದಲ್ಲಿ, ಆಕಾಶಕ್ಕೆ ಆಕಾಶಸೂಕ್ಷ್ಮದಲ್ಲಿ ಲಯ. ಅದಕ್ಕೆ ಶಬ್ದತನ್ಮಾತ್ರಾದಲ್ಲಿ, ಶಬ್ದತನ್ಮಾತ್ರಾಕ್ಕೆ ಮಾತ್ರಾಸೂಕ್ಷ್ಮದಲ್ಲಿ ಲಯ. ಅದಕ್ಕೆ ತಾಮಸ ಅಹಂಕಾರದಲ್ಲಿ, ವೈಕಾರಿಕರ ದೇಹ, ಮನಸ್ಸುಗಳಿಗೆ ವೈಕಾರಿಕಅಹಂಕಾರದಲ್ಲಿ ಲಯ. ಇಂದ್ರಿಯಗಳಿಗೆ ತೈಜಸಅಹಂಕಾರದಲ್ಲಿ ಲಯ. ಈ ಮೂರಕ್ಕೆ ಮಹತತ್ತ್ವದಲ್ಲಿ, ಮಹತತ್ತ್ವಕ್ಕೆ

ಗುಣತ್ರಯಗಳಲ್ಲಿ ಗುಣತ್ರಯಗಳಿಗೆ ಮೂಲ ಪ್ರಕೃತಿ ಎನಿಸುವ ಅವ್ಯಕ್ತತತ್ತ್ವದಲ್ಲಿ ಲಯವು ಹೀಗೆ ತಿಳಿಯಬೇಕು. (ಲಯ ಎಂದರೆ ಉಪಚಾಯಕಾಂಶಗಳು ಹೋಗುವವು ಎಂದು ಭಾವ.)

*ಪಂಕ್ತಿನಿವೇಶನ್ಯಾಯದಿಂದ ಪ್ರಕೃತಿಗೂ ನಾಶವುಟೆಂದು ಶಂಕೆ ಬರುವದು ಕಾರಣ ಆದರ ಸ್ವರೂಪ ಹೇಳುವರು.*

**ನ ತಸ್ಯ ಕಾಲಾವಯವೈಃ ಪರಿಣಾಮಾದಯೋ ಗುಣಾಃ ।**
**ಅನಾದ್ಯನಂತಮವ್ಯಕ್ತಂ ನಿತ್ಯಂ ಕಾರಣಮವ್ಯಯಮ್ ॥ ೧೯ ॥**

ತಸ್ಯ=ಅವ್ಯಕ್ತತತ್ತ್ವಕ್ಕೆ ಕಾಲಾವಯವೈಃ=ತೃಟಿ, ಲವ ಮುಂತಾದವುಗಳಿಂದ ಪರಿಣಾಮಾದಯಃ ಗುಣಾಃ ನ=ಪರಿಣಾಮಾದಿಗಳು ಇಲ್ಲ. ಅನಾದ್ಯನಂತಂ=ಉತ್ಪತ್ತಿ ನಾಶರಹಿತವಾದುದು. ಅವ್ಯಯಂ=ಕಾರ್ಯನಾಶವಾದರೂ ನಾಶವಾಗದಿರುವದು ಕಾರಣಂ=ಎಲ್ಲದಕ್ಕೂ ಮೂಲಕಾರಣವು.

*ಕಾಲಶಬ್ದದಿಂದ ಪ್ರಕೃತನಾದ ಶ್ರೀಹರಿಯ ಲಕ್ಷಣ ಹೇಳುವರು.*

**ನ ಯತ್ರ ವಾಚೋ ನ ಮನೋ ನ ಸತ್ತ್ವಂ**
**ತಮೋ ರಜೋ ವಾ ಮಹದಾದಯೋಽಮೀ ।**
**ನ ಪ್ರಾಣಬುದ್ಧೀಂದ್ರಿಯದೇವತಾ ವಾ**
**ನ ಸನ್ನಿವೇಶಃ ಖಲು ಲೋಕಕಲ್ಪಃ ॥ ೨೦ ॥**

**ತಾತ್ಪರ್ಯ- ನ ಯತ್ರ ವಾಚ ಇತ್ಯಾದಿ ಕಾಲಾಖ್ಯಸ್ಯ ಬ್ರಹ್ಮಣಃ ಸ್ವರೂಪಮ್ ।**

ಯತ್ರ=ಯಾವನ ವಿಷಯದಲ್ಲಿ ವಾಚಃ ನ ವರ್ತಂತೇ=ವೇದ ವಾಕ್ಯಗಳೂ ಸಹ ಸಂಪೂರ್ಣವಾಗಿ ಪ್ರತಿಪಾದಿಸಲು ಸಮರ್ಥವಾಗುವದಿಲ್ಲ. ನ ಮನಃ=ಮನಸ್ಸು ಕೂಡ ಪೂರ್ಣತಿಳಿಯಲಾರದು ('ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ'ಎಂದು ಶ್ರುತಿ ಇದೆ.) ಸತ್ತ್ವಂ ತಮಃ ರಜಃ=ಸತ್ವ ರಜಸ್ತಮೋ ಗುಣಗಳು ಸರ್ವಾತ್ಮನಾ=ಯಾವವಿಧದಿಂದಲೂ ನ=ಅವನಲ್ಲಿ ಬಂಧಕವಾಗಿ ಇಲ್ಲವೇ ಇಲ್ಲ. ಅಮೀ ಮಹದಾದಯಃ ಅಪಿ ನ=ಮಹತತ್ತ್ವ ಅಹಂಕಾರ ತತ್ತ್ವಗಳು ತಮ್ಮ ಕಾರ್ಯ ಮಾಡಲಾರವು. ಪ್ರಾಣಬುದ್ಧೀಂದ್ರಿಯದೇವತಾಃ ನ=ಪ್ರಾಣದೇವತೆಯಾದ ಮುಖ್ಯಪ್ರಾಣನು, ಬುದ್ಧಿಯ ದೇವತೆಯಾದ ಉಮಾದೇವಿ, ಇಂದ್ರಿಯ ದೇವತೆಗಳಾದ ಸೂರ್ಯಚಂದ್ರದಿಗ್ದೇವತೆಗಳು, ಅಶ್ವಿನೀದೇವತೆಗಳು, ಜಯಂತ, ಇಂದ್ರ ಮುಂತಾದವರು

ತಮ್ಮ ಪ್ರಾಣ-ಬುದ್ಧಿ-ಇಂದ್ರಿಯಗಳ ವ್ಯಾಪಾರದೊಡನೆ ಪ್ರವರ್ತಿಸಲಾರರು. ಯತ್ರ=ಯಾವನಲ್ಲಿ ಲೋಕಕಲ್ಪಃ ಸನ್ನಿವೇಶಃ=ಲೋಕಾಕಾರಕ್ಕೆ ಸದೃಶ ಆಕಾರವೂ ನ=ಇರುವದಿಲ್ಲ.

೧೮ ನೇ ಶ್ಲೋಕದಲ್ಲಿ 'ಕಾಲೇನ ಚೋದಿತಂ' ಎಂದು ಕಾಲಶಬ್ದದಿಂದ ಪ್ರಕೃತನಾದ ಶ್ರೀಹರಿಯ ಲಕ್ಷಣವನ್ನು ಹೇಳಿರುವರು. ಕಾರಣ ೨೧ ನೇ ಶ್ಲೋಕದಲ್ಲಿ ಅಸಂಗತ ಏನು ಹೇಳುವರು ಎಂಬುದನ್ನು ಪರಿಹರಿಸಿಲು ಆಚಾರ್ಯರು ತಾತ್ಪರ್ಯ ಹೇಳುವರು. 'ನ ಯತ್ರ ವಾಚಃ ಇತ್ಯಾದಿ ಕಾಲಾಖ್ಯಸ್ಯ ಬ್ರಹ್ಮಣಃ ಸ್ವರೂಪಂ' ಎಂದು.

'ಕಾಲಸ್ಯೇಶ್ವರರೂಪಸ್ಯ ಗತಿಂ ವಿಷ್ಣೋರ್ಮಹಾತ್ಮನಃ' ಎಂಬ ೩ ನೆಯ ಅಧ್ಯಾಯ ೧೨ ನೆಯ ಶ್ಲೋಕದಲ್ಲಿ ಮಾಡಿದ ಕಾಲನಾಮಕ ಹರಿಸ್ವರೂಪ ಪ್ರಶ್ನೆಯ ಉತ್ತರವಾಗಿಯೂ ಈ ಶ್ಲೋಕಗಳು ಹೊರಟಿವೆ ಎಂದು ಭಾವ.

**ತಾ. ವಿಶೇಷ-** ಇನ್ನು ಕೆಲವರು ಈ ತಾತ್ಪರ್ಯ ಇಲ್ಲಿಯದಲ್ಲ ೪೮ ನೇ ಶ್ಲೋಕದ ತಾತ್ಪರ್ಯ ವಾಕ್ಯದಲ್ಲಿ 'ಭಿನ್ನಾವೇವ ಪರಸ್ಪರಂ' ಎಂಬ ವಾಕ್ಯದ ನಂತರ ಸಿಂಹಾವಲೋಕನ ನ್ಯಾಯದಿಂದ ೨೦-೨೩ ನೇ ಶ್ಲೋಕಗಳ ತಾತ್ಪರ್ಯ ಹೇಳಿರುವರು. ೨೩ ನೇ ಶ್ಲೋಕದ ತಾತ್ಪರ್ಯವಾದ 'ಅವಯವ್ಯಯವಾಭೇದಾತ್' ಎಂಬುದಕ್ಕಿಂತ ಮುಂಚೆ ಇರಬೇಕು ಎಂದು ಹೇಳುವರು. ಇರಲಿ ಎಲ್ಲಿ ಇದ್ದರೂ ಈ ಶ್ಲೋಕದ ತಾತ್ಪರ್ಯವೆ ತಾನೇ. ಆದ್ದರಿಂದ ಇಲ್ಲಿಯೇ ಹಾಕಿದೆ.

**ವಿಶೇಷಾರ್ಥ-** ಹೇ ಮಹದ=ನಿತ್ಯ ಉತ್ಸವಪ್ರದನೇ ಅನಮನೋನ=ಸರ್ವದಾ ಸರ್ವರಿಂದಲೂ ನಮಸ್ಕೃತನೇ(ನಮನೇನ ಊನಃ ನಮನೋನಃ ಸಃ ನ ಭವತೀತಿ ಅನಮನೋ ನಃ) ಯದಾ=ಯಾವಾಗ ತ್ವಂ=ನೀನು ಅದಯಃ=ದಯಾರಹಿತ ನಾಗುವಿಯೋ ತದಾ=ಆಗ ಅಮೀ ನ=ಇವರೆಲ್ಲರು ಇರಲಾರರು. ಆದಯಃ ಯದಾ ತದಾ=ಚೆನ್ನಾಗಿ ದಯವುಳ್ಳವನಾದಾಗ ನಯತ್ರವಾಚಃ=ನೀತಿಪಾತ್ರವಾದ ಮಾತುಗಳು ಮನಃ=ಮನಸೇ ಮೊದಲಾದವು ನ ಇತಿ ನ=ಇಲ್ಲಾಂತಿಲ್ಲ ಎಲ್ಲವೂ ಇರುವವು. ಅಂದರೆ ಸತ್ವಾದಿಗಳು(ಅನ್ಯತ್ರ)ಬೇರೆಯವರಲ್ಲಿ ತಮ್ಮ ಕೆಲಸ ಮಾಡುವವು ಎಂದು ಭಾವ. ಅಮೀ ಮಹದಾದಯಶ್ಚ ನ ಇತಿ ನ=ಮಹದಾದಿ ತತ್ತ್ವಗಳು ಎಲ್ಲವೂ ಇರುವವು. ಪ್ರಾಣಬುದ್ಧೀಂದ್ರಿಯದೇವತೆಗಳು ನಿನ್ನ ಅನುಗ್ರಹದಿಂದಲೇ ಇರುವರು. ಅನಸನ್ನಿವೇಶಶ್ಚ ಭವತಿ=ಪ್ರಾಣ ಸಂಪ್ರವೇಶವು ಆಗುವದು. ಆದ್ದರಿಂದ ತ್ವಮೇವ ಲೋಕಕಲ್ಪಃ=ನೀನೇ

ಲೋಕನಿರ್ಮಾಣ ಸಮರ್ಥನು ಖಲು=ನಿಶ್ಚಿಯವು. 'ನ ಋತೇ ತ್ವತ್ ಕ್ರಿಯತೇ ಕಿಂಚನಾರೇ' ಎಂಬ ಶ್ರುತಿಯ ಅಭಿಪ್ರಾಯವೂ ಇದೇ ಆಗಿದೆ ಎಂದು ಸೂಚಿತವಾಗುವದು.

*ಪಂಚಭೂತಗಳಾದ ಆಕಾಶಾದಿಗಳ ಸಂಬಂಧವೂ ಶ್ರೀಹರಿಗೆ ಇಲ್ಲವೆಂದು ಹೇಳಲು ಯಾವ ಅವಸ್ಥೆಗಳೂ ಇಲ್ಲವೆಂದು ಹೇಳುವರು.*

**ನ ಸ್ವಪ್ನಜಾಗ್ರನ್ನ ಚ ತತ್ ಸುಷುಪ್ತಂ ನ ಖಂ ಜಲಂ ಭೂರನಿಲೋಽಗ್ನಿರರ್ಕಃ ।**
**ಸುಷುಪ್ತವಚ್ಛೂನ್ಯವದಪ್ರತರ್ಕ್ಯಂ ತನ್ಮೂಲಭೂತಂ ಪದಮಾಮನಂತಿ ॥ ೨೦ ॥**

ಸ್ವಪ್ನಜಾಗ್ರತ್ ನ=ಸ್ವಪ್ನಸಹಿತವಾದ ಜಾಗ್ರದವಸ್ಥೆವುಳ್ಳವನಲ್ಲ ನ ಸುಷುಪ್ತಂ= ಸುಷುಪ್ತ್ಯವಸ್ಥೆ ಉಳ್ಳವನೂ ಅಲ್ಲ ತತ್ರ=ಆ ಭಗವಂತನಲ್ಲಿ ಖಂ=ಆಕಾಶವು ಜಲಂ=ನೀರು ಭೂಃ=ಭೂಮಿಯು ಅನಿಲಃ=ವಾಯುವು ಅಗ್ನಿಃ=ಬೆಂಕಿಯು ಅರ್ಕಃ=ಸೂರ್ಯನು ನ=ಇರುವದಿಲ್ಲ ಸುಷುಪ್ತವತ್=ಯಾವಾಗಲೂ ಸುಖರೂಪನು ಶೂನ್ಯವತ್=ಶೂನ್ಯದಂತೆ ಇರುವವನು ಆದ್ದರಿಂದಲೇ ಅಪ್ರತರ್ಕ್ಯಂ=ಶುಷ್ಕತರ್ಕಗಳಿಗೆ ನಿಲುಕದವನು ಮೂಲಭೂತಂ=ಪ್ರಧಾನಕಾರಣವಾದ ತತ್=ಆ ಬ್ರಹ್ಮನನ್ನು ಪದಂ ಆಮನಂತಿ= ಮುಖ್ಯವಾದ ಗಮ್ಯನೆಂದು ಜ್ಞಾನಿಗಳು ಹೇಳುವರು.

*ಉಪಸಂಹಾರ ರೂಪವಾಗಿ ಪ್ರಲಯಸ್ವರೂಪವನ್ನು ಹೇಳುವರು.*

**ಲಯಃ ಪ್ರಾಕೃತಿಕೋ ಹ್ಯೇಷ ಪುರುಷಾವ್ಯಕ್ತಯೋರ್ಯದಾ ।**
**ಶಕ್ತಯಃ ಸಂಪ್ರಲೀಯಂತೇ ವಿವಶಾಃ ಕಾಲವಿದ್ರುತಾಃ ॥ ೨೧ ॥**

ಯದಾ=ಯಾವ ಲಯಕಾಲದಲ್ಲಿ ಕಾಲವಿದ್ರುತಾಃ=ಕಾಲದಿಂದ ಜೀವಿತಾವಧಿಯ ಸಮಾಪ್ತಿಯನ್ನು ಹೊಂದಿದ ಪುರುಷಾವ್ಯಕ್ತಯೋಃ=ಬ್ರಹ್ಮ-ಪ್ರಕೃತಿಗಳ ಶಕ್ತಯಃ= ಪೃಥಿವ್ಯಾದಿಶಕ್ತಿಗಳು ವಿವಶಾಃ='ವಿ'ಶಬ್ದವಾಚ್ಯನಾದ ಪರಮಾತ್ಮನ ಅಧೀನವಾಗಿ ಸಂಪ್ರಲೀಯಂತೇ=ನಾಶವಾಗುವವೋ ತದಾ=ಆಗ ಸಂಭವಿಸುವ ಏಷಃ ಲಯಃ=ಈ ಲಯವು ಪ್ರಾಕೃತಿಕಃ=ಪ್ರಾಕೃತಿಕಲಯವೆನಿಸಿಕೊಳ್ಳುವದು

*ಚರಾಚರವಸ್ತುಗಳಲ್ಲಿ ಉಳಿಯುವುದು ಯಾವುದೆಂದು ಹೇಳುವರು.*

**ಬುದ್ಧೀಂದ್ರಿಯಾರ್ಥರೂಪೇಣ ಜ್ಞಾನಂ ಭಾತಿ ತದಾಶ್ರಯಮ್ ।**
**ಅನ್ವಯವ್ಯತಿರೇಕಾಭ್ಯಾಮಾದ್ಯಂತವದವಸ್ತು ಯತ್ ॥ ೨೨ ॥**

ತದಾ=ಪ್ರಲಯಕಾಲದಲ್ಲಿ ಆಶ್ರಯಂ=ಚರಾಚರಾಶ್ರಯನಾದ ಜ್ಞಾನಂ=ಜ್ಞಾನರೂಪನಾದ ಪರಬ್ರಹ್ಮನು ಬುದ್ಧೀಂದ್ರಿಯಾರ್ಥರೂಪೇಣ=ಜ್ಞಾನಾತ್ಮಕಳಾದ ರಮೆಯಿಂದಲೂ, ಜ್ಞಾನ ಸಾಧನವಾದ್ದರಿಂದ ಬುದ್ಧಿಯೆನಿಸುವ ಶ್ರುತಿಗಳಿಂದಲೂ, ಮುಕ್ತರ ಶ್ರೇಣಿಯಿಂದಲೂ ಇಂದ್ರಿಯಾರ್ಥರೂಪೇಣ ಭಾತಿ=ಇಂದ್ರಿಯಗಳಿಗೆ ವಿಷಯನಾಗಿ ತೋರುವನು. (ಅಥವಾ ಇಂದ್ರಿಯಾಣಾಂ ಅರ್ಥರೂಪೇಣ ಇಂದ್ರಿಯವಿಷಯವಾದ ಸೌಂದರ್ಯಾ-ತಿಶಯದಿಂದ ಭಾತಿ=ವಿರಾಜಿಸುವನು) ಜ್ಯೋತಿರೂಪದಿಂದಿರುವನು. ಹೇಗಿರುವನು ಎಂದರೆ ಅನ್ವಯವ್ಯತಿರೇಕಾಭ್ಯಾಂ ಕಾಲಾಭ್ಯಾಂ=ಪ್ರಪಂಚವು ಇರುವಾಗಲೂ ಇಲ್ಲದಿರುವಾಗಲೂ ಇರುವನು ಎಂದರ್ಥ. ಅಥವಾ ಬುದ್ಧೀಂದ್ರಿಯಾರ್ಥರೂಪೇಣ ವರ್ತತೇ=ಜ್ಞಾನಾದ್ಯಾತ್ಮಕದೇಹದಿಂದಿರುವನು ಎಂದೂ ಅರ್ಥ.

('ಸಂವಿದೇವ ಪರಿತೋ ವಿರಾಜತೇ' ಎಂಬ ಪೂರ್ವಾಚಾರ್ಯರ ವಚನವಿರುವದರಿಂದ ಜ್ಞಾನವು ಜ್ಞಾತೃಜ್ಞೇಯ ವಿಹೀನವಾದುದು ಎಂಬುದು ನಿರಾಕೃತ). 'ನಾಸದಾಸೀತ್' ಮುಂತಾಗಿ ಶ್ರುತಿಯಿರುವದರಿಂದ ಲಕ್ಷ್ಮೀ ಹಾಗೂ ವೇದಾದಿಗಳು ಇರುವದು ಹೇಗೆ ಎಂದರೆ ಅವು ಇದ್ದರೂ ಇಲ್ಲದಂತೆ ಎಂದು ಹೇಳುವರು. ಯತ್ ಆದ್ಯಂತವತ್ ಅವಸ್ತು=ಯಾವುದು ಶರೀರ ಸಂಬಂಧನಾಶ ರೂಪ ಉತ್ಪತ್ತಿನಾಶವುಳ್ಳದ್ದೋ ಅದು ಅವಸ್ತು ಅಸ್ವತಂತ್ರವು. ಆದಿಯಲ್ಲಿ ಅಂತ್ಯದಲ್ಲಿಯೂ ಇರುವ ಲಕ್ಷ್ಮಿಯೂ ಅಸ್ವತಂತ್ರಳೇ ಈ ಅಭಿಪ್ರಾಯದಿಂದ ಶ್ರುತಿಯೂ ನಾಸೀತ್ ಎಂದು ಹೇಳಿದೆ. ಇಲ್ಲಿ ಕೆಲವರು ಅವಸ್ತು ಎಂದರೆ ವಸ್ತುವಾದ ಬ್ರಹ್ಮನಿಂದ ಭಿನ್ನವಾಗಿ ಇಲ್ಲ ಎಂದು ಹೇಳುವರು ಅದು ಸರಿಯಲ್ಲ ಎಂದು ತಾತ್ಪರ್ಯದಿಂದ ತಿಳಿಯುವದು. ಎನ್ನುವುದು ಶ್ರೀವಿಜಯಧ್ವಜರ ಅಭಿಪ್ರಾಯ.

ಸತ್ಯಧರ್ಮರ ಪ್ರಕಾರ ಅನ್ವಯವ್ಯತಿರೇಕಾಭ್ಯಾಂ ಯದಾದ್ಯಂತವತ್ ತದವಸ್ತು ಎಂಬುದರ ಅರ್ಥ ಯತ್=ಯಾವುದು ಆದ್ಯಂತವತ್=ಭಗವದಧೀನವಾದ ಉತ್ಪತ್ತಿನಾಶವುಳ್ಳದ್ದೋ ತತ್=ಅದು ಅವಸ್ತು=ನಿತ್ಯಶಕ್ತಿಯುಕ್ತಭಗವಂತನಿಂದ ಭಿನ್ನವಾಗಿದೆ. ಅಸ್ವತಂತ್ರವೂ ಆಗಿದೆ. ಅನ್ವಯವ್ಯತಿರೇಕಾಭ್ಯಾಂ ಎಂದರೆ ಅನುಕೂಲೇ ಪೀತದುಕೂಲೇ ಸರ್ವಂ ಸಂಪದ್ಯತೇ ಇತಿ ಅನ್ವಯಃ ಅಂದರೆ ಪೀತಾಂಬರಧಾರಿಯಾದ ಶ್ರೀಹರಿಯು ಅನುಕೂಲನಾದಾಗ ಎಲ್ಲವನ್ನೂ ಪಡೆಯುವನು. ಅನ್ಯಥಾ ನೇತಿ ವ್ಯತಿರೇಕಃ ಪ್ರಸನ್ನನಾಗದಿದ್ದರೆ ಇಲ್ಲವೆಂದು ವ್ಯತರೇಕವಿದೆ. 'ಅನುಕೂಲೇ ಜಗನ್ನಾಥೇ ವಿಪರೀತೇ ವಿಪರ್ಯಯಃ' ಮತ್ತು ಯತ್ ಸತ್ವೇ ಯತ್ ಸತ್ವಂ, ಯದಭಾವೇ ಯದಭಾವಃ ಎನ್ನುವ ನಿಯಮದಂತೆ ಯತ್ ಸತ್ವೇ=ಭಗವಂತನು ಇದ್ದರೆ ಯತ್ಸತ್ವಂ=ಉಂಟಾಗುವ

ಜಗತ್ತಿಗೆ ಸತ್ವವು ಯದಭಾವೇ ಯದಭಾವಃ=ಭಗವಂತನು ಪ್ರಸಾದೋನ್ಮುಖನಾಗದಿದ್ದರೆ ಯಾವುದು ಅಸತ್ಪ್ರಾಯವಾಗಿರುವುದೋ ಎಂದು ವ್ಯತಿರೇಕವಿರುವದರಿಂದ ಸ್ವತಂತ್ರವಾಗಿ ಉಳಿಯುವದು ಎಂದರೆ ಬ್ರಹ್ಮನೊಬ್ಬನೇ ಎಂದು ಭಾವ.

ಮೇಲಿನ ಶ್ಲೋಕದಲ್ಲಿ ಯಾವುದು ಉತ್ಪತ್ತಿನಾಶವುಳ್ಳದ್ದು ಅದು ಅವಸ್ತು ಅಂದರೆ ಅಪಾರಮಾರ್ಥಿಕ ಅಂದ ಮೇಲೆ 'ಸರ್ವಂ ಖಲು ಇದಂ ಬ್ರಹ್ಮ' 'ತತ್ತ್ವಮಸಿ' ಮುಂತಾದ ವಾಕ್ಯಗಳು ಹೇಳುವ ಬ್ರಹ್ಮನಿಂದ ಭಿನ್ನವಾದ ವಸ್ತುಗಳು ಇಲ್ಲ, ಎಲ್ಲ ಅಭಿನ್ನ ಎಂದು ಹೇಳಿದಂತೆ ಕಾಣುವದು ಕಾರಣ ಪ್ರಮಾಣವನ್ನು ಉದಾಹರಿಸಿ ಭ್ರಾಂತಿಯನ್ನು ಪರಿಹರಿಸುವರು.

**ತಾತ್ಪರ್ಯ : ಜೀವವಿಷ್ಣೋರಭೇದಶ್ಚ ದೇಹಯೋಗವಿಯೋಜನೇ । ವಿಷ್ಣೋರ್ದುಃಖಂ ವ್ರಣಿತ್ವಾದಿಃ ಪರಾಭಾವಸ್ತಥೈವ ಚ । ಅಸ್ವಾತಂತ್ರ್ಯಂ ಚ ವೇದಾದಾವುಕ್ತವತ್ ಭಾಸತೇ ವಿಭೋಃ । ಕ್ವಚಿತ್ಕ್ವಚಿತ್ ವಿಮೋಹಾಯ ದೈತ್ಯಾದೀನಾಂ ದುರಾತ್ಮನಾಮ್ । -ಇತಿ ಬ್ರಹ್ಮಾಂಡೇ**

ಇಲ್ಲಿ ಣ್ಯಂತವಾದುದರಿಂದ(ಅಂದರೆ ಅಲ್ಪಾಚ್ಕವಾದ್ದರಿಂದ) ಅಭ್ಯರ್ಹಿತಃ ಅಂದರೆ ಶ್ರೇಷ್ಠವಾದ್ದರಿಂದಲೂ ವಿಷ್ಣುಶಬ್ದವನ್ನು ಮುಂಚೆ ಹೇಳಬೇಕಿದ್ದರೂ ಸರ್ವಂ ಖಲು ಎಂಬ ಶ್ರುತಿಗೆ ಅನುಗುಣವಾಗಿ ಜೀವಾದಿಗಳನ್ನು ಉದ್ದೇಶಿಸಿ ವಿಷ್ಣುತ್ವವನ್ನು ವಿಧಾನಮಾಡಿರುವರು. ಶಬ್ದದಿಂದ ಅಭ್ಯರ್ಹಿತತ್ವವು ಹೇಳಬೇಕಾದ ಅಭೇದಕ್ಕೆ ಅನನುಕೂಲವಾದುದು ಎಂಬ ಉದ್ದೇಶದಿಂದಲೂ ಜೀವಶಬ್ದವನ್ನು ಮೊದಲು ಪ್ರಯೋಗಿಸಿರುತ್ತಾರೆ.

'ಅಲಂಕೃತ್ಯ ಶಿರಚ್ಛೇದಃ' ಎಂಬ ನ್ಯಾಯದಿಂದ ಜೀವಶಬ್ದವನ್ನು ಮೊದಲು ಪ್ರಯೋಗಿಸಿ ಪ್ರಮಾಣ ರಚಿಸಿದವರು ಪ್ರತಿವಾದಿಯನ್ನು ಸ್ವಲ್ಪ ಸಂತೋಷ ಗೊಳಿಸಿರುವರು ಎಂದು ತಿಳಿಯಬೇಕು.

ಕೆಲವೆಡೆ ಜೀವವಿಷ್ಣೋರಭೇದಃ='ಸರ್ವಂ ಖಲು ಇದಂ ಬ್ರಹ್ಮ' ಎಂದು ಜೀವಬ್ರಹ್ಮರಿಗೆ ಅಭೇದವನ್ನು, ದೇಹಯೋಗವಿಯೋಜನೇ=ಭಗವಂತನಿಗೆ ಉತ್ಪತ್ತಿನಾಶಗಳನ್ನು ಕೆಲವೆಡೆ, ವಿಷ್ಣೋಃ ದುಃಖಂ=ಶ್ರೀಹರಿಗೆ ದುಃಖವು, ವ್ರಣಿತ್ವಂ= ಮತ್ತೆ ಕೆಲವೆಡೆ ಗಾಯ ಮುಂತಾದವು ರಾಮನಾಗಿ ಅವತರಿಸಿದಾಗ ಹೇಳಿದ್ದಿದೆ. ಪರಾಭವಃ=ಸೋಲನ್ನು ಪರಶುರಾಮನು ಭೀಷ್ಮರೊಡನೆ ಸೋತಂತೆ ಅಸ್ವಾತಂತ್ರ್ಯ =ಅಂಬಾಳನ್ನು ಕೂಡಿಸಲು ಆಗದಂತೆ ಅಸ್ವಾತಂತ್ರ್ಯವು ವೇದಾದಾವುಕ್ತವತ್ ಭಾಸತೇ

ವಿಭೋಃ=ಇವೇ ಮೊದಲಾದ ದೋಷಗಳನ್ನು ಭಗವಂತನಿಗೆ ವೇದ ಮತ್ತು ಪುರಾಣಾದಿಗಳಲ್ಲಿ ಹೇಳಿದಂತೆ ಕಾಣುವದು. ತಿಳಿದು ಕೊಳ್ಳುವವನ ದೋಷದಿಂದ ಹಾಗೆ ಅರ್ಥವಾಗುವದು ಹೊರತು ಹಾಗೆ ನಿಜವಾಗಿ ಹೇಳಿರುವದಿಲ್ಲ ಎಂಬುದನ್ನು ಉಕ್ತವತ್ ಭಾಸತೇ ಎಂದುದ್ದರಿಂದ ಸೂಚಿಸಿರುವರು. ಹೀಗೆ ಮಿಶ್ರವಾದ ಮಾತುಗಳನ್ನು ಹೇಳಲು ಪ್ರಯೋಜನವಾದರೂ ಏನು ಎಂದರೆ ದುಷ್ಟರಾದ ದೈತ್ಯರಿಗೆ ಮೋಹ ಬರಲು ಎಂಬುದೇ ಉದ್ದೇಶ. ಇಲ್ಲವಾದರೆ ಅವರ ಗತಿಗೆ ಯಾರೂ ಹೋಗಲಿಕ್ಕಿಲ್ಲದಂತೆ ಆದೀತು ಎಂದು ಭಾವ.

ಈ ತಾತ್ಪರ್ಯವಾಕ್ಯವನ್ನು ೧೧ ನೇ ಸ್ಕಂಧ ೩೧ ನೇ ಅಧ್ಯಾಯ ೧೩ ನೇ ಶ್ಲೋಕದಲ್ಲಿ ಶ್ರೀಕೃಷ್ಣನ ದೇಹತ್ಯಾಗ ಮಾಡಿದ್ದು ಭ್ರಾಂತಿ ಎಂದು ತಿಳಿಸಲು ಹೊರಟಿದೆ ಎಂದು ಅಲ್ಲಿ ಸೇರಿಸಿ ವ್ಯಾಖ್ಯಾನಿಸುವರು ಶ್ರೀಸುಧೀಂದ್ರತೀರ್ಥರು. ಇನ್ನು ಕೆಲವರು ೩ನೇ ಸ್ಕಂಧ ೧೨ ನೇ ಅಧ್ಯಾಯದ ೯ ನೇ ಶ್ಲೋಕಕ್ಕೆ ಸಂಬಂಧಿಸಿದ್ದು ಎಂದು ಅಲ್ಲಿ ಸೇರಿಸುವರು. ಮತ್ತೆ ಕೆಲವರು ೧೨ನೇಯ ಸ್ಕಂಧ ೪ನೇಯ ಅಧ್ಯಾಯ ೨೦ ನೇಯ ಶ್ಲೋಕಕ್ಕೆ ಸಂಬಂಧಿಸಿದ್ದು ಎಂದು. ಅಂತೂ ಪರಮಾತ್ಮನಿಗೆ ಜೀವರಿಂದ ಅಭೇದ ದುಃಖಾದಿದೋಷಗಳು ಕಂಡು ಬರುವದನ್ನು ನಿರಾಕರಿಸಲು ಉದಾಹರಿಸಿದ್ದು ಎಲ್ಲಿ ಹಾಕಿದರೇನು. ಅದರಲ್ಲಿ ಆಗ್ರಹವಿಲ್ಲ. ಆದರೂ ಇಲ್ಲಿ ಅವಸ್ತು ಎಂದು ಹೇಳಿದಾಗ 'ಅವಸ್ತ್ವಶಕ್ತಮುದ್ದಿಷ್ಟಂ ಶಕ್ತಂ ವಸ್ತ್ವಿತಿ ಭಣ್ಯತೇ । ವಸನಾದ್ವಾಸನಾದ್ವಿಷ್ಣುಃ ವಸ್ತುಶಬ್ದೇನ ಭಣ್ಯತೇ' ಎಂದು ಪ್ರಥಮತಾತ್ಪರ್ಯಾನುಸಾರ ಇಲ್ಲಿರುವದೇ ಸಂಗತವೆಂದು ಶ್ರೀ ಸತ್ಯಧರ್ಮತೀರ್ಥರ ಅಭಿಪ್ರಾಯ.

**ದೀಪಶ್ಚಕ್ಷುಶ್ಚ ರೂಪಂ ಚ ತೇಜಸೋ(ಜ್ಯೋತಿಷೋ) ನ ಪೃಥಗ್ ಭವೇತ್ ।**
**ಏವಂ ಧೀಃ ಖಾನಿ ಮಾತ್ರಾಶ್ಚ ನ ಸ್ಯುರಪ್ಯತ ಮಾರುತಾತ್ ॥ ೨೪ ॥**

ದೀಪಃ=ಪ್ರಣತಿಯಲ್ಲಿರುವ ದೀಪವು ಚಕ್ಷುಃ=ಕಣ್ಣು ರೂಪಂ=ಕಣ್ಣಿನಿಂದ ಕಾಣುವ ಬಣ್ಣ ಮುಂತಾದ ಗುಣಗಳು ತೇಜಸಃ ನ ಪೃಥಕ್ ಭವೇತ್=ಜ್ಯೋತಿಯ ಶಕ್ತಿಯನ್ನು ಬಿಟ್ಟು ಹೇಗಿಲ್ಲವೋ ಜ್ಯೋತಿಯ ಸಾಮರ್ಥ್ಯವಿಲ್ಲದಿದ್ದರೆ ಎಲ್ಲವೂ ವ್ಯರ್ಥವು ಏವಂ=ಅದೇ ರೀತಿ ಧೀಃ=ಬುದ್ಧಿಯು ಖಾನಿ=ಇತರ ಇಂದ್ರಿಯಗಳು ಮಾತ್ರಾಃ= ವಿಷಯಗಳು ಮಾರುತಾತ್ ಪೃಥಕ್ ನ ಸ್ಯುಃ=ಮುಖ್ಯಪ್ರಾಣನಿಲ್ಲದೇ ಇಲ್ಲ ಕಿಮುತ=ಅಂದ ಮೇಲೆ ಭಗವತಃ ಪೃಥಕ್ ನ ಇತಿ=ಭಗವಂತನಿಲ್ಲದೇ ಇಲ್ಲವೆಂದು ಹೇಳುವದೇನು. 'ವಾಯುನಾ ವೈ ಗೌತಮ' 'ಮಾರುತ್ಯೇವ ಯತಶ್ಚೇಷ್ಟಾಃ' 'ಏತಸ್ಮಾತ್

ಜ್ಜಾಯತೇ ಪ್ರಾಣಃ' 'ಆತ್ಮನಃ ಏವ ಪ್ರಾಣೋ ಜಾಯತೇ । ಬ್ರಹ್ಮಣೋ ವಾ ಏತಾನಿ ಕರಣಾನಿ' 'ಸರ್ವಾಂ ತಾ ಹರಯೇಽರ್ಪಯೇತ್' ಮುಂತಾದ ಶ್ರುತಿಸ್ಮೃತಿಗಳಿವೆ.

*21 ನೇ ಶ್ಲೋಕದಲ್ಲಿ 'ನ ಸ್ವಪ್ನಂ ನ ಜಾಗ್ರತ್ ನ ಚ ಸುಷುಪ್ತಂ' ಎಂದು ಭಗವಂತನಿಗೆ ಅವಸ್ಥಾತ್ರಯಗಳಿಲ್ಲವೆಂದು ಹೇಳಿದೆ ಹಾಗಾದರೆ ಅವು ಎಲ್ಲಿವೆ ಎಂದು ಹೇಳುವರು.*

**ಬುದ್ಧೇರ್ಜಾಗರಣಂ ಸ್ವಪ್ನಃ ಸುಷುಪ್ತಿರಿತಿ ಹೋಚ್ಯತೇ ।**
**ಮಾಯಾಮಾತ್ರಮಿದಂ ರಾಜನ್ ನಾನಾತ್ವಂ ಪ್ರತ್ಯಗಾತ್ಮನಿ ॥ ೨೫ ॥**

**ಯಥಾ ಜಲಧರಾ ವ್ಯೋಮ್ನಿ ಭವಂತಿ ನ ಭವಂತಿ ಚ ।**
**ಬ್ರಹ್ಮಣೀದಂ ತಥಾ ವಿಶ್ವಂ ಉಪಯಾತ್ಯುದಯಾಪ್ಯಯಮ್ ॥ ೨೬ ॥**

ಬುದ್ಧೇಃ=ಜ್ಞಾನಾಶ್ರಯನಾದ ಜೀವನಿಗೆ ಜಾಗರಣಂ, ಸ್ವಪ್ನಃ, ಸುಷುಪ್ತಿ ಇತಿ ಉಚ್ಯತೇ ಹ=ಜಾಗ್ರತ್, ಸ್ವಪ್ನ, ಸುಷುಪ್ತಿ ಹೀಗೆ ಮೂರು ಅವಸ್ಥೆಗಳು ಇವೆ ಎಂದು ಹೇಳಲ್ಪಡುತ್ತವೆ. (ಸತಾ ಸೋಮ್ಯ ತದಾ ಸಂಪನ್ನೋ ಭವತಿ' ಅಥ ಹೈತತ್ ಪುರುಷಃ ಸ್ವಪಿತಿ ನಾಮ') ಮುಂತಾಗಿ ಪ್ರತ್ಯಗಾತ್ಮನಿ=ಪರಮಾತ್ಮನಲ್ಲಿ ನಾನಾತ್ವಂ=ಅವಸ್ಥಾಗಳು ಬಹಳ ಆದುದರಿಂದ ಅವುಗಳನ್ನು ಪ್ರವರ್ತಿಸುವ ವಿಶ್ವ ತೈಜಸ, ಪ್ರಾಜ್ಞ ಎಂಬ ಭಗವಂತನ ರೂಪಗಳಿಗೆ ತೋರುವ ಭೇದವು ಮಾಯಾಮಾತ್ರಂ=ಭಗವಂತ ಇಚ್ಛೆಯ ಅಧೀನವೆಂದು ತಿಳಿಯುವದು ವ್ಯೋಮ್ನಿ=ಆಕಾಶದಲ್ಲಿ ಜಲಧರಾಃ=ಮೋಡಗಳು ಭವಂತಿ ನ ಭವಂತಿ ಚ=ಕೆಲವು ಕಾಲ ಇರುವವು ಕೆಲವು ಕಾಲ ಇರುವದಿಲ್ಲ ಹುಟ್ಟುವವು ನಾಶವಾಗುವುವು ಯಥಾ=ಹೇಗೆ ತಥಾ=ಹಾಗೆಯೇ ಬ್ರಹ್ಮಣಿ=ಶ್ರೀಹರಿಯಲ್ಲಿ ಇದಂ ವಿಶ್ವಂ=ಈ ಜಗತ್ತು ಉದಯಾಪ್ಯಯಂ=ಉತ್ಪತ್ತಿಸಹಿತವಾದ ನಾಶವನ್ನು ಹೊಂದುವದು.

**ವಿಶೇಷ-** ೨೫-೨೬ನೇ ಶ್ಲೋಕದಲ್ಲಿ ಪರಮಾತ್ಮನಲ್ಲಿ ಇರುವ ಜೀವ ಭೇದವು ಮಾಯಾಮಾತ್ರ ಎಂದು ಹೇಳುವರು. ಅಂದರೆ ಮಿಥ್ಯಾ ಎಂದು ಹೇಳುವಂತೆ ಹೇಳುವದು. ಕಾರಣ ಪ್ರಮಾಣದಿಂದ ಸರಿಯಾದ ಅರ್ಥವನ್ನು ಹೇಳುವರು.

**ಪ್ರತ್ಯೇಕಂ ವಿಷ್ಣುರೂಪಾಣಾಂ ಭ್ರಾಂತಿಮಾತ್ರಾಭಿಧಾ ಮತಾ । ಜಗತಶ್ಚೈವ ವಿಷ್ಣೋಶ್ಚ ಸತ್ಯೋ ಭೇದಃ ಸದೈವ ತು । ಯಥಾಕಾಶಘನೌ ನಿತ್ಯಂ ಭಿನ್ನಾವೇವ ಪರಸ್ಪರಮ್ । ಏವಮೀಶೋ ಜಗಚ್ಚೈವ ಭಿನ್ನಾವೇವ ಪರಸ್ಪರಂ ಇತಿ ಚ ।**

ಜಾಗ್ರದಾದಿ ಅವಸ್ಥೆಗಳು ನಾನಾವಿಧಗಳಾಗಿರುವದರಿಂದ ಅವುಗಳ ಪ್ರವರ್ತಕರಾದ ವಿಶ್ವಾದಿ ಭಗವದ್ರೂಪಗಳಿಗೂ ಭೇದವಿದೆ ಎಂಬುವದು ಭ್ರಾಂತಿ ಮಾತ್ರದಿಂದ ತೋರುವದು. ಜಗತ್ತಿಗೂ ಶ್ರೀಹರಿಗೂ ಭೇದವು ಯಾವಾಗಲೂ ಸತ್ಯ ಹಾಗು ಅಬಾಧಿತ. ಉದಾಹರಣೆಗೆ ಆಕಾಶ ಮತ್ತು ಮೋಡಗಳು ಪರಸ್ಪರ ಭಿನ್ನವಾಗಿವೆಯೋ ಅದರಂತೆ ಶ್ರೀಹರಿಯು ಮತ್ತು ಜಗತ್ತು ಭಿನ್ನವೇ ಆಗಿದೆ.

ಯದ್ಯಪಿ ಇಲ್ಲಿ ಈಶ್ವರನಲ್ಲಿ ಜೀವರಿಂದ ಭೇದವು ಭಗವಂತನ ಇಚ್ಛೆಯಿಂದ ಜ್ಞಾತವು ರಕ್ಷಿತವೂ ಎಂದು ಜೀವೇಶ್ವರಬೇಧಪರವಾಗಿಯೂ ವ್ಯಾಖ್ಯಾನಿಸಲು ಬರುವದು ಆದರೂ ಆ ರೀತಿ ಅರ್ಥವು ಮಾಯಾಮಾತ್ರಮಿದಂ ಅದ್ವೈತಂ ಪರಮಾರ್ಥತಃ ಎಂದು ಅನುವ್ಯಾಖ್ಯಾನದಲ್ಲಿ ಉದಾಹರಿಸಿರುವ ಶ್ರುತಿಗೆ ಅರ್ಥೈಸಿರುವದನ್ನು ವಿಚಾರಿಸಲಾಗಿ ಶಿಷ್ಯರಿಂದಲೇ ತಿಳಿಯಲು ಸಾಧ್ಯ ಎಂದು ತಿಳಿದು ಭಗವದ್ರೂಪವಿಷಯಕವಾಗಿಯೇ ಆಚಾರ್ಯರು ವ್ಯಾಖ್ಯಾನಿಸಿರುವರು ಎಂದು ಕೆಲವರ ಅಭಿಪ್ರಾಯ.

ಇನ್ನು ಕೆಲವರ ಅಭಿಪ್ರಾಯ ಹೀಗಿದೆ. 'ಜಗತಶ್ಚೈವ ವಿಷ್ಣೋಶ್ಚ' ಮುಂತಾಗಿ ದೃಷ್ಟಾಂತವನ್ನು ಕೊಟ್ಟು ಜೀವಾದಿಭೇದವನ್ನು ಛಾಯೆಯಿಂದ ತೋರಿಸಿರುವದರಿಂದ ಅದನ್ನೂ ಹೇಳಬಹುದು ಎಂದು. ಮೊದಲು ಹೇಳಿದ 'ಜಗತಶ್ಚೈವ ವಿಷ್ಣೋಶ್ಚ' ಎಂಬ ಕ್ರಮದಲ್ಲಿಯೇ ನಿರ್ಗಮನ ಮಾಡುವರು ಎಂದು ತಿಳಿಸಲು 'ಪರವಲ್ಲಿಂಗಂ ದ್ವಂದ್ವತತ್ಪುರುಷಯೋಃ' ಅಂದರೆ ದ್ವಂದ್ವ ಮಾಡಿದಾಗ ಉತ್ತರಪದದ ಲಿಂಗವೇ ಉಳಿಯುವದು ಎಂಬ ನಿಯಮವನ್ನು ಉಲ್ಲಂಘಿಸಿ ಭಿನ್ನಾವೇವ ಎಂದಿರುವರು ಎಂದು ತಿಳಿಯಬೇಕು ಇಲ್ಲವಾದರೆ ಏವಮೀಶೋ ಜಗಚ್ಚೈವ ಎರಡಕ್ಕೂ ದ್ವಂದ್ವ ಮಾಡಿ ಈಶ ಜಗತೀ ಭಿನ್ನೇ ಎನ್ನಬೇಕಿತ್ತು ಎಂದು ಭಾವ.

ಅಥವಾ 'ಅಧಿಕಾರಶ್ಚ ತದ್ಧಾನಿಃ ಪ್ರಸಂಗಾದೇವ ಚಿಂತಿತೌ' ಎಂಬ ಅನುವ್ಯಾಖ್ಯಾನವ್ಯಾಖ್ಯಾನಸುಧಾಭಿಧಾನಧಾಟೀಯತೀ ಇಮೌ ಇತ್ಯಧ್ಯಾಹೃತ್ಯ ಯೋಜನಾ ವಾ ಅಂದರೆ ಶ್ರೀ ಸುಧೆಯ ಶೈಲಿಯನ್ನು ಅನುಸರಿಸಿ ಇಮಾ ಎಂಬ ಪದವನ್ನು ಅಧ್ಯಾಹಾರ ಮಾಡಿ ಯೋಜಿಸಿರುವರು ಎಂದು ತಿಳಿಯಬೇಕು. ಈ ತಾತ್ಪರ್ಯವಾಕ್ಯವನ್ನು ಕೆಲವು ವಾಖ್ಯಾನಕಾರರು ಬೇರೆ ಕಡೆ ಸೇರಿಸಿದ್ದರೂ ಸಂಗತವಾದ್ದರಿಂದ ಇಲ್ಲಿ ಸೇರಿಸಿದ್ದೇವೆ ಎನ್ನುವರು ಶ್ರೀಸತ್ಯಧರ್ಮರು.

೨೬ ನೇ ಶ್ಲೋಕ ಮೂಲದಲ್ಲಿ ಉದಯಾಪ್ಯಯೌ ಎಂದು ಹೇಳಬೇಕಾದಲ್ಲಿ ಉದಯಾಪ್ಯಯಂ ಎಂದು ಹೇಳಿರುವದರಿಂದ ಉದಯಕ್ಕೆ ಅಪ್ಯಯ ಅಪ್ಯಯಕ್ಕೆ ಉದಯವು. ಆ ಆ ಕಾಲದಲ್ಲೇ ಆಗುವದು ಎಂದು ಸೂಚಿಸಿರುವರು. ಅಂದರೆ ಜಗತ್ತು ಉತ್ಪತ್ತಿಯಾಗುವಾಗಲೇ ಉತ್ಪತ್ತಿಗೂ ಉತ್ಪತ್ತಿಯಾಗುವದು ಜಗತ್ತು ನಾಶವಾಗುವಾಗ ನಾಶದ ಉತ್ಪತ್ತಿಯೂ ಆಗುವದು ಅಂದರೆ ಉದಯಾಪ್ಯಯಂ ಎಂದು ಪ್ರಯೋಗಿಸಿದರೆ ಉದಯಸ್ಯ ಅಪ್ಯಯಃ ಉದಯಾಪ್ಯಯಃ ತಂ ಎಂದು ಅಪ್ಯ ಯಸ್ಯ ಉದಯಃ ಉದಯಾಪ್ಯಯಃ(ಪರನಿಪಾತ) ಮಾಡಿ ಅರ್ಥ ಹೇಳಬಹುದು. ದ್ವಿವಚನ ಉಪಯೋಗಿಸಿದರೆ ಆ ಅರ್ಥ ಮಾಡಲು ಬರುವದಿಲ್ಲ. ಜಗತ್ತಿನ ನಾಶವಾದಾಗ ಉತ್ಪತ್ತಿನಾಶವೂ ಆಗುವದು ನಾಶದ ಉತ್ಪತ್ತಿಯೂ ಆಗುವದು ಎಂದು ಭಾವ. ಜಗತ್ತಿನ ನಾಶವೆಂದರೂ ನಾಶದ ಉದಯ ಎಂದರೂ ಅಷ್ಟೇ ಅರ್ಥವಾಗುವದು.

*ಜಗತ್ತಿಗೂ ಬ್ರಹ್ಮನಿಗೂ ಭೇದ ಇದ್ದಂತೆ ಅವಯವ ಅವಯವಿಗಳಿಗೂ (ಉಪಾದಾನ-ಉಪಾದೇಯಗಳಿಗೆ) ಭೇದವೇ ಇರಲಿ 'ಪಟಸ್ಯ ತಂತವಃ' ಎಂಬ ವ್ಯವಹಾರದಂತೆ ಎಂಬ ಶಂಕೆಗೆ ಉತ್ತರಿಸುವರು*

**ಏತೇ ಹ್ಯವಯವಾ ಪ್ರೋಕ್ತಾ ಸರ್ವಾವಯವಿನಾಮಿಹ ।**
**ವಿನಾಽರ್ಥೇನ ಪ್ರತೀಯೇರನ್ ಪಟಸ್ಯೇವಾಂಗತಂತವಃ ॥ ೨೭ ॥**

ಇಹ=ಅವಯವಾವಯವಿ ಸಮುದಾಯದಲ್ಲಿ ಸರ್ವಾವಯವಿನಾಂ=ಎಲ್ಲ ಅವಯವಿಗಳಾದ ಮಹದಾದಿಗಳಿಗೆ ಯೇ ಅವಯವಾಃ ಇತಿ ಪ್ರೋಕ್ತಾಃ=ಅವಯವಗಳು ಎಂದು ಕರೆಸಿಕೊಳ್ಳುವವೋ ಅವುಗಳು ಅರ್ಥೇ ನ ವಿನಾ ಪ್ರತಿಯೇರನ್ ಅರ್ಥೇ= ಅವಯವಿ ಇರುವಾಗ ತಂ ವಿನಾ=ಅದರಿಂದ ಭಿನ್ನವಾಗಿ ನ ಪ್ರತಿಯೇರನ್= ತೋರುವದಿಲ್ಲ ಆದ್ದರಿಂದ ಅಭಿನ್ನವಾಗಿದೆ. ಅಂಗ=ರಾಜನೇ ಪಟಸ್ಯ ತಂತವಃ ಇವ=ಪಟದ ಅವಯವಗಳಾದ ಸಕಲತಂತುಗಳು ಅವಯವಿಯಾದ ಪಟದಿಂದ ಅಭಿನ್ನ ಹೇಗೋ ಹಾಗೆ ಇಲ್ಲಿ. 'ರಾಹೋಃ ಶಿರಃ' ಎಂದಂತೆ ಪಟಸ್ಯ ತಂತವಃ ಎನ್ನುವುದು. ಅಭೇದೇ ಷಷ್ಠಿ ಪಟಾಭಿನ್ನಾಃ ಎಂದರ್ಥ.

*ತಾ.ಅ.-ಭಗವಂತನಿಗೆ ಜಗತ್ತಿನಿಂದ ಭೇದವಿದ್ದಂತೆ ಭಗವಂತನಿಗೂ ಅವನ ಅವಯವಗಳಿಗೂ ಭೇದ ಬರಲಿ ಎಂದರೆ ದೃಷ್ಟಾಂತವನ್ನು ತೋರಿಸಿ ಪರಮಾತ್ಮನಿಗೂ ಅವನ ಅವಯವಗಳಿಗೂ ಅಭೇದವನ್ನು ತಿಳಿಸುವರು.*

**ಅವಯವ್ಯವಯವಾಭೇದಾತ್ ಕೋಟ್ಯಂಶೋ ಭೇದ ಈರಿತಃ । ಸೋऽಪಿ ಭೇದೋ ನ ಚಾಭೇದಾತ್ ಪೃಥಗೇವ ಪ್ರವರ್ತತೇ । ಅವಯವ್ಯವಯವಾನಾಂ ಚ ಕಾರ್ಯಕಾರಣವಸ್ತುನಾಮ್ । ಏಕ ಏವ ನಿಯಂತಾऽಸೌ ಹರಿಃ ನಾರಾಯಣಃ ಪರಃ । ಇತಿ ಚ ।**

ಅವಯವಗಳಿಗೆ ಅವಯವಿಗಳಿಂದ ಅಭೇದ ಇರುವದರಿಂದ (ಈರಿತಃ ಭೇದಃ) ಎಲ್ಲಿಯಾದರೂ ಭೇದ ಹೇಳಿದ್ದರೆ ಅದು ಕೋಟ್ಯಂಶಃ ಎಂದು (ಇಲ್ಲಿ ಕೋಟಿ ಎಂದರೆ ಬಹಳ ಎಂದಷ್ಟೇ ಅರ್ಥ) ಇಟ್ಟುಕೊಂಡು ಅಂಶಾನಾಂ ಕೋಟಿಷು ಎಂದರೆ ಅಂಶಗಳ ಸಮುದಾಯದಲ್ಲಿ ಯಾವ ಒಂದು ಅಂಶವು ಅನುಯೋಗಿಯಾಗುವದೋ ಅದು ಕೋಟ್ಯಂಶ ಭೇದವೆನಿಸುವದು. ಅಂದರೆ ಅವಯವಿಪಟವೆಂದು ಇಟ್ಟುಕೊಂಡರೆ ಅದರ ಅವಯವಗಳಾದ ಎಲ್ಲ ಸಿದ್ಧಪಡಿಸಿದ ತಂತುಗಳಿಗೂ ಪಟಕ್ಕೂ ಅಭೇದ. ಆದರಲ್ಲಿರುವ ಒಂದೊಂದು ತಂತು(ನೂಲು)ವಿಗೆ ಭೇದವೆಂದರ್ಥ. (ಎಲ್ಲ ತಂತುಗಳು ಪಟ. ಒಂದು ತಂತುವು ಪಟವಲ್ಲ) ಆದರೂ ಈ ಭೇದವು ಕೇವಲ ಭೇದವಲ್ಲ ಅಭೇದ ಸಹಿತವಾದುದು. ಎಂದು ಹೇಳುವರು. ಸೋऽಪಿ ಭೇದಃ=ಆ ಭೇದವಾದರೂ ಅಭೇದಾತ್ ಪೃಥಕ್ ನ=ಅಭೇದವನ್ನು ಬಿಟ್ಟು ಇರುವದಿಲ್ಲ ಅಂದರೆ ಭೇದಾಭೇಧವೆಂದರ್ಥ.

'ಅಂಶಾಂಶಿನೋರಭೇದೋऽಯಂ ಅಂಶೇನ ತು ಭಿಧಾಭಿಧಾ । ಜಡಾನಾಂ ಅಂತತೋ ಭೇದಸಮುದಾಯೋ ನ ಚೋಭಯಮ್ । ಖಂಡಿತೇ ಭೇಧ ಐಕ್ಯಂ ಚ' ಮುಂತಾಗಿ ಹೇಳಿದೆ. ಅಭೇಧವಿದ್ದ ಮೇಲೆ ಇವು ಅವಯವಗಳು ಇದು ಅವಯವಿ ಎಂದು ವ್ಯವಹಾರ ಹೇಗೆ ಮತ್ತು ವಿರುದ್ಧವಾದ ಭೇದಾಭೇಧಗಳು ಒಂದೆಡೆ ಇರುವದು ಹೇಗೆ ಎಂಬ ಶಂಕೆಗೆ ಉತ್ತರ ಅವಯವ್ಯವಯವಾನಾಂ ಚ (ಉಪಾದಾನ ಉಪಾದೇಯಗಳಿಗೆ) ಕಾರ್ಯಕಾರಣ ವಸ್ತೂನಾಂ=ನಿಮಿತ್ತ ಕಾರಣ ಕಾರ್ಯಗಳಿಗೂ ಸರ್ವೋತ್ತಮನಾದ ಶ್ರೀಮನ್ನಾರಾಯಣನೇ ನಿಯಾಮಕನು. ಆದ್ದರಿಂದ ಕಾರ್ಯಕಾರಣಪರಂಪರಾ ಅನವಸ್ಥೆ ಇಲ್ಲ ಎಂದೂ ಭಾವ. ಇದರಿಂದ ಶ್ರೀಹರಿಯ ಸಾಮರ್ಥ್ಯದಿಂದ ವಿರುದ್ಧವಾದ ಭೇದಾಭೇದಗಳು ಮೇಲೆ ಉಪಪಾದಿಸಿದಂತೆ ಒಂದೇ ಸ್ಥಳದಲ್ಲಿ ಸೇರುವವು. ಅತ್ಯಂತ ಅಭೇದ ಇರುವಲ್ಲಿ ಭೇದ ಸ್ಥಳದಲ್ಲಿ ಭೇದ ಪ್ರತಿನಿಧಿಯ ವಿಶೇಷವನ್ನು ತಿಳಿಯಬೇಕು.

**ವಿಶೇಷ-** ಯಾವದ್ರವ್ಯಭಾವಿ ಅವಯವಗಳಿಗೆ ಅವಯವಿಯಿಂದ ಅಭೇದವಿದ್ದಂತೆ ಅಯಾವದ್ರವ್ಯಭಾವಿಯಾದ ಅವಯವಗಳಿಗೆ ಅವಯವಿಯಿಂದ ಅಭೇದವು

ಇಲ್ಲವೆಂದು ಹೇಳುವರು.(ಅವಯವಿ ಇರುವವರೆಗೆ ಇರುವ ಅವಯವಕ್ಕೆ ಯಾವದ್ರವ್ಯಭಾವಿಯನ್ನುವರು) ಅವಯವಿ ಇರುವಾಗಲೇ ನಾಶವಾಗುವದಕ್ಕೆ ಅಯಾವದ್ರವ್ಯಭಾವಿ ಎನ್ನುವರು.)

**ಯತ್ಸಾಮಾನ್ಯವಿಶೇಷಾಭ್ಯಾಮುಪಲಭ್ಯೇತ ಸ ಭ್ರಮಃ ।**
**ಅನ್ಯೋನ್ಯಾಪಾಶ್ರಯಾತ್ ಸರ್ವಮಾದ್ಯಂತ ವದ ವಸ್ತು ಚ ॥ ೨೮ ॥**

ಯತ್=ಯಾವದು ಸಾಮಾನ್ಯವಿಶೇಷಾಭ್ಯಾಂ=ಯಾವದ್ದ್ರವ್ಯಭಾವಿಯಾದದ್ದು ಅಯಾವಿದ್ರವ್ಯಭಾವಿಯಾದದ್ದು ಇವುಗಳಿಂದ ಉಪಲಭ್ಯೇತ=ಅಯಾವ ದ್ರವ್ಯಭಾವಿಯಾದ ಅವಯವದಿಂದ ಅವಯವಿಯು ಅಭಿನ್ನ ಎಂದು ತಿಳಿಯಲ್ಪಡುವದು ಸಃ=ಅದು ಬ್ರಮಃ=ಭ್ರಮವು. ಏಕೆಂದರೆ ಅನ್ಯೋನ್ಯಾಪಾಶ್ರಯಾತ್ ಒಂದನ್ನು ಬಿಟ್ಟು ಇನ್ನೊಂದು ಹೋಗುವದರಿಂದ ಅಭೇದವು ಇರುವದಿಲ್ಲ ಕಾರಣ ಆ ರೀತಿ ತಿಳಿಯುವದು ಭ್ರಮ. ಸರ್ವಂ ಆದ್ಯಂತವತ್=ದ್ರವ್ಯವಿರುವಾಗಲೇ ಉತ್ಪತ್ತಿನಾಶವುಳ್ಳ ಧರ್ಮ ಅಥವಾ ಅವಯವಗಳೆಲ್ಲವು ಅವಸ್ತು ಅವಯವಿಯಿಂದ ಭಿನ್ನವು. ಅಥವಾ ಅನ್ಯೋನ್ಯಾಪಾಶ್ರಯಾತ್=ಯಾವದ್ರವ್ಯಭಾವಿಯಾದ ಸರ್ವಮಾದ್ಯಂತವತ್=ಅಪೇಕ್ಷೆಯಿಂದ ಇದ್ದದ್ದಕ್ಕೆ ಇದ್ದಂತೆ ಅವಿಶ್ಲೇಷಾತ್=ವಿಶೇಷ ಸಂಬಂಧವಿಲ್ಲದಿರುವದರಿಂದ ಸರ್ವಂ=ಯಾವದ್ರವ್ಯಭಾವಿಯಿಂದ ಭಿನ್ನವಾದ ಅಯಾವ ದ್ರವ್ಯಭಾವಿಯಾದುದು ಆದ್ಯಂತವತ್ ಉತ್ಪತ್ತಿನಾಶವಿರುವದು ಕಾರಣ ಆ ವಸ್ತು ಅವಯವಿಯಿಂದ ಅಭಿನ್ನವಲ್ಲ (ವಿಜಯಧ್ವಜರು).

ಹನುಮದ್ ಭೀಮಮಧ್ವರೆಂಬ ಅಂಶಗಳಿಗೆ ಸಾಮಾನ್ಯ ವಿಶೇಷ ಶಕ್ತಿಯು ಕಂಡುಬರುವದರಿಂದ ಅಂಶಿಯಾದ ವಾಯುದೇವರಿಂದ ಅಭೇದ ಹೇಗೆ ಯುಕ್ತವಾಗುವದು. (ಎಂದು ಪೂರ್ವಾರ್ಧ ಶಂಕಾಪರ.) ಉತ್ತರ ಅನ್ಯೋನ್ಯಾ-ಪಾಶ್ರಯಾತ್=ಪರಸ್ಪರ ಅಭೇಧ ಹೇಳುವ ಪ್ರಮಾಣ ಇರುವುದರಿಂದ ಅಸುರ ಜನಮೋಹನಕ್ಕಾಗಿ ಅಧಿಕೃತರಾದ್ದರಿಂದ ಆದ್ಯಂತವತ್ವಾತ್ ನ್ಯೂನಾಧಿಕ್ಯೇ ಉತ್ಪತ್ತಿನಾಶವಿದ್ದುದರಿಂದ ಅವಸ್ತು ಅದು ಇಲ್ಲದಿರುವದೇ ಎಂದು ಭಾವ.

*ಏಕ ಏವ ನಿಯಂತಾ ಎಂದು ದುರ್ಘಟಾಭೇದ ಘಟಕನು ಮತ್ತು ಅಭೇದಜ್ಞಾನ ಜನಕನು ಶ್ರೀಹರಿಯೆಂದು ಹೇಳಿದಂತೆ ಪದಾರ್ಥಗಳಲ್ಲಿರುವ ಭೇದವನ್ನು ತಿಳಿಸುವವನೂ ಅವನೇ ಅವನಿಲ್ಲದೆ ಅನಂತ ಪದಾರ್ಥ ಸ್ವರೂಪ ಭೇದವೂ ತಿಳಿಯಲಾರದು ಎಂದು ಹೇಳುವರು.*

**ವಿಕಾರಃ ಖ್ಯಾಯಮಾನೋऽಪಿ ಪ್ರತ್ಯಗಾತ್ಮಾನಮಂತರಾ ।**
**ನ ನಿರೂಪ್ಯೋऽಸ್ತ್ಯಣುರಪಿ ಸ್ಯಾಚ್ಚೇತ್ ಸ ಭ್ರಮ ಆತ್ಮನಃ ॥ ೨೯ ॥**

ವಿಕಾರಃ=ಭೇದವು ಪ್ರತಗಾತ್ಮಾನಂ=ಸರ್ವಸಾಕ್ಷಿಯಾದ ಭಗವಂತನಿಲ್ಲದೆ ಅಣುರಪಿ=ಸ್ವಲ್ಪವೂ ನ ನಿರೂಪ್ಯಃ=ತಿಳಿಯಲು ಸಾಧ್ಯವಿಲ್ಲ(ಅವನೊಬ್ಬನೇ ತಿಳಿಯಲು ಸಮರ್ಥನು.) ಹಾಗಾದರೆ ಅದು ಇಲ್ಲವೇ ಎಂದರೆ ಖ್ಯಾಯಮಾನಃ=ಪ್ರಮಾಣದಿಂದ ತಿಳಿಯುತ್ತದೆ. ಆದ ಕಾರಣ ಇಲ್ಲವೆಂದು ಹೇಳಲಾಗುವದಿಲ್ಲ. ಆತ್ಮನಃ=ಜೀವನಿಗೆ ಸಃ=ವಿಕಾರವು ಸ್ಯಾಚ್ಚೇತ್=ತಿಳಿಯಲ್ಪಟ್ಟಿದೆ ಎಂದು ತಿಳಿದಿದ್ದಾದರೆ ಆ ತಿಳುವಳಿಕೆಯು ಭ್ರಮಃ=ಭ್ರಾಂತಿಯೆಂದರ್ಥ.

**ವಿಶೇಷ-** ಪದಾರ್ಥಗಳು ಅನಂತವಾದುದರಿಂದ ಪದಾರ್ಥ ಸ್ವರೂಪ ಭೇದ ತಿಳಿಯಬೇಕಾದರೆ ಅನಂತಪದಾರ್ಥ ಜ್ಞಾನ ಮಾಡಿಕೊಳ್ಳಲು ಶ್ರೀಹರಿಯೇ ಸಮರ್ಥನು ಜೀವರಲ್ಲ ಎಂದು ಭಾವ.

**ನಹಿ ಸತ್ಯಸ್ಯ ನಾನಾತ್ವಮವಿದ್ವಾನ್ ಯದಿ ಮನ್ಯತೇ ।**
**ನಾನಾತ್ವಂ ಛಿದ್ರಯೋರ್ಯದ್ವಜ್ಜ್ಯೋತಿಷೋರ್ವಾತಯೋರಪಿ ॥ ೩೦ ॥**

ಸತ್ಯಸ್ಯ=ಪರಮಾತ್ಮನ ನಾನಾತ್ವಂ=ರೂಪಗಳಿಗೆ ಭೇದವು ನಹಿ=ಇರುವದಿಲ್ಲ 'ಓಂ ನ ಸ್ಥಾನತೋऽಪಿ ಪರಸ್ಯೋಭಯಲಿಂಗಂ ಸರ್ವತ್ರ ಹಿ ಓಂ' ಎಂದು ಸ್ಥಾನಭೇದ ನಿಮಿತ್ತ ಭೇದವಿಲ್ಲವೆಂದು ಹೇಳಿದೆ. ಯದಿ ಮನ್ಯತೇ=ಯಾವನಾದರೂ ರೂಪಗಳಿಗೆ ಭೇದವನ್ನು ತಿಳಿದರೆ ಅವನು ಅವಿದ್ವಾನ್=ಅಜ್ಞಾನಿಯೆಂದರ್ಥ. ಸತ್ಯಸ್ಯ=ಯಥಾರ್ಥವಾದ ಜಗತ್ತಿಗೆ ದೇವತೆಗಳಿಗೆ ಸತ್ಯಸ್ಯ ಚ ಸಾಕಾಶಾತ್ ನಾನಾತ್ವಂ=ಸತ್ಯವಾದ ಬೇರೆ ಪದಾರ್ಥದಿಂದ ಭೇದವನ್ನು ಯದಿ ಮನ್ಯತೇ=ತಿಳಿದರೆ ಸಃ=ಅವನು ಅವಿದ್ವಾನ್ ನಹಿ=ಅವನು ಅಜ್ಞಾನಿಯಲ್ಲ, ಜ್ಞಾನಿಯೇ ಹೀಗೂ ಅರ್ಥ. ಇದರಂತೆ ಉತ್ತರಾರ್ಧದಲ್ಲಿಯೂ ಆವೃತ್ತಿ ಮಾಡಿ ಅನ್ವಯ ತಿಳಿಯಬೇಕು.

ಹೊರಗಿನ ಮಹಾಕಾಶ-ಘಟಾಕಾಶಾದಿಗಳಲ್ಲಿ ಇರುವ ಅವ್ಯಾಕೃತಾಕಾಶಗಳಿಗೆ ಭೇದವಿಲ್ಲ, ಮಹಾಕಾಶದಿಂದ ಘಟರೂಪವಾದ(ತದಿತರ)ಆದರಿಂದ ಭಿನ್ನವಾದ ಭೂತಾಕಾಶಗಳಿಗೆ ಭೇದವಿದೆಯೋ ಇಲ್ಲ. ಅಧಿದೈವ ಅಧ್ಯಾತ್ಮ ಸಂಜ್ಞಕರಾದ ದೇವತೆಗಳಿಗೆ ಹಾಗು ಮೂಲರೂಪ-ಸಾಕ್ಷಾದ್ರೂಪಗಳಿಗೆ ಅಭೇದ ಬೇರೆರೂಪಗಳಿಗೆ ಭೇದ ಹೇಗೋ ಹಾಗೆ ಎಂದರ್ಥ. ಧಾರ್ಢ್ಯಕ್ಕಾಗಿ ಅನೇಕ ದೃಷ್ಟಾಂತ ಕೊಟ್ಟಿರುವರು.

ಮೇಲಿನ ಶ್ಲೋಕದಲ್ಲಿ ಛಿದ್ರಯೋಃ ಎಂದು ಆಕಾಶಕ್ಕೆ ದ್ವಿತ್ವ ಹೇಳುವದು ಅಸಂಗತ ಎಂದು ಕಾಣುವದು. ಕಾರಣ ಆಕಾಶಕ್ಕೆ (ನಾಲ್ಕು ಸಂಖ್ಯೆಯನ್ನು) ಚತುಷ್ಟ್ವವನ್ನು ಉಪಪಾದಿಸುತ್ತ ಪ್ರಮಾಣ ಉದಾಹರಿಸಿ ದೃಷ್ಟಾಂತದಾರ್ಷ್ಟಾಂತಿಕಗಳಲ್ಲಿ ಭಿನ್ನ ಯಾವವು ಅಭಿನ್ನ ಯಾವವು ಎಂದು ತಿಳಿಸುವರು.

'ಮಹಾಕಾಶೋ ಬಹಿಸ್ಥಶ್ಚ ಘಟಾದ್ಯಂತಸ್ಥ ಏವ ಚ।
ದ್ವಿಧಾ ಸಮುದಿತೋಽನ್ಯೌ ಚ ದ್ವಾವಾಕಾಶೌ ಪ್ರಕೀರ್ತಿತೌ ।।
ಘಟರೂಪಸ್ತದನ್ಯಶ್ಚ ಮಹಾಕಾಶಾತ್ ಪರೋ ಲಘುಃ ।
ಮಹಾಕಾಶವದೇವಾತ್ರ ಪರಮಾತ್ಮಾ ಸನಾತನಃ ।।
ಘಟಾಂತಸ್ಥಮಹಾಕಾಶಪ್ರತಿಮೋಽಂತರ್ಗತೋ ಹರಿಃ ।
ಘಟಸ್ಥಾಂತರ್ಗತಾಕಾಶೋ ಮಹಾಕಾಶಾತ್ ಪರೋ ಮತಃ ।।
ತದ್ವದ್ದೇವಾದಯಃ ಸರ್ವೇ ಜೀವಾ ಮುಕ್ತ್ಯುಪಯೋಗಿನಃ ।
ತಮೋಗಾಶ್ಚೈವ ಯೇ ಸರ್ವೇ ಘಟರೂಪ ಖವನ್ನರಾಃ ।। ಇತಿ ತತ್ತ್ವಸಂಹಿತಾಯಾಂ"

ಅವ್ಯಾಕೃತಾಕಾಶವು ಘಟದ ಹೊರಗೂ ಇದೆ ಒಳಗೂ ಇದೆ. ಹೀಗಿದ್ದರೂ ಒಳಗೆ ಹೊರಗೆ ಇರುವ ಅವ್ಯಾಕೃತಾಕಾಶಕ್ಕೆ ಹೇಗೆ ಭೇದವಿಲ್ಲವೋ ಹಾಗೆಯೇ ಬಾಹ್ಯ ಭಗವದ್ರೂಪಕ್ಕೂ ಅಂತರ್ನಿಯಾಮಕ ಭಗವದ್ರೂಪಕ್ಕೂ ಭೇದವಿಲ್ಲ. ಮಹಾಕಾಶದಿಂದ ಭಿನ್ನವಾದ ಹಾಗೆಯೇ ಚೇತನಾಚೇತನಾತ್ಮಕ ಜಗತ್ತು ಪರಮಾತ್ಮನಿಂದ ಅತ್ಯಂತ ಭಿನ್ನವು. ಪರಮಾತ್ಮನು ಅವ್ಯಾಕೃತಾಕಾಶದಂತೆ ಪುರಾತನನು(ಸನಾತನಃ) ತಿಳಿಸಿಕೊಡುವ ವೇದ ಸಹಿತನು. ಘಟದೊಳಗಿನ ಅವ್ಯಾಕೃತಾಕಾಶ ಸದೃಶನು. ಘಟದೊಳಗಿನ ಭೂತಾಕಾಶವು ಮಹಾಕಾಶದಿಂದ ಬೇರೆ. ಮುಕ್ತಿಯೋಗ್ಯರಾದ ದೇವತೆಗಳೇ ಮೊದಲಾದವರು ಭೂತಾಕಾಶದಂತೆ ತಾಮಸರೂ ಮಧ್ಯಮರೂ ಇವರೆಲ್ಲರೂ ಭೂತಾಕಾಶವೇ ಉಪಾದಾನವಾಗಿವುಳ್ಳ ಘಟಕ್ಕೆ ಸದೃಶರು. ಹೀಗೆ ದೇಹವು ಮೃತವಾಗಲು ದೇಹಾಂತರ್ಗತ ಬ್ರಹ್ಮನು ಹೊರಗಿರುವ ಪರಮಾತ್ಮನಿಂದ ಐಕ್ಯ ಹೊಂದುವನು. ಹೇಗೆ ಘಟದೊಳಗಿನ ಭೂತಾಕಾಶವು ಮಹಾಕಾಶದಿಂದ ಭಿನ್ನವಾಗಿ ಮಹಾಕಾಶದಿಂದ ಯುಕ್ತವಾಗುವದೋ ಹಾಗೆಯೇ ಜೀವನು ಬ್ರಹ್ಮನಿಂದ ಭಿನ್ನವಾಗಿ ಪರಬ್ರಹ್ಮನನ್ನು ಹೊಂದುವನು. ಘಟಾಕಾಶವು ಭೂತಾಕಾಶ ಮಹಾಕಾಶಗಳಿಗಿಂತ ಅತಿನೀಚವೋ ಹಾಗೆ ತಾಮಸರು ಮಧ್ಯಮರು ದೇವತೆಗಳಿಂದ ಅತಿ ನೀಚರು ತಮ್ಮ ತಮ್ಮ ಸಂಗತಿಯನ್ನು ಹೊಂದುವರು ಎಂದು ತತ್ತ್ವ ಸಂಹಿತೆಯಲ್ಲಿದೆ.

ಇಲ್ಲಿ 'ಜ್ಯೋತಿಷಃ ವಾ' ಎಂದು ಜ್ಯೋತಿಗಳ ದೃಷ್ಟಾಂತ ಕೊಟ್ಟಿರುವರು. ಇವು ನಾಲ್ಕು ವಿಧ ಹೇಗೆ ಎಂಬುದನ್ನು 'ಓಂ ಅನುಜ್ಞಾಪರಿಹಾರೌ ದೇಹಸಂಬಂಧಾ-ಜ್ಜ್ಯೋತಿರಾದಿವತ್ ಓಂ' ಎಂಬ ಸೂತ್ರಭಾಷ್ಯದಲ್ಲಿ ಹೇಳಿದ ಪ್ರಮಾಣದಿಂದಲೂ ಮತ್ತು 'ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ' ಎಂಬ ಸೂತ್ರದ ಭಾಷ್ಯದಿಂದಲೂ ತಿಳಿಯಬಹುದು. ಪರಮಾತ್ಮನ ಅಂಶವೆಂದು ಜೀವರನ್ನು ಮತ್ಸ್ಯಾದಿಗಳನ್ನೂ ಕರೆಯುತ್ತಾರೆ. ಆದರೆ ಎರಡು ಒಂದೇ ವಿಧವಲ್ಲ ಜೀವರು ಭಿನ್ನಾಂಶರು. ಮತ್ಸ್ಯಾದಿಗಳು ಅಭಿನ್ನವಾದ ಸ್ವರೂಪಾಂಶಗಳು. ಎಂದು ತಿಳಿಸಿ ಜ್ಯೋತಿರಾದಿವತ್ ಎಂದು ದೃಷ್ಟಾಂತವನ್ನು ಹೇಳಿದ್ದಾರೆ. ಸೂರ್ಯಮಂಡಲಾಭಿಮಾನಿ-ಯಾದ ಸೂರ್ಯನು ಮತ್ತು ಅವನ ಅಂಶ ಎನಿಸಿಕೊಳ್ಳುವ ಪ್ರಕಾಶವು ಅಂದರೆ ಪ್ರಕಾಶಾಭಿಮಾನಿಯೂ ಒಬ್ಬನೇ. ಆದರೆ ಚಕ್ಷುರ್ಗೋಲಕಕ್ಕೆ ಸೂರ್ಯಮಂಡಲ ಸಾಮ್ಯ ಹೇಳಿ ಅದರ ಅಭಿಮಾನಿಯಾದ ಅಪಭ್ರಷ್ಟ ದೇವತೆಗೂ ಸೂರ್ಯನ ಅಂಶವೆಂದು ಹೇಳಿದರೂ ಇವರಿಗೆ ಅಭೇದವಿಲ್ಲ. ಗೋಲಕಾಭಿಮಾನಿಗೆ ಅಧೀನತೆಯುಂಟು ದೇಹ ಸಂಬಂಧ ನಿಮಿತ್ತ ದೋಷ ಉಂಟು. ಕಾರಣ ಈ ದೇವತೆ ಹಾಗು ಸೂರ್ಯ ಹೇಗೆ ಭಿನ್ನರೋ ಹಾಗೆ ಜೀವ ಪರಮಾತ್ಮರು ಭಿನ್ನರು. ಸಮುದ್ರಾಭಿಮಾನಿ ವರುಣನು ಶ್ಲೇಷ್ಮಾದಿಗಳ ಅಭಿಮಾನಿ ಎನಿಸಿಕೊಂಡವನು ಭಿನ್ನ ಹೇಗೋ ಹಾಗೆ. ಇನ್ನು ಪ್ರಾಣಾಪಾನಾದಿ ಪಂಚರೂಪಗಳು ಮುಖ್ಯಪ್ರಾಣ ದೇವರ ಸ್ವರೂಪವಾದವುಗಳು ಇವೆ. ಮುಖ್ಯಪ್ರಾಣನಿಂದ ಭಿನ್ನವಾದ ದಾಸಪ್ರಾಣ ಎಂಬ ಹೆಸರಿನ ಮತ್ತೆ ಐದು ರೂಪಗಳು ಬೇರೆ ಇವೆ. ಆ ದಾಸ ಪ್ರಾಣಗಳು ಮುಖ್ಯಪ್ರಾಣನಿಂದ ಭಿನ್ನ ಹೇಗೋ ಹಾಗೆ ಎಂದು ತಿಳಿಯಬೇಕು. ಮನಸ್ಸು ಹೇಗೆ ಮನಸ್ಸು ಬುದ್ಧಿ ಅಹಂಕಾರ, ಚಿತ್ತ, ಚೇತನ, ಎಂದು ಐದು ಇಂದ್ರಿಯಗಳು ಮತ್ತು ಅದರಿಂದ ಜನ್ಯವಾದ ವೃತ್ತಿಗಳು ಹೇಗೆ ಎರಡು ಪಂಚಕಗಳುಳ್ಳದ್ದೋ ಹಾಗೆ ದಾಸಪಂಚಕ ಸ್ವರೂಪಪಂಚಕಉಳ್ಳವರು ಪ್ರಾಣದೇವರಾದ್ದರಿಂದ ಶ್ರುತಿಗಳಿಗೆ ಪರಸ್ಪರ ವಿರೋಧವಿಲ್ಲವೆಂದು ಹೇಳಿದೆ.

*ಪರಮಾತ್ಮನಿಗೆ ಅನೇಕ ರೂಪಗಳನ್ನು ಹೇಳುವ ವೇದಗಳಿರುವಾಗ ಆಕಾಶದೃಷ್ಟಾಂತದಿಂದ ಐಕ್ಯ ಹೇಳಿದುದು ಹೇಗೆ ಎಂದರೆ ಅದಕ್ಕೆ ಕಾರಣವನ್ನು ತಿಳಿಸುವರು.*

**ಯಥಾ ಹಿರಣ್ಯಂ ಬಹುಧಾ ಸಮೀಯತೇ**
**ನೃಭಿಃ ಕ್ರಿಯಾಭಿರ್ವ್ಯವಹಾರವರ್ತ್ಮನಿ**

**ಏವಂ ವಚೋಭಿರ್ಭಗವಾನಧೋಕ್ಷಜೋ**
**ವ್ಯಾಖ್ಯಾಯತೇ ವೈದಿಕಲೌಕಿಕೈರ್ಜನೈಃ** ॥ ೩೧ ॥

ಯಥಾ=ಹೇಗೆ ಹಿರಣ್ಯಂ=ಚಿನ್ನವು ಬಹುಧಾ=ಅನೇಕ ರೀತಿಯಾಗಿ ವಂಕಿ ನಾಗಮುರಗಿ, ಗೋಟು, ಪಾಟಲಿ, ಬಿಲ್ವರ, ಗೋಪು, ಚೈನು, ಪೋಚೆ, ಅಸಲಿ, ಡಾಬು ಉಂಗುರ ಮುಂತಾಗಿ ಕ್ರಿಯಾಭಿಃ=ತನ್ನಿಂದ ಮಾಡಲ್ಪಡುವ ಕ್ರಿಯೆಗಳಿಂದ ವ್ಯವಹಾರವರ್ತ್ಮಸು=ವ್ಯವಹಾರ ಮಾರ್ಗದಲ್ಲಿ ಇದು ಕಿರೀಟವಲ್ಲ ಇದು ಕಡಗ ಮುಂತಾಗಿ ನೃಭಿಃ=ಜನರಿಂದ ಸಮೀಯತೇ=ತಿಳಿಯಲ್ಪಡುವದು. ಏವಂ=ಅದೇ ರೀತಿಯಾಗಿ ಭಗವಾನ್ ಅಧೋಕ್ಷಜಃ=ಷಡ್ಗುಣ ಪೂರ್ಣನಾದ ಶ್ರೀಹರಿಯು ಎಲ್ಲ ಧರ್ಮಗಳಿಂದ ಕೂಡಿದವನಾದರೂ ಆ ಆ ಇಂದ್ರಿಯ ದೋಷ ಸಂಬಂಧವಿಲ್ಲದವನು. ವೈದಿಕಲೌಕಿಕೈಃ ಜನೈಃ=ವೈದಿಕ ಲೌಕಿಕ ಜನರಿಂದ ವ್ಯಾಖ್ಯಾಯತೇ=ಮನುಷ್ಯ, ವರಾಹ, ನರಸಿಂಹ, ಶುಕ್ಲ ಪೀತ, ಹ್ರಸ್ವ ಅಣು, ದೀರ್ಘ, ಮಹಾನ್, ವ್ಯಾಪಕ, ಅವ್ಯಾಪಕ, ಮುಂತಾಗಿ ವಚೋಭಿಃ=ಮಾತುಗಳಿಂದ ವ್ಯಾಖ್ಯಾಯತೇ=ಹೇಳಲ್ಪಡುವನು.

*ಶ್ರೀಹರಿಯ ಸ್ವರೂಪವನ್ನು ನಿರೂಪಿಸಿ ಜೀವನಿಗೆ ಸಂಸಾರ ಬರಲು ಕಾರಣವೇನು ಅದು ಹೋಗುವದು ಹೇಗೆ ಎಂಬದನ್ನು ಹೇಳುವರು.*

**ಯಥಾಘನೋಽರ್ಕಪ್ರಭವೋಽರ್ಕದರ್ಶಿತೋ**
**ಹ್ಯರ್ಕಾಂಶಭೂತಸ್ಯ ಚ ಚಕ್ಷುಷಸ್ತಮಃ ।**
**ಏವಂ ತ್ವಹಂ ಬ್ರಹ್ಮಗುಣಸ್ತದೀಕ್ಷಿತೋ**
**ಬ್ರಹ್ಮಾಂಶಕಸ್ಯಾತ್ಮನ ಆತ್ಮಬಂಧನಃ** ॥ ೩೨ ॥

ಯಥಾ=ಹೇಗೆ ಅರ್ಕಪ್ರಭವಃ=ಸೂರ್ಯನಿಂದ ಉತ್ಪನ್ನವಾಗುವ(ಭಾರತ ವನ ಪರ್ವ ಮೂರನೇ ಅಧ್ಯಾಯದಲ್ಲಿ ಧರ್ಮರಾಜನು ಮಾಡಿದ ಸೂರ್ಯನ ಪ್ರಸ್ತಾವದಲ್ಲಿ 'ತ್ವದ್ಧೀದಿತಿ ಸಮುತ್ಪನ್ನಾ ನಾನಾವರ್ಣಾಃ ಮಹಾಘನಾಃ' ಎಂದು ಸೂರ್ಯನಿಂದ ಮೋಡಗಳು ಜನಿಸುವವು ಎಂದು ಹೇಳಿದೆ. ಅಂದರೆ ಇಲ್ಲಿ ಅರ್ಕಶಬ್ದದಿಂದ ನೀರು ತೇಜಸ್ಸು ವಾಯು ಮೂರನ್ನೂ ಸ್ವೀಕರಿಸಬೇಕು ತೇಜ ಸಂಬಂಧದಿಂದ ಧೂಮವನ್ನು ತೆಗೆದುಕೊಳ್ಳಬೇಕು. ಅಂತು ಅರ್ಕ ಪ್ರಭವ ಎಂದರೆ ತೇಜಸ್ಸು ಹೊಗೆ, ನೀರು ಗಾಳಿಗಳಿಂದ ಉಂಟಾದ)ಘನಃ=ಮೋಡವು ಅರ್ಕದರ್ಶಿತಃ=ಸೂರ್ಯನಿಂದಲೇ ಕಾಣಿಸಿಕೊಳ್ಳುವದು. ಆದರೂ(ಸೂರ್ಯನಿದ್ದರೆ ಕಾಣುವದು ಇಲ್ಲವಾದರೆ ಇಲ್ಲ) ಅರ್ಕಾಂಶಭೂತಸ್ಯ=ಸೂರ್ಯನ ಅಂಶವಾದ ಚಕ್ಷುಷಃ ಚ=ಕಣ್ಣಿಗೆ ತಮಃ=

ಸೂರ್ಯನನ್ನು ನೋಡಲು ಪ್ರತಿಬಂಧಕವಾಗುವದು.(ಆದಿತ್ಯಃ ಚಕ್ಷುರ್ಭೂತ್ವಾ ಅಕ್ಷಿಣೀ ಪ್ರಾವಿಶತ್) ಏವಂ=ಅದೇ ರೀತಿಯಾಗಿ ಬ್ರಹ್ಮಗುಣಃ=ಬ್ರಹ್ಮನಿಂದ ಲಿಂಗಶರೀರವನ್ನು ಅನುಸ್ಯೂತವಾಗಿ ಮಾಡಿದ್ದರಿಂದ ಅವನಿಗಿಂತ ಅಮುಖ್ಯವಾದ ಅಹಂಕಾರವು ತದೀಕ್ಷಿತಃ=ಬ್ರಹ್ಮನಿಂದಲೇ ಪ್ರಕಾಶಿತವಾದದ್ದು ಬ್ರಹ್ಮಾಂಶಕಸ್ಯ=ಪರಬ್ರಹ್ಮನ ಭಿನ್ನಾಂಶನಾದ ಆತ್ಮನಃ=ಜೀವನಿಗೆ ಆತ್ಮಬಂಧನಃ=ಪರಮಾತ್ಮನ ಜ್ಞಾನ ಪ್ರತಿಬಂಧಕವಾಗುವದು. ಇಲ್ಲಿ ಬ್ರಹ್ಮಾಂಶ ಎಂದಿದ್ದರೆ ಮತ್ಸ್ಯಾದಿಗಳಂತೆ ಸ್ವರೂಪಾಂಶವೆಂದರ್ಥವಾದೀತು. ಕಾರಣ ಕಕಾರ ಸಹಿತವಾಗ ಬ್ರಹ್ಮಾಂಶಕಸ್ಯ ಎಂದಿದ್ದಾರೆ. ಆದರಿಂದ 'ಶರೀರ ರೂಪಕ ವಿನ್ಯಸ್ತ' ಎಂಬಲ್ಲಿ ಇರುವಂತೆ ಅಂಶವನ್ನು ಕುತ್ಸನ ಮಾಡುವದರಿಂದ(ಕ ಶಬ್ದದಿಂದ) ಭಿನ್ನವೆಂದು ತಿಳಿಸಿರುವರು. ದಗ್ಧಪಟಾಯ ಮಾನ ಲಿಂಗ ಶರೀರವುಳ್ಳ ಕಮಲಭವಾದಿ ಪರಶುಕ್ಲತ್ರಯರಿಗೆ ಅಹಂಕಾರವು ತನ್ನ ಕಾರ್ಯ ಮಾಡದಿರುವದರಿಂದ ನೀರಿಲ್ಲದ ಮೋಡ ಅವರಿಗೆ, ಉಳಿದವರಿಗೆ ನೀರು ತುಂಬಿದ ಮೋಡದಂತೆ ಎಂದು ತಿಳಿಯಬೇಕು.

**ಘನೋ ಯದಾಽರ್ಕಪ್ರಭಯಾ ವಿದೀರ್ಯತೇ**
**ಚಕ್ಷುಸ್ಸ್ವರೂಪಂ ರವಿಮೀಕ್ಷತೇ ತದಾ ।**
**ಯದಾಹ್ಯಹಂಕಾರ ಉಪಾಧಿರಾತ್ಮನೋ**
**ಜಿಜ್ಞಾಸಯಾ ನಶ್ಯತಿ ತರ್ಹ್ಯನುಸ್ಮರೇತ್ ॥ ೩೩ ॥**

**ಯದ್ಯೈವಮೇತೇನ ವಿವೇಕಹೇತಿನಾ**
**ಮಾಯಾ ಮಯಾಹಂಕರಣಾತ್ಮಬಂಧನಮ್ ।**
**ಛಿತ್ವಾಚ್ಯುತಾತ್ಮಾನುಭವೋಽವತಿಷ್ಠತೇ**
**ತಮಾಹುರಾತ್ಯಂತಿಕಮಂಗಸಂಪ್ಲವಮ್ ॥ ೩೪ ॥**

ಯದಾ=ಯಾವಾಗ ಅರ್ಕಪ್ರಭಯಾ=ತೀವ್ರವಾದ ಸೂರ್ಯನ ಪ್ರಕಾಶದಿಂದ ಘನಃ=ಮೋಡವು ವಿದೀರ್ಯತೇ=ನಾಶವಾಗುವದೋ ತದಾ=ಆಗ ಚಕ್ಷುಃ=ಸೂರ್ಯನ ಅಂಶವಾದ ಕಣ್ಣು ಸ್ವರೂಪಂ=ತನ್ನ ಬಿಂಬನಾದ ರವಿಂ=ಸೂರ್ಯನನ್ನು ಈಕ್ಷತೇ= ನೋಡುವದು ಹೇಗೋ ಹಾಗೆಯೇ ಯದಾ=ಯಾವಾಗ ಆತ್ಮನಃ=ಜೀವನಿಗೆ ಉಪಾಧಿಃ= ತನ್ನ ಸ್ವಭಾವಾಚ್ಛಾದಕವಾದ ಪರಮಾತ್ಮನ ದರ್ಶನ ಪ್ರತಿಬಂಧಕವಾದ ಅಹಂಕಾರಃ= ಅಹಂಕಾರವು ಆತ್ಮನಃ=ಜಿಜ್ಞಾಸಯಾ ಪರಮಾತ್ಮನ ಉಪಾಸನೆಯಿಂದ ನಶ್ಯತಿ= ನಾಶವಾಗುವದೋ ತರ್ಹಿ=ಆಗ ಪರಂ ಅನುಸ್ಮರೇತ್=ಪರಮಾತ್ಮನನ್ನು ಸ್ಮರಿಸುವನು ಹಿ='ಭಿದ್ಯತೇ ಹೃದಯಗ್ರಂಥಿಃ' ಮುಂತಾದ ಪ್ರಮಾಣಸಿದ್ಧ

ಅಸಂಪ್ರಜ್ಞಾತಸಮಾಧಿ ಎಂದು ವಿಜಯಧ್ವಜರು ಆತ್ಯಂತಿಕಪ್ರಲಯ ಲಕ್ಷಣ ಎಂದು ಸತ್ಯಧರ್ಮರು ಹೇಳುವರು.

ಯದಾ=ಯಾವಾಗ ಏವಂ=ಈ ರೀತಿಯಾಗಿ ಉದ್ಭೂತವಾದ ಏತೇನ=ಈ ವಿವೇಕ ಹೇತಿನಾ=ವಿವೇಕವೆಂಬ ನಿಶ್ಚಿತವಾದ ಆಯುಧದಿಂದ ಮಾಯಾ=ಮಾಯಾಹಂಕರಣಾತ್ಮ ಬಂಧನಂ=ಭಗವಂತನ ಇಚ್ಛೆಯಿಂದ ಬಂದ ಲಿಂಗಶರೀರಾಂತರ್ಗತ ಅಹಂಕಾರ-ದಿಂದುಂಟಾದ ಸಂಸಾರ ಕಾರಣವನ್ನು ಛಿತ್ವಾ=ಕತ್ತರಿಸಿ ಅಚ್ಯುತಾತ್ಮಾನುಭವಃ= ಅಚ್ಯುತನೆಂಬ ಪರಮಾತ್ಮನ ಜ್ಞಾನವುಳ್ಳವನಾಗಿ ಯಸ್ಮಿನ್=ಯಾವಾಗ ಅವತಿಷ್ಠತೇ= ಇರುವನೋ ತಂ=ಆ ಅವಸ್ಥೆಯನ್ನು ಆತ್ಯಂತಿಕಂ ಸಂಪ್ಲವಂ ಆಹುಃ=ಆತ್ಯಂತಿಕ ಪ್ರಲಯವೆಂದು ಹೇಳುವರು. ಆಹುಃ=ಎಂದು ಬಹುಸಂಮ್ಮತಿಯನ್ನು ತಿಳಿಸುವರು. 'ಬ್ರಾಹ್ಮೋ ನೈಮಿತ್ತಕಸ್ತೇಷಾಂ ಕಲ್ಪಾಂತೇ ಪ್ರತಿಸಂಚರಃ ಆತ್ಯಂತಿಕೋಽಪಿ ಮೋಕ್ಷಾಖ್ಯಃ ಪ್ರಾಕೃತೋ ದ್ವಿಪರಾರ್ಧಕಃ' ಎಂದು ವಿಷ್ಣುಪುರಾಣದಲ್ಲಿ ಆರನೇ ಅಧ್ಯಾಯದಲ್ಲಿ ಹೇಳಿದೆ. ಇಲ್ಲಿ ಉಪಕ್ರಮದಲ್ಲಿ ಲಯವೇ ಹೇಳಿದೆ. ಮುಂದೆಯೂ 'ನಿತ್ಯೋ ನೈಮಿತ್ತಕಶ್ಚೈವ ತಥಾ ಪ್ರಾಕೃತಿಕೋ ಲಯಃ । ಆತ್ಯಂತಿಕಶ್ಚ ಕಥಿತಃ ಮುಂತಾಗಿ ಹೇಳಿದೆ ಆದ್ದರಿಂದ ಅಸಂಪ್ರಜ್ಞಾತ ಸಮಾಧಿ ಲಕ್ಷಣ ಹೇಳುವರು ಎಂದು ಹೇಗೆ ಅವತಾರಿಕಾ ಪ್ರಾಚೀನರು ಇತ್ತಿರುವರೋ ನಮಗೆ ತಿಳಿಯದು ಎನ್ನುವರು ಶ್ರೀಸತ್ಯಧರ್ಮರು. ಮತ್ತೆ ಉತ್ಪತ್ತಿ ಆಗದಿರುವುದೇ ಆತ್ಯಂತಿಕ ಸಂಪ್ಲವ ಮುಕ್ತಿ ಎಂದರ್ಥ. ಉಪಾಧಿ ನಶ್ಯತಿ ಬಾಹ್ಯೋಪಾಧಿನಾಶ ಛಿತ್ವಾ ಎಂದು ಲಿಂಗಶರೀರ ಕಳೆದುಕೊಂಡು ಮುಂತಾದುದರ ಸ್ವಾರಸ್ಯಬರುವುದು.

ಇಲ್ಲಿ ವಿಜಯಧ್ವಜರು ಆತ್ಮಬಂಧನಂ ಛಿತ್ವಾ ಎಂದರೆ ಪರಮಾತ್ಮ ದರ್ಶನದಿಂದ ಅಸಂಪ್ರಜ್ಞಾತ ಸಮಾಧಿಸ್ಥನಾಗಿ ಲಿಂಗಶರೀರದ ಅಭಿಮಾನ ಪರಿತ್ಯಾಗ ಮಾಡಿರುವನು ಇದಕ್ಕೆ ಆತ್ಯಂತಿಕ ಪ್ರಲಯವೆನ್ನುವರು. ಅಸಂಪ್ರಜ್ಞಾತ ಸಮಾಧಿಗೆ ನಾಮಾಂತರವಿದು ಎಂದು ಬರೆದಿರುವರು.

**ನಿತ್ಯದಾ ಸರ್ವಭೂತಾನಾಂ ಬ್ರಹ್ಮಾದೀನಾಂ ಪರಂ ತಪ ।**
**ಉತ್ಪತ್ತಿಪ್ರಲಯಾವೇಕೇ ಸೂಕ್ಷ್ಮಜ್ಞಾಃ ಸಂಪ್ರಚಕ್ಷತೇ ॥ ೩೫ ॥**

ಹೇ ಪರಂತಪ=ಶತ್ರುಸಂತಾಪದಾಯಕನಾದ ರಾಜನೇ ಬ್ರಹ್ಮಾದೀನಾಂ ಸರ್ವಭೂತಾನಾಂ=ಬ್ರಹ್ಮದೇವರೇ ಮೊದಲಾದ ಎಲ್ಲ ಜೀವರಿಗೂ ಉತ್ಪತ್ತಿಪ್ರಲಯೌ=

ಉತ್ಪತ್ತಿನಾಶಗಳನ್ನು ಏಕೇ ಸೂಕ್ಷ್ಮಜ್ಞಾಃ=ಕ್ಷಣಕ್ಷಣದಲ್ಲಿ ಆಗುವ ವ್ಯತ್ಯಾಸವನ್ನು ಅರಿಯುವವರು ಸಂಪ್ರಚಕ್ಷತೇ=ಹೇಳುವರು. ನಿತ್ಯದಾ=ಪ್ರತಿದಿನದಲ್ಲಿಯೂ ಇಲ್ಲಿ ಸರ್ವಭೂತಾನಾಂ ಎಂದದ್ದರಿಂದಲೇ ಎಲ್ಲ ಸಂಗ್ರಹವಾಗುತ್ತಿರಲು ಮತ್ತೆ ಬ್ರಹ್ಮಾದೀನಾಂ ಎಂದದ್ದರಿಂದ ಅವರಲ್ಲಿರುವ ತರತಮಭಾವವನ್ನೂ ಮತ್ತು ಈ ಉತ್ಪತ್ತಿನಾಶಗಳು ರಮೆಗೂ ಇತರರಿಗೂ ಸಮನಾದುದಲ್ಲ ದುಃಖ ಸ್ಪೃಷ್ಟರಿಗೆ ಮಾತ್ರ ಎಂದೂ ಸೂಚಿಸಿರುವರು. ಪ್ರಸಿದ್ಧವಾದ ಉತ್ಪತ್ತಿನಾಶಗಳನ್ನು ಸ್ವೀಕರಿಸಬೇಕು. ಒಂದು ವೇಳೆ ಪರಾಧೀನವಿಶೇಷಾವಾಪ್ತಿ ಅತ್ಯಂತ ಸಾಮೀಪ್ಯರೂಪವಾದ ಉತ್ಪತ್ತಿನಾಶಗಳನ್ನು ತೆಗೆದುಕೊಳ್ಳುವದಾದರೆ ಆಗ ಬ್ರಹ್ಮ ಶಬ್ದವೇ ಲಕ್ಷ್ಮೀಗೂ ವಾಚಕವಾಗಿದೆ''ಮಮ ಯೋನಿರ್ಮದ್ಬ್ರಹ್ಮ' ಎಂದು ಗೀತೆಯಲ್ಲಿ ಹೇಳಿದ ಪ್ರಕಾರ ರಮೆಯಿಂದ ಸಹಿತವಾದ ಸರ್ವರನ್ನು 'ಅತ್ತಾ ಚರಾಚರಗ್ರಹಣಾತ್' ಎಂಬಂತೆ ವಿವೇಕ ಮಾಡಿಕೊಳ್ಳಬೇಕು.

*ಚೇತನರು ನಿರ್ವಿಕಾರರಾದುದರಿಂದ ಜನ್ಮಾದಿಗಳು ಉಪಪನ್ನವಾಗುವದಿಲ್ಲ ಕಾರಣ ನಿತ್ಯದಲ್ಲೂ ಜನ್ಮಾದಿಗಳನ್ನು ಹೇಳಿದುದು ಹೇಗೆ ಎಂದರೆ ಹೇಳುವರು.*

**ಕಾಲಸ್ರೋತೋ ಜವೇನಾಶು ಹ್ರಿಯಮಾಣಸ್ಯ ನಿತ್ಯದಾ ।**
**ಪರಿಮಾಣಾದ್ಯವಸ್ಥಾಸ್ತಾ ಜನ್ಮಪ್ರಲಯಹೇತವಃ ॥ ೩೬ ॥**

– ಕಾಲಸ್ರೂತೋಜವೇನ=ಕಾಲವೆಂಬ ನದಿಯ ವೇಗದಿಂದ ಆಶು ಹ್ರಿಯಮಾಣಸ್ಯ= ಶೀಘ್ರದಲ್ಲಿ ಹ್ರಾಸವನ್ನು ಹೊಂದುವ ದೇಹಕ್ಕೆ ತಾಃ ಪರಿಮಾಣಾದ್ಯಾಃ ಅವಸ್ಥಾಃ= ಪರಿಮಾಣಾದಿಗಳಲ್ಲಿ ವ್ಯತ್ಯಾಸ ವಾಗುವದೇ ಮೊದಲಾದ ಅವಸ್ಥೆಗಳು ಮತ್ತು ಅವರವರ ಯೋಗ್ಯಾತಾನುಸಾರವಾದ ಕರ್ಮಪರಿಪಾಕಗಳ ಜನ್ಮಪ್ರಲಯ ಹೇತವಃ= ಉತ್ಪತ್ತಿನಾಶಕ್ಕೆ ಕಾರಣವಾಗುವವು. ಎಲ್ಲವು ಪರಮಾತ್ಮನ ಅಧೀನವೆಂದು ಧ್ವನಿತವಾಗುವದು.

*ಇಲ್ಲಿ ಕಾಲವೆಂದರೆ ಲೋಕಸಿದ್ಧವಾದ ಕ್ಷಣ ಮುಂತಾದವುಗಳಲ್ಲ ಎಂದು ಹೇಳುವರು.*

**ಅನಾದ್ಯಂತವತಾನೇನ ಕಾಲೇನೇಶ್ವರಮೂರ್ತಿನಾ ।**
**ಅವಸ್ಥಾ ನೈವ ದೃಶ್ಯಂತೇ ವಿಯತಿ ಜ್ಯೋತಿಷಾಮಿವ ॥ ೩೭ ॥**

ಅನಾದ್ಯಂತವತಾ=ಕೊನೆಮೊದಲಿಲ್ಲದ ಈಶ್ವರಮೂರ್ತಿನಾ ಕಾಲೇನ=ಭಗವಂತನೆಂಬ ಕಾಲದಿಂದ ಅವಸ್ಥಾಃ=ಸೂಕ್ಷ್ಮವಾಗಿ ನಾಶವಾಗುವ ಅವಸ್ಥೆಗಳು ವಿಯತಿ=ಆಕಾಶದಲ್ಲಿ ಜ್ಯೋತಿಷಾಂ ಇವ=ನಕ್ಷತ್ರಗಳ ಅವಸ್ಥೆಗಳು ಜ್ಯೋತಿಷ್ಕರಲ್ಲದವರಿಂದ(ಜ್ಯೋತಿಷ್ಕರಿಂದಲೂ)

ಬೇಗನೇ ನೈವ ದೃಶ್ಯಂತೇ=ಯಥಾ ಹೇಗೆ ಕಾಣುವದಿಲ್ಲವೋ ಹಾಗೆಯೇ ಶರೀರ ವಿಕಾರಗಳು ಕಾಣುವದಿಲ್ಲ.

ಕಾರಣ ಅದೇ ಶರೀರವೆಂದು ಪ್ರತ್ಯಭಿಜ್ಞೆ ಬರುವುದು.(ಸಾದೃಶ್ಯದಿಂದ)ಈ ಮಾತನ್ನೇ ೧೧ ನೇ ಸ್ಕಂಧದಲ್ಲಿ 'ನಿತ್ಯದಾ ಹ್ಯಂಗ ಭೂತಾನಿ ಭವಂತಿ ನ ಭವಂತಿ ಚ । ಕಾಲೇನಾಲಕ್ಷ್ಯವೇಗೇನ ಸೂಕ್ಷ್ಮತ್ವಾತ್ ತನ್ನ ದೃಶ್ಯತೇ । ಯಥಾರ್ಚಿಷಾಂ ಸ್ರೋತಸಾಂ ಚ ಫಲಾನಾಂ ವಾ ವನಸ್ಪತೇಃ । ತಥೈವ ಸರ್ವಭೂತಾನಾಂ ವಯೋವಸ್ಥಾಶ್ಚ ತತ್ಕೃತಾಃ । ಸೋಽಯಂ ದೀಪೋಽರ್ಚಿಷಾಂ ಯದ್ವತ್ ಸ್ರೋತಸಾಂ ತದಿದಂ ಜಲಮ್ । ಸೋಽಯಂ ಪುಮಾನ್ ಇತಿ ನೃಣಾಂ ಮೃಷಾಗೀರ್ಧೀಃ ಮೃಷಾ' ಇತಿ ಎಂದು ಹೇಳಿದೆ. । (ವಿಜಯಧ್ವಜರು).

ಆಕಾಶದಲ್ಲಿ ನಕ್ಷತ್ರಗಳ ಸ್ಥಿತಿಗೆ ಹೇಗೆ ನಾಶವಿಲ್ಲವೋ ಹಾಗೆ ಚೇತನನಿಗೆ ನಾಶವಿಲ್ಲ ಎಂದು ಬರದಿರುವರು.

*ಪ್ರತ್ಯೇಕಿಸಿ ಹೇಳಿದ್ದನ್ನು ಒಂದು ಗೂಡಿಸಿ ಹೇಳುವರು.*

**ನಿತ್ಯೋ ನೈಮಿತ್ತಿಕಶ್ಚೈವ ತಥಾ ಪ್ರಾಕೃತಿಕೋ ಲಯಃ ।**
**ಆತ್ಯಂತಿಕಶ್ಚ ಕಥಿತಃ ಕಾಲಸ್ಯ ಗತಿರೀದೃಶೀ ॥ ೩೮ ॥**

ನಿತ್ಯಃ ಲಯಃ=ನಿತ್ಯ ಲಯವು, ನೈಮಿತ್ತಿಕಃ ಲಯಃ=ನೈಮಿತ್ತಿಕ ಲಯವು, ತಥಾ= ಮತ್ತು ಪ್ರಾಕೃತಿಕಃ ಲಯಃ=ಪ್ರಾಕೃತಿಕ ಲಯವು, ಆತ್ಯಂತಿಕಃ ಲಯಃ=ಆತ್ಯಂತಿಕ ಲಯವು ಕಥಿತಃ=ಮೇಲೆ ಹೇಳಿದಂತೆ ನಾಲ್ಕು ರೀತಿಯ ಲಯಗಳು ಹೇಳಲ್ಪಟ್ಟಿವೆ. ಕಾಲಸ್ಯ=ಮುಖ್ಯವಾಗಿ ಭಗವಂತನ ಮತ್ತು ಅಮುಖ್ಯವಾಗಿ ಪ್ರಸಿದ್ಧಕಾಲದ ಗತಿಃ=ಸ್ಥಿತಿಯು ಈದೃಶೀ=ತಿಳಿಯಲಸಾಧ್ಯವಾದುದು ಸುಲಭವಲ್ಲ.

**ವಿಶೇಷ-** ಪ್ರಾರಂಭ ಮಾಡಿದ ಪ್ರಕಾರ ನೈಮಿತ್ತಿಕವನ್ನು ಮುಂಚೆ ಹೇಳಬೇಕಿತ್ತು. ಆದರೂ ಉಳಿದ ಮೂರು ಅನ್ಯನಿರೂಪಣ ಸಾಪೇಕ್ಷವಾದ್ದರಿಂದ ನಿರಪೇಕ್ಷವಾದ ನಿತ್ಯವನ್ನು ಮೊದಲು ಹೇಳಿದ್ದು ಇಲ್ಲಿ ಚತುರ್ಯುಗ ಮುಂತಾಗಿ ನಿರೂಪಣ ಮಾಡುವ ಪದ್ಧತಿಯನ್ನು ಅನುಸರಿಸಿ ನೈಮಿತ್ತಿಕವನ್ನು ಮೊದಲು ಹೇಳಿದ್ದು. ಹಿಂದೆಯೇ ಹೇಳಿದ್ದರಿಂದ ನಿತ್ಯವು ಬುದ್ಧಿ ಸನ್ನಿಹಿತವಾದ್ದರಿಂದ ಮೊದಲು ಹೇಳಿದ್ದು ಎಂದೂ ತಿಳಿಯಬಹುದು. ಹೇಗೆ ಷಟ್ ಪ್ರಶ್ನದಲ್ಲಿ 'ಕಂಬಂಧೀ ಕಾತ್ಯಾಯನಃ ಉಪೇತ್ಯ ಪಪ್ರಚ್ಛ' ಎಂದು ಕೊನೆಯ ಪ್ರಶ್ನೆಗೆ ಉತ್ತರ ಪೂರ್ವದಲ್ಲಿ ಕೊಡುವದೇನಪೂರ್ವವಲ್ಲ.

ಮುಖ್ಯ ಪ್ರಮೇಯವನ್ನು ಉಪಸಂಹಾರ ಮಾಡುವರು

**ಏತಾಃ ಕುರುಶ್ರೇಷ್ಠ ಜಗದ್ವಿಧಾತುರ್ನಾರಾಯಣಸ್ಯಾಖಿಲಸತ್ವಧಾಮ್ನಃ ।**
**ಲೀಲಾ ಕಥಾಸ್ತೇ ಕಥಿತಾಃ ಸಮಾಸತಃ ಕಾರ್ತ್ಸ್ನ್ಯೇನ ನಾಜೋಽಪ್ಯಭಿಧಾತುಮೀಶಃ ॥**

ಹೇ ಕುರುಶ್ರೇಷ್ಠ=ಪರೀಕ್ಷಿತನೇ ಏತಾಃ 'ಯತ್ರೋದ್ಯತಕ್ಷಿತಿತಲೋದ್ಧರಣಾಯ ಬಿಭ್ರತ್ ಕ್ರೋಡೀಂ ತನುಂ ಸಕಲಯಜ್ಞಮಯೀಂ' ಎಂದಾರಂಭ ಮಾಡಿ ಇಲ್ಲಿಯವರೆಗೆ ಏನು ಹೇಳಿದೆನೋ ಆ ಜಗದ್ವಿಧಾತುಃ=ಸೃಷ್ಟಿಕರ್ತೃವಾದ ಅಖಿಲಸತ್ವಧಾಮ್ನಃ=ಸಂಪೂರ್ಣ ಬಲ ಜ್ಞಾನ ಸ್ವರೂಪನಾದ ನಾರಾಯಣಸ್ಯ=ಶ್ರೀಹರಿಯ ಲೀಲಾಕಥಾಃ=ಕ್ರೀಡಾಕಥೆಗಳು ತೇ=ನಿನಗೆ ಸಮಾಸತಃ ಕಥಿತಾಃ=ಸಂಕ್ಷೇಪವಾಗಿ ಹೇಳಲ್ಪಟ್ಟಿದೆ. ಅಜೋಽಪಿ= ಬ್ರಹ್ಮದೇವರೂ ಸಹ ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ಅಭಿಧಾತುಂ ಹೇಳಲು ನ ಈಶಃ=ಸಮರ್ಥರಲ್ಲ.

ಶ್ರೀಸತ್ಯಧರ್ಮರ ಪ್ರಕಾರ ವಿಶೇಷಾರ್ಥ

''ಈಶೇಶಕೋಶನಿವೇಶೇತಿ ಶಂಶೇದಿತಿನಾಶಾಸನೀಯಮಿತ್ಯಾಹ -**ಈತಿ** । ಈ ಲಕ್ಷ್ಮೀದೇವಿಯು ಈಶಕೋಶನಿವೇಶಾ ಇತಿ=ಈಶಕೋಟಿಯಲ್ಲಿ ಸೇರಿದವಳಾದ್ದರಿಂದ ಶಂಸೇತ್=ಸಂಪೂರ್ಣ ಹೇಳಬಹುದು ಇತಿ=ಎಂದು ನಾಶಾಸನೀಯಂ=ಆಶೆ ಪಡುವದು ಬೇಡ ಎಂದು ಹೇಳುವರು. ಈಶಾ ನ । ಅಸ್ಯ ಇಯಂ ಸ್ತ್ರೀ=ಈ ರಮೆಯೂ ಸಹ ಸಮರ್ಥಳಲ್ಲ.(ಈಶಃ ವಿಪರಿಣಾಮ ಮಾಡಿ ಈಶಾ ಎಂದು ಅನ್ವಯ ಮಾಡಿದೆ.) ಬಹಳ ಕಾಲ ಅದೇ ವ್ಯಾಪಾರ ಮಾಡಿದರೆ ಮರುದುರುಃ=ಮರುತ್ ಶ್ರೇಷ್ಠನಾದ ವಾಯುವಾಗಲಿ ಚತುರ್ಮುಖನಾಗಲಿ ಹೇಳಬಹುದಲ್ಲ ಎಂದರೆ ಹೇಳುವರು. ಶ್ರೇಷ್ಠಜಗದ್ವಿಧಾತುಃ ಎಂದು. ಶ್ರೇಷ್ಠಂ ಚತತ್ ಜಗತ್ ಚ ಶ್ರೇಷ್ಠ ಜಗತ್ ಶ್ರೇಷ್ಠಜಗತಾ ಸಹಿತಃ ವಿಧಾತಾ । ತಸ್ಯ ಶ್ರೇಷ್ಠಜಗದ್ವಿಧಾತುಃ । (ಜಗತ್ ಶಬ್ದಕ್ಕೆ ವಾಯು ಎಂಬರ್ಥವಿರುವದರಿಂದ ಓಂ ಇಯದಾಮನನಾತ್ ಓಂ ಮರುತ್ ಅಥವಾ ಸರ್ವಜೀವಶ್ರೇಷ್ಠ(ಅಧಿಕಾರ್ಯುತ್ತಮನಾದ)ರಾದ ವಾಯುವಿನಿಂದ ಸಹಿತನಾದ ವಿಧಾತುಃ=ಬ್ರಹ್ಮನಿಗೂ ಈಶಸ್ಯ=ನಿಯಾಮಕನಾದ ನಾರಾಯಣನ ಎಂದು ಅನ್ವಯ. ಸಮಾಸತಃ(ಸಪ್ತಮ್ಯಾಸ್ತಸಿಲ್) ಸಮಾಸ್ಸು=ಅನೇಕ ವರ್ಷಗಳಲ್ಲಿ ಎಂದರ್ಥ.)ಸನ್ ಅಪಿ=ಇದ್ದವನಾದರೂ ಕಾರ್ತ್ಸ್ನ್ಯೇನ=ಸಂಪೂರ್ಣವಾಗಿ ಅಜಃ=ಜ್ಞಾನವು ನಃ=ಇಲ್ಲ 'ಅಜಗತೌ' ಎಂದು ಧಾತು. ಮತಿಂ ಕುರು=ಭಗವಂತನಲ್ಲಿ ಬುದ್ಧಿಯನ್ನು ಇಡು. (ಬುದ್ಧಿಯನ್ನು ಭಗವದ್ವಿಷಯಕಗೊಳಿಸು) ಅಥವಾ ಕುರುಶ್ರೇಷ್ಠಃ=ಭೀಮಸೇನನೆಂಬ

ಜಗತ್=ವಾಯುವಿನಿಂದ ಸಹಿತನಾದ ವಿಧಾತುಃ=ಚತುರ್ಮುಖನಿಗೂ ಸಂಪೂರ್ಣ ಹೇಳುವ ಸಾಮರ್ಥ್ಯವಿಲ್ಲವೆಂದು ಭಾವ.

*ಕಥಾ ಕಥನದ ಪ್ರಯೋಜನ ಹೇಳುವರು.*

**ಸಂಸಾರಸಿಂಧುಮತಿದುಸ್ತರಮುತ್ತಿತೀರ್ಷೋ-**
**ರ್ನಾನ್ಯಃ ಪ್ಲವೋ ಭಗವತಃ ಪುರುಷೋತ್ತಮಸ್ಯ ।**
**ಲೀಲಾಕಥಾ ರಸನಿಷೇವಣಮಂತರೇಣ**
**ಪುಂಸೋ ಭವೇದ್ ವಿವಿಧದುಃಖದವಾರ್ದಿತಸ್ಯ ॥ ೪೦ ॥**

ವಿವಿಧದುಃಖದವಾರ್ದಿತಸ್ಯ=ನಾನಾ ರೀತಿಯ ದುಃಖವೆಂಬ ಕಾಡುಗಿಚ್ಚಿನಿಂದ ಬೆಂದು ಬಳಲಿದ ಆದ್ದರಿಂದಲೇ ಅತಿದುಸ್ತರಂ=ಅತ್ಯಂತ ಕಷ್ಟದಿಂದ ದಾಟಬಹುದಾದ ಸಂಸಾರಸಿಂಧುಂ=ಸಂಸಾರವೆಂಬ ಕಡಲನ್ನು ಉತ್ತಿತೀರ್ಷೋಃ=ದಾಟಲಿಚ್ಛಿಸುವ ಪುಂಸಃ=ಅಧಿಕಾರಿಗೆ ಭಗವತಃ=ಷಡ್ಗುಣೈಶ್ವರ್ಯ ಸಂಪನ್ನನಾದ ಪುರುಷೋತ್ತಮಸ್ಯ= ಕ್ಷರಾಕ್ಷರ ಪುರುಷರಿಗಿಂತ ಉತ್ತಮನಾದ ಶ್ರೀಹರಿಯ ಲೀಲಾಕಥಾರಸನಿಷೇವಣ-ಮಂತರೇಣ=ಚರಿತ್ರಯುಕ್ತವಾದ ಕಥಾಮೃತ ಸೇವನೆಯನ್ನು ಬಿಟ್ಟು ಅನ್ಯಃ=ಬೇರೊಂದು ಪ್ಲವಃ=ನೌಕೆಯು ನ ಭವೇತ್=ಆಗಲಾರದು.

*ಆಪ್ತಿಮೂಲಕವಾದುದರಿಂದ ಭಾಗವತ ಸಂಹಿತೆಯು ವಿಶ್ವಾಸನೀಯವೆಂದು ಹೇಳುವರು.*

**ಪುರಾಣಸಂಹಿತಾಮೇತಾಂ ಋಷಿರ್ನಾರಾಯಣೋಽವ್ಯಯಃ ।**
**ನಾರದಾಯ ಪುರಾ ಪ್ರಾಹ ಕೃಷ್ಣದ್ವೈಪಾಯನಾಯ ಸಃ ॥ ೪೧ ॥**

**ಸ ವೈ ಮಹ್ಯಂ ಮಹಾರಾಜ ಭಗವಾನ್ ಬಾದರಾಯಣಃ ।**
**ಇಮಾಂ ಭಾಗವತೀಂ ಪ್ರೀತಃ ಸಂಹಿತಾಂ ವೇದಸಮ್ಮಿತಾಮ್ ॥ ೪೨ ॥**

ಮಹಾರಾಜ=ಪರೀಕ್ಷಿತನೇಏತಾಂ ಪುರಾಣಸಂಹಿತಾಂ=ಈ ಭಾಗವತ ಸಂಹಿತೆಯನ್ನು ಪುರಾ=ಹಿಂದೆ ಋಷಿಃ=ಜ್ಞಾನಿಯಾದ ಅವ್ಯಯಃ=ನಾಶರಹಿತನಾದ ನಾರಾಯಣಃ= ಧರ್ಮಪುತ್ರನಾದ ನಾರಾಯಣನು ನಾರದಾಯ=ನಾರದರಿಗೆ ಪ್ರಾಹ=ಹೇಳಿದನು. ಸಃ=ನಾರದರು ಕೃಷ್ಣದ್ವೈಪಾಯನಾಯ=ವೇದವ್ಯಾಸದೇವರಿಗೆ ಪ್ರಾಹ=ನಿವೇದಿಸಿದರು. ಸಃ ಭಗವಾನ್ ಬಾದರಾಯಣಃ=ಆ ಸರ್ವಜ್ಞರಾದ ವೇದವ್ಯಾಸದೇವರು ಮಹ್ಯಂ= ಶುಕಾಚಾರ್ಯನಾದ ನನಗೆ ಪ್ರೀತಃ=ಪ್ರಸನ್ನನಾಗಿ ವೇದಸಂಮ್ಮಿತಾಂ=ವೇದ ಸಮಾನವಾದ ಇಮಾಂ ಭಾಗವತೀಂ ಸಂಹಿತಾಂ=ಈ ಭಾಗವತ ಸಂಹಿತೆಯನ್ನು ಪ್ರಾಹ=ಹೇಳಿದರು.

**ವಿಶೇಷ-** ಸಮ್ಮಿತಾಂ ಎಂದರೆ ನನ್ನ ಯೋಗ್ಯತೆಗೆ ತಕ್ಕಂತೆ ಸ್ವಲ್ಪವನ್ನೇ ಪ್ರಾಹ=ಹೇಳಿದರು ನಾನು ಅಷ್ಟನ್ನೇ ವೇದ=ತಿಳಿದೆನು. ಹೀಗೂ ಅರ್ಥ. ವೇದಸಮ್ಮಿತಾಂ=ವೇದ ಸಮಾನವೆಂದು ಹೇಳಿದ್ದರಿಂದ ಪೌರುಷೇಯವಾದ್ದರಿಂದ ಬರುವ ದೋಷಶಂಕೆಗೆ ಅವಕಾಶವಿಲ್ಲವೆಂದು ಸೂಚಿಸುವರು.

**ಏತಾಂ ವಕ್ಷ್ಯತ್ಯಸೌ ಸೂತ ಋಷಿಭ್ಯೋ ನಿಮಿಷಾಲಯೇ ।**
**ದೀರ್ಘಸತ್ರೇ ಕುರುಶ್ರೇಷ್ಠ ಸಂಪೃಷ್ಟಃ ಶೌನಕಾದಿಭಿಃ ॥ ೪೩ ॥**

ಹೇ ಕುರುಶ್ರೇಷ್ಠ=ಪರೀಕ್ಷಿತನೇ ನಿಮಿಷಾಲಯೇ=ನೈಮಿಷಾರಣ್ಯದಲ್ಲಿ ದೀರ್ಘಸತ್ರೇ=ಸಾವಿರ ವರ್ಷ ನಡೆದ ಬಹುಕರ್ತೃಕ ಯಜ್ಞವು ನಡೆದಾಗ ಶೌನಕಾದಿಭಿಃ=ಶೌನಕರೇ ಮೊದಲಾದವರಿಂದ ಸಂಪೃಷ್ಟಃ=ಪ್ರಶ್ನಿಸಲ್ಪಟ್ಟ ಅಸೌ ಸೂತಃ=ರೋಮಹರ್ಷಣರ ಪುತ್ರರಾದ ಸೂತರು(ಉಗ್ರಶ್ರವಾ ಎಂಬುವರು) ಏತಾಂ=ಭಾಗವತವನ್ನು ಋಷಿಭ್ಯಃ=ಶೌನಕಾದಿಗಳಿಗೆ ವಕ್ಷ್ಯತಿ=ಹೇಳುವರು.

**ಅತ್ರಾನುವರ್ಣ್ಯತೇಽಭೀಕ್ಷ್ಣಂ ವಿಶ್ವಾತ್ಮಾ ಭಗವಾನ್ ಹರಿಃ ।**
**ಯಸ್ಯ ಪ್ರಸಾದಜೋ ಬ್ರಹ್ಮಾ ರುದ್ರಶ್ಚ ಕ್ರೋಧಸಂಭವಃ ॥ ೪೪ ॥**

ಅತ್ರ=ಈ ಭಾಗವತದಲ್ಲಿ ಯಸ್ಯ=ಯಾವನ ಪ್ರಸಾದಜಃ=ಸಂತೋಷದಿಂದ ಜನಿಸಿದವನು ಬ್ರಹ್ಮಾ=ಚತುರ್ಮುಖನು ಕ್ರೋಧಸಂಭವಃ=ಕೋಪದಿಂದ ಜನಿಸಿದವನು ರುದ್ರಶ್ಚ=ರುದ್ರನೂ ಅಂಥಹ ವಿಶ್ವಾತ್ಮಾ=ಸಮಸ್ತ ಜಗದಂತರ್ಯಾಮಿಯಾದ ಭಗವಾನ್ ಹರಿಃ=ಐಶ್ವರ್ಯ ಪೂರ್ಣನಾದ ಶ್ರೀಹರಿಯು ಅಭೀಕ್ಷ್ಣಂ=ಪುನಃಪುನಃ ಅನುವರ್ಣ್ಯತೇ =ಪ್ರತಿಪಾದಿಸಲ್ಪಡುವನು ಕಾರಣ ಅವನ ಶ್ರವಣವು ಅವಶ್ಯವಾದುದು.

ಜಗತ್ಕರ್ತೃವೆಂದು ಜಗತ್ಸಂಹರ್ತೃವೆಂದು ಪ್ರಸಿದ್ಧರಾದ ವಿಧಿವಿಧಿಜರದೇ ಈ ಅವಸ್ಥೆ ಆದ ಮೇಲೆ ಉಳಿದವರ ಪಾಡೇನು ಎಂದು ಭಾವ. ನಾನು ಹುಟ್ಟಿದೆನು ನಾನು ಮೃತನಾದೆನು ಎಂದು ಬುದ್ಧಿಯಲ್ಲಿ ವಿಕಾರ ಕಾಣುವದು. ಆತ್ಮನಿಗೆ ಅಲ್ಲ ದೇಹಕ್ಕೆಂದು ಪರೀಕ್ಷಿತನು ತನ್ನ ಪರೀಕ್ಷಿತವಾದ ಬುದ್ಧಿಯಿಂದ ತಿಳಿದವನಾಗಿದ್ದ. ಆದರೂ ಶುಕಮುನಿಗಳು ಬೇರೆಯವರನ್ನು ಮನಸ್ಸಿನಲ್ಲಿಟ್ಟುಕೊಂಡು ಹೊರಗೆ ರಾಜನನ್ನುದ್ದೇಶಿಸಿ ಹೇಳುವರು.

**ತ್ವಂ ಚ ರಾಜನ್ ಮರಿಷ್ಯೇತಿ ಪಶುಬುದ್ಧಿಮಿಮಾಂ ಜಹಿ ।**
**ನ ಜಾತಃ ಪ್ರಾಗಭೂತೋಽದ್ಯ ದೇಹವತ್ತ್ವಂ ನ ನಂಕ್ಷ್ಯಸಿ ॥ ೪೫ ॥**

ಹೇ ರಾಜನ್=ಎಲೋ ಪರೀಕ್ಷಿತನೇ ತ್ವಂ ಚ=ನೀನಾದರೂ ಅಹಂ ಮರಿಷ್ಯೇ=ನಾನು ಸಾಯುವೆನು ಇತಿ ಪಶುಬುದ್ಧಿಂ=ಎಂಬ ಅನ್ಯಥಾ ಜ್ಞಾನವನ್ನು ಜಹಿ=ಬಿಟ್ಟುಬಿಡು.(ಅತಿ ಪಶುಬುದ್ಧಿಂ ಎಂದು ಪದ ವಿಭಾಗ ಮಾಡಬಹುದು.) ಆಗ ಮಹಾ ಅಜ್ಞಾನಿಗಳಂತೆ ಎಂದರ್ಥ. ತ್ವಂ=ನೀನು ದೇಹವತ್=ದೇಹದಂತೆ ಪ್ರಾಗಭೂತಃ=ಮೊದಲು ಸಂಪೂರ್ಣ ಇಲ್ಲದಲೇ ಜಾತಃ ನ=ಈಗ ಜನಿಸಿದವನಲ್ಲ, ಮತ್ತು ದೇಹದಂತೆ ನ ನಂಕ್ಷ್ಯಸಿ=ನಾಶವನ್ನು ಹೊಂದಲಾರಿ.(ಸಿದ್ಧಾಂತದಲ್ಲಿ ದೇಹಾದಿರೂಪ ಕಾರ್ಯಗಳಿಗೆ ಸದಸತ್ವ ಒಪ್ಪಿದೆ. ಇದರ ಎಸ್ತಾರ 'ನ ಜಾಯತೆ ಮ್ರಿಯತೇವಾ' ಎಂಬ ಗೀತಾ ಭೂತ್ವಾ ಭವಿತಾನ' ಎಂಬ ಭಾಷ್ಯ ಟೀಕಾದಿಗಳಲ್ಲಿ ವಿಸ್ತಾರ ತಿಳಿಯುವದು.) ಕಾರಣ ಸಾಯುವೆನು ಎಂಬುದು ಪಶುಬುದ್ಧಿ ಆದ್ದರಿಂದ ಅದನ್ನು ಬಿಡು ಎಂದು ಶುಕಮುನಿಗಳು ಹೇಳಿದರು ಎಂದು ಭಾವ.

**ನ ಭವಿಷ್ಯಸಿ ಭೂತ್ವಾ ತ್ವಂ ಪುತ್ರಪೌತ್ರಾದಿರೂಪವಾನ್ ।**
**ಬೀಜಾಂಕುರವದ್ ದೇಹಾದೇರ್ವ್ಯತಿರಿಕ್ತೋ ಯಥಾನಲಃ ॥ ೪೬ ॥**

ತ್ವಂ=ನೀನು ಬೀಜಾಂಕುರವತ್=ಅಂದರೆ ಬೀಜದಿಂದ ಅಂಕುರ ಅಂಕುರದಿಂದ ಬೀಜದ ಪರಂಪರೆ ಇದ್ದಂತೆ ಪುತ್ರಪೌತ್ರಾದಿ ರೂಪವಾನ್ ಭೂತ್ವಾ=ಮಗ ಮೊಮ್ಮಗನಾಗಿ ನ ಭವಿಷ್ಯತಿ=ಆಗಲಾರೆ. ಅನಲಃ ಯಥಾ=ಬೆಂಕಿಯು ಹೇಗೆ ಕಟ್ಟಿಗೆಯಿಂದ ಭಿನ್ನವೋ ಹಾಗೆ ನೀನೂ ಸಹ ದೇಹಾದೇಃ ವ್ಯತಿರಿಕ್ತಃ=ದೇಹೇಂದ್ರಿಯ-ಗಳಿಂದ ಭಿನ್ನನು. ಕಾರಣ ದೇಹನಾಶವಾದರೂ ನೀನು ನಾಶವಾಗುವದಿಲ್ಲ. ಎಲ್ಲ ತಂದೆ ಮಕ್ಕಳು ಬೇರೆ ಬೇರೆ ಪರಂಪರೆಯಲ್ಲಿರುವವರು.

*ನಿನಗೂ ನಿನ್ನ ದೇಹಕ್ಕೂ ಭೇದವಿದೆ ಎಂಬ ವಿಷಯದಲ್ಲಿ ನಿನ್ನ ಜ್ಞಾನವೇ ಪ್ರಮಾಣವೆಂದು ಹೇಳುವರು.*

**ಸ್ವಪ್ನೇ ಯಥಾ ಶಿರಚ್ಛೇದಃ ಪಂಚತ್ವಾದ್ಯಾತ್ಮನಸ್ತಥಾ ।**
**ಯಸ್ಮಾತ್ ಪಶ್ಯಸಿ ದೇಹಸ್ಯ ತತ ಆತ್ಮಾ ಹ್ಯಜೋಽಮರಃ ॥ ೪೭ ॥**

ಯಥಾ=ಹೇಗೆ ಸ್ವಪ್ನೇ=ಕನಸಿನಲ್ಲಿ ಆತ್ಮನಃ=ತನ್ನ ಶಿರಚ್ಛೇದಃ=ತಲೆಯನ್ನು ಕತ್ತರಿಸಿದಂತೆ ಪಂಚತ್ವಾದ್ಯಾಃ=ಮರಣ ಮುಂತಾದವುಗಳು ಬಂದಂತೆ ಯಸ್ಮಾತ್=ಯಾವಕಾರಣ ದೇಹಸ್ಯ ಪಶ್ಯಸಿ=ದೇಹಕ್ಕೆ ಆದದ್ದನ್ನು ಕಾಣುವಿ ತತಃ=ಆದ್ದರಿಂದ ಆತ್ಮಾ=ಜೀವನು ಅಜಃ =ಉತ್ಪತ್ತಿರಹಿತನು ಅಮರಃ=ಮರಣರಹಿತನು. ನೋಡುವವನಿಗೂ ನೋಡುವ ವಸ್ತುವಿಗೂ ಐಕ್ಯವಿರಲಾರದು. ಕಾರಣ ಜನನ ಮರಣಗಳ ಜೀವನಿಗೆ ಅಲ್ಲ ದೇಹಕ್ಕೆ ಎಂದು.

**ಘಟೇ ಭಿನ್ನೇ ಯಥಾಕಾಶ ಆಕಾಶಃ ಸ್ಯಾದ್ ಯಥಾ ಪುರಾ ।**
**ಏವಂ ದೇಹೇ ಮೃತೇ ಜೀವೋ ಬ್ರಹ್ಮಸಂಪದ್ಯತೇ ಪುನಃ ॥ ೪೮ ॥**

ಘಟೇ ಭಿನ್ನೇ=ಒಂದು ಮಡಿಕೆಯು ಒಡೆದು ಹೋದಾಗ ಆದರಲ್ಲಿರುವ ಆಕಾಶಃ=ಮಹಾಕಾಶದ ಅಂಶವು ಯಥಾ=ಹೇಗೆ ಯಥಾ ಪುರಾ ಸ್ಯಾತ್=ಆಕಾಶ ಮೊದಲು ಹೇಗಿತ್ತೋ ಹಾಗಾಗುವದು ಮಹಾಕಾಶವೇ ಆಗುವದು ಏವಂ=ಅದರಂತೆ ಘಟಸದೃಶವಾದ ದೇಹೇ ಮೃತೇ=ದೇಹವು ನಾಶವಾಗುತ್ತಿರಲು ಜೀವಃ=ಜೀವನು ಬ್ರಹ್ಮ ಸಂಪದ್ಯತೇ=ತನ್ನ ಸ್ವರೂಪವನ್ನು ಪಡೆಯುವನು.

ತಾತ್ಪರ್ಯ-

**ಮಹಾಕಾಶೋ ಬಹಿಸ್ಥಶ್ಚ ಘಟಾದ್ಯಂತಸ್ಥ ಏವ ಚ ।**
**ದ್ವೇಧಾ ಸಮುದಿತೋಽನ್ಯೌ ಚ ದ್ವಾವಾಕಾಶೌ ಪ್ರಕೀರ್ತಿತೌ ॥**
**ಘಟರೂಪಸ್ತದನ್ಯಶ್ಚ ಮಹಾಕಾಶಾತ್ ಪರೋ ಲಘು ।**
**ಮಹಾಕಾಶವದೇವಾತ್ರ ಪರಮಾತ್ಮಾ ಸನಾತನಃ ॥**
**ಘಟಾನ್ತಸ್ಥಮಹಾಕಾಶಪ್ರತಿಮೋಂತರ್ಗತೋ ಹರಿಃ ।**
**ಘಟಸ್ಯಾಂತರ್ಗತಾಕಾಶೋ ಮಹಾಕಾಶಾತ್ ಪರೋ ಮತಃ ॥**
**ತದ್ವತ್ ದೇವಾದಯಃ ಸರ್ವೇ ಜೀವಾ ಮುಕ್ತ್ಯುಪಭೋಗಿನಃ ।**
**ತಮೋಗಾಶ್ಚೈವ ಯೇ ಸರ್ವೇ ಘಟರೂಪಖವನ್ನರಾಃ ॥ ಇತಿ ತತ್ತ್ವಸಂಹಿತಾಯಾಮ್ ।**
**ಪ್ರತ್ಯೇಕಂ ವಿಷ್ಣುರೂಪಾಣಾಂ ಭ್ರಾಂತಿಮಾತ್ರಾ ಭಿದಾ ಮತಾ ।**
**ಜಗತಶ್ಚೈವ ವಿಷ್ಣೋಶ್ಚ ಸತ್ಯೋ ಭೇದಃ ಸದೈವ ತು ॥**
**ಯಥಾಕಾಶಘಟೌ ನಿತ್ಯಂ ಭಿನ್ನಾವೇವ ಪರಸ್ಪರಮ್ ।**
**ಏವಮೀಶೋ ಜಗಚ್ಚೈವ ಭಿನ್ನಾವೇವ ಪರಸ್ಪರಮ್ ॥ ಇತಿ ಚ**

ಅವ್ಯಾಕೃತಾಕಾಶವು ಘಟದ ಹೊರಗೂ ಇದೆ ಒಳಗೂ ಇದೆ. ಎರಡೂ ಕಡೆ ಇದ್ದರೂ ಒಳಗೆ ಹೊರಗೆ ಇರುವ ಅವ್ಯಾಕೃತಾಕಾಶಕ್ಕೆ ಹೇಗೆ ಭೇದವಿಲ್ಲವೋ ಹಾಗೆಯೇ ಬಾಹ್ಯ ಭಗವದ್ರೂಪಕ್ಕೂ ಅಂತರ್ನಿಯಾಮಕ ಭಗವದ್ರೂಪಕ್ಕೂ ಭೇದವಿಲ್ಲ. ಚೇತನಾಚೇತನಾತ್ಮಕ ಜಗತ್ತು ಪರಮಾತ್ಮನಿಂದ ಅತ್ಯಂತ ಭಿನ್ನವು. ಪರಮಾತ್ಮನು ಅವ್ಯಾಕೃತಾಕಾಶದಂತೆ ಪುರಾತನನು. ಘಟದೊಳಗಿನ ಅವ್ಯಾಕೃತಾಕಾಶಸದೃಶನು. ಘಟದೊಳಗಿನ ಭೂತಾಕಾಶವು ಮಹಾಕಾಶದಿಂದ ಭಿನ್ನವು. ಮುಕ್ತಿಯೋಗ್ಯರಾದ ದೇವತೆಗಳೇ ಮೊದಲಾದವರು ಭೂತಾಕಾಶದಂತೆ, ತಾಮಸರೂ ಮಧ್ಯಮರೂ ಇವರೆಲ್ಲರೂ ಭೂತಾಕಾಶವೇ ಉಪಾದಾನವಾಗಿವುಳ್ಳ ಘಟಕ್ಕೆ ಸದೃಶರು. ಒಟ್ಟಿನಲ್ಲಿ

ದೇಹವು ಮೃತವಾಗಲು ದೇಹಾಂತರ್ಗತ ಬ್ರಹ್ಮನು ಹೊರಗಿರುವ ಪರಮಾತ್ಮನಿಂದ ಐಕ್ಯ ಹೊಂದುವನು. ಹೇಗೆ ಘಟದೊಳಗಿನ ಭೂತಾಕಾಶವು ಮಹಾಕಾಶದಿಂದ ಭಿನ್ನವಾಗಿ ಮಹಾಕಾಶದಿಂದ ಯುಕ್ತವಾಗಿದೆಯೋ ಹಾಗೆಯೇ ಜೀವನು ಬ್ರಹ್ಮನಿಂದ ಭಿನ್ನವಾಗಿ ಪರಬ್ರಹ್ಮನನ್ನು ಹೊಂದುವನು. ಹೇಗೆ ಘಟಾಕಾಶವು ಭೂತಾಕಾಶ ಮಹಾಕಾಶಗಳಿಗಿಂತ ಅತಿನೀಚವೋ ಹಾಗೆ ತಾಮಸರು ಮಧ್ಯಮರು ದೇವತೆಗಳಿಂದ ಅತಿ ನೀಚರು ತಮ್ಮ ತಮ್ಮ ಸಂಗತಿಯನ್ನು ಹೊಂದುವರು ಎಂದು ತತ್ತ್ವ ಸಂಹಿತೆಯಲ್ಲಿದೆ.

**ವಿಶೇಷ-** (ಸ)ಘಟದೊಳಗಿನ ಮಹಾಕಾಶದ ಏಕದೇಶವು ಹೊರಗಿರುವ ವ್ಯಾಪ್ತಾಕಾಶವಾಗುವದು ಅದರಂತೆ ಮೊದಲು ಪ್ರಾಣಧಾರಕನಾದ ಅಂತರ್ಯಾಮಿ ಪರಮಾತ್ಮನು ವ್ಯಾಪ್ತ ಸ್ವರೂಪನಾಗುವನು. ಘಟದೊಳಗಿರುವ ಭೂತಾಕಾಶವು ಮೊದಲಿನಂತೆ ಮಹಾಕಾಶದ ಅಧೀನವಾಗುವದು. ಅದರಂತೆ ಚರಮದೇಹದಲ್ಲಿರುವ ಲಿಂಗದೇಹ ನಾಶವಾದಾಗ ಜೀವನು ಮುಕ್ತಿಯೋಗ್ಯನಾದವನು ಪರಮಾತ್ಮನನ್ನು ಹೊಂದುವನು. ಎಂದು ತತ್ತ್ವಸಂಹಿತಾವಚನದಿಂದ ತಿಳಿದು ಬರುತ್ತದೆ.

*ಬೇರೊಂದು ರೀತಿಯಿಂದ ಸಂಸಾರ ಬರುವದೆಂದು ಹೇಳುವರು.*

**ಮನಃ ಸೃಜತಿ ವೈ ದೇಹಾನ್ ಗುಣಾನ್ ಕರ್ಮಾಣಿ ಚಾತ್ಮನಃ ।**
**ತನ್ಮನಃ ಸೃಜತೇ ಮಾಯಾ ತತೋ ಜೀವಸ್ಯ ಸಂಸೃತಿಃ ॥ ೪೯ ॥**

ಆತ್ಮನಃ=ಜೀವನ ಮನಃ=ಮನಸ್ಸು ದೇಹಾನ್=ಸುರನರ ಮುಂತಾದ ದೇಹಗಳನ್ನು ಗುಣಾನ್=ಗುಣಗಳನ್ನು ಕರ್ಮಾಣಿ=ಪುಣ್ಯಪಾಪಗಳನ್ನು ಸೃಜತಿ=ಹುಟ್ಟಿಸುವದು ಈ ಮನಸ್ಸು ಸಮೀಚೀನವೇ ಎಂದರೆ ಹೇಳುವರು. ಮಾಯಾ=ಜಡ ಪ್ರಕೃತಿಯು ತನ್ಮನಃ=ಆ ಮನಸ್ಸನ್ನು ಸೃಜತೇ=ಹುಟ್ಟಿಸುವದು ತತಃ=ಜಡ ಪ್ರಕೃತಿ ಸಂಬಂಧದಿಂದ ಜೀವಸ್ಯ=ಜೀವನಿಗೆ ಸಂಸೃತಿಃ=ಸಂಸಾರವು ಬರುವದು.

**ವಿಶೇಷ-** ಸೃಷ್ಟಿಮಾಡಿದ ಫಲವು ತನಗೆ ಎಂದು ತಿಳಿಸಲು ಆತ್ಮನೇಪದ ಪ್ರಯೋಗ ಮಾಡಿರುವರು. ಅದರಿಂದ ಜಡ ಪ್ರಕೃತಿಯಿಂದ ಹುಟ್ಟುವದು ಜಡಮನಸ್ಸು ಎಂದು ಸೂಚಿಸಿದಂತಾಯಿತು. ಚಿನ್ಮಿಶ್ರವಾಗುವದು.

*ದೃಷ್ಟಾಂತವನ್ನು ಕೊಟ್ಟು ಸಂಸಾರದ ಅವಧಿ ಹೇಳುವರು.*

**ಸ್ನೇಹಾಧಿಷ್ಠಾನವರ್ತ್ಯಗ್ನಿಸಂಯೋಗೋ ಯಾವದೀಯತೇ ।**
**ತಾವದ್ ದೀಪಸ್ಯ ದೀಪತ್ವಂ ಏವಂ ದೇಹಕೃತೋ ಭವಃ ॥ ೫೦ ॥**

ಯಾವತ್=ಎಲ್ಲಿಯ ವರೆಗೆ ಸ್ನೇಹಾಧಿಷ್ಠಾನವರ್ತ್ಯಗ್ನಿಸಂಯೋಗಃ=ತುಪ್ಪ ಎಣ್ಣೆ ಮುಂತಾದವುಗಳಲ್ಲಿರವ ಸ್ನೇಹ ಪ್ರಣತಿಮುಂತಾದವು ಬತ್ತಿ ಹಾಗು ಅಗ್ನಿ ಸಂಬಂಧವು ಈಯತೇ=ಇರುವದೋ ತಾವತ್=ಆವರೆಗೆ ದೀಪಸ್ಯ=ದೀಪಕ್ಕೆ ದೀಪತ್ವಂ=ಪ್ರಕಾಶನ ಶಕ್ತಿಯು ಏವಂ=ಅದರಂತೆ ದೇಹಕೃತಃ ಭವಃ=ದೇಹಗತ ಕರ್ಮ ನಿಮಿತ್ತಿಕವಾದುದು ಈ ಸಂಸಾರವು.

*ಆದರೆ ಎಣ್ಣೆ ಮುಂತಾದವು ಮುಗಿದ ಮೇಲೆ ದೀಪಕ್ಕೆ ಶೂನ್ಯತೆ ಬಂದಂತೆ ಜೀವನಿಗೆ ಶೂನ್ಯತೆ ಬರುವದಿಲ್ಲವೆಂದು ಹೇಳುವರು.*

**ರಜಃಸತ್ತ್ವತಮೋವೃತ್ತ್ಯಾ ಜಾಯೇತೈಧತ ನಶ್ಯತಿ ।**
**ನ ತತ್ರಾತ್ಮಾ ಸ್ವಯಂ ಜ್ಯೋತಿರ್ಯೋವ್ಯಕ್ತಾವ್ಯಕ್ತಯೋಃ ಪರಃ ॥ ೫೧ ॥**

ರಜಃಸತ್ತ್ವತಮೋವೃತ್ತ್ಯಾ=ರಜೋಗುಣ,ಸತ್ವಗುಣ,ತಮೋಗುಣಗಳಿಂದ ಕ್ರಮವಾಗಿ ಜಾಯೇತೈಧತನಶ್ಯತಿ=ಹುಟ್ಟುವದು,ಬೆಳೆಯುವದು, ನಾಶಹೊಂದುವದು ತತ್ರ=ಆ ಅವಸ್ಥೆಯಲ್ಲಿ ಯಃ=ಯಾವನು ವ್ಯಕ್ತಾವ್ಯಕ್ತಯೋಃ ಪರಃ=ದೇಹ ಮತ್ತು ಪ್ರಕೃತಿಯಿಂದ ವಿಲಕ್ಷಣನಾದ ಸಃ=ಆ ಆತ್ಮಾ=ಜೀವನು ನ=ಹುಟ್ಟುವದಿಲ್ಲ ಬೆಳೆಯುವದಿಲ್ಲ, ನಾಶವಾಗುವದೂ ಇಲ್ಲ, ಸ್ವಯಂ ಜ್ಯೋತಿಃ=ಜ್ಞಾನಸ್ವರೂಪನಾದ್ದರಿಂದ ಭಗವಂತನೇ ಪ್ರಕಾಶಕನಾಗಿ ಉಳ್ಳ ಅಂದರೆ ಭಗವಂತನಿಂದ ಜ್ಞಾನಾದಿಗಳ ಅಭಿವ್ಯಕ್ತಿಯುಳ್ಳ ಆತ್ಮಾ=ಜೀವನು ನ ಜಾಯತೇ ನ ವರ್ಧತೇ=ಹುಟ್ಟುವದಿಲ್ಲ ಬೆಳೆಯುವದಿಲ್ಲ ನಶಿಸುವದಿಲ್ಲ 'ಅಣುರ್ಹಿ ಏಷ ಆತ್ಮಾ' ಎಂದು ಶ್ರುತಿ ಇದೆ. 'ನತತ್ರಾತ್ಮಾ' ಎಂದು ಪದ ವಿಭಾಗ ಮಾಡಿ **ನತಾನ್** ಶರಣಾಗತರಾದವರನ್ನು ತ್ರಾಯತೇ ಇತಿ ರಕ್ಷಿಸುವವನಾದ್ದರಿಂದ **ನತತ್ರಃ** ಸಚಾಸೌ ಆತ್ಮಾ ಚ ನತತ್ರಾತ್ಮಾ=ಪರಮಾತ್ಮನು ವ್ಯಕ್ತಾವ್ಯಕ್ತಯೋಃ=ಪರಃ ಕಾರ್ಯಕಾರಣ ಪ್ರಪಂಚ ವಿಲಕ್ಷಣನು ಸ್ವಯಂಜ್ಯೋತಿಃ (ಅನನ್ಯನಿಘ್ನಜ್ಞಾನಘನಃ ಸತ್ಯಧರ್ಮರು)ಇನ್ನೊಬ್ಬರ ಅಧೀನವಾಗದ ಜ್ಞಾನವುಳ್ಳವನು ಅಂದಮೇಲೆ ಜನನಾದಿಗಳಿಲ್ಲವೆಂದೇನು ಹೇಳುವದು ಎಂಬ ಅಂತರಾರ್ಥವೂ ಅಭಿಪ್ರೇತವಾಗಿದೆ. ನಾತ್ಮಾ ಎನ್ನದೇ ನತತ್ರಾತ್ಮಾ ಎಂದು ಹೇಳಿದ ವ್ಯಾಸರಿಗೆ ತಃ ಜೀವಂ ತ್ರಾಯತೇ ಇತಿ ತತ್ರಃ ನಜಾಯತೇ= ಪರಮಾತ್ಮನು ರಕ್ಷಿಸುವ ಜೀವನೇ ಉಳಿಯುವಾಗ ರಕ್ಷಕನಾದ ಪರಮಾತ್ಮನು ಉಳಿಯುವನೆಂದೇನು ಹೇಳುವದು. ತಾನೇ ಸಿದ್ಧವಾಗುವದು.

*ಫಲಿತಾರ್ಥವನ್ನು ಹೇಳುವರು.*

**ಆಕಾಶವದ್ ಧ್ರುವಾಧಾರೋ ಧ್ರುವೋ ನಾನಾಮಿತಸ್ತತಃ ।**
**ಏವಮಾತ್ಮಾನಮಾತ್ಮಸ್ಥಮಾತ್ಮನೈವಾಮೃಶ ಪ್ರಭೋ ॥ ೫೨ ॥**

ಪ್ರಭೋ=ಉಪಾಸನೆ ಮಾಡಲು ಸಮರ್ಥನಾದ ರಾಜನೇ(ನನ್ನ ಉಪದೇಶದಿಂದ) ಆಕಾಶವದ್ ತತಃ=ಆಕಾಶದಂತೆ ವ್ಯಾಪ್ತನಾದವನು ಧ್ರುವಾಧಾರಃ=ಶಾಶ್ವತವಾಗಿ ಆಶ್ರಯನಾದವನು ಧ್ರುವಃ=ನಿತ್ಯನು ನಾನಾಮಿತಃ=ಆ ಆ ವಸ್ತುಗಳ ಪರಿಮಾಣ ಸಮಾನ ಪರಿಮಾಣವುಳ್ಳವನು ಆತ್ಮಸ್ಥಂ=ತನ್ನ ಹೃದಯದಲ್ಲಿರುವ ಆತ್ಮಾನಂ= ಪರಮಾತ್ಮನನ್ನು ಏವಂ=ಈ ವಿಧ ಮಾಹಾತ್ಮ್ಯೋಪೇತವಾಗಿ ಆತ್ಮನೈವ=ಎಲ್ಲ ರೀತಿಯ ಪ್ರಯತ್ನದಿಂದ ಆಮೃಶ=ಚೆನ್ನಾಗಿ ವಿಚಾರಮಾಡಿ ಉಪಾಸಿಸು.

*ದುರ್ಮರಣ ದೋಷಯುತನಾದ ನನಗೆ ದೇಹತ್ಯಾಗ ಮಾಡಿದರೂ ಮೋಕ್ಷವಾಗಲಾರದು ಎಂದು ಚಿಂತಿಸಬೇಡವೆಂದು ಹೇಳುವರು.*

**ಬುದ್ಧ್ಯಾನುಮಾನಗರ್ಭಿಣ್ಯಾ ವಾಸುದೇವಾನುಚಿಂತಯಾ ।**
**ಚೋದಿತೋ ವಿಪ್ರವಾಕ್ಯೇನ ನ ತ್ವಾಂ ಧಕ್ಷ್ಯತಿ ತಕ್ಷಕಃ ॥ ೫೩ ॥**

ಅನುಮಾನಗರ್ಭಿಣ್ಯಾ ಬುದ್ಧ್ಯಾ=ಜೀವನಿಗೆ ಅಸ್ವಾತಂತ್ರ್ಯ, ದೇಹಕ್ಕೆ ಅನಿತ್ಯತ್ವ ಸಾಧಕ ಅನುಮಾನಗಳಿಂದ ಕೂಡಿದ ಬುದ್ಧಿಯಿಂದ ಉಂಟಾದ ವಾಸುದೇವಾನುಚಿಂತಯಾ= ಶ್ರೀಹರಿಯ ಉಪಾಸನೆಯನ್ನು ಮಾಡುತ್ತಾ ಇರುವ ತ್ವಾಂ=ನಿನ್ನನ್ನು ವಿಪ್ರವಾಕ್ಯೇನ= ಶಮೀಕ ಮುನಿ ಪುತ್ರರಾದ ಶೃಂಗಿಯ ಮಾತಿನಿಂದ ಚೋದಿತಃ=ಪ್ರೇರಿತವಾದ ತಕ್ಷಕಃ= ಸರ್ಪವು ನ ಧಕ್ಷ್ಯತಿ=ಕಚ್ಚಿದ ದೋಷವನ್ನುಂಟು ಮಾಡುವದಿಲ್ಲ(ದುರ್ಮರಣವೆನಿಸಿ- ಕೊಳ್ಳಲಾರದೆಂದರ್ಥ.)

ವಿಜಯಧ್ವಜರು ತೋರಿಸಿರುವ ಅನುಮಾನಗಳು

೧. ಆತ್ಮಾ (ಪಕ್ಷ) ಸ್ವಸ್ವೇತರವೃತ್ತಿತ್ವಾನಾಕ್ರಾಂತನಿತ್ಯನಿಷ್ಠಾಧಿಕರಣಂ,(ಸಾಧ್ಯ) ಮೇಯತ್ವಾತ್(ಹೇತು) ಆತ್ಮವತ್ (ದೃಷ್ಟಾಂತ)

೨. ದೇಹಃ, ಸ್ವಸ್ವೇತರವೃತ್ತಿತ್ವಾನಾಕ್ರಾಂತನಿತ್ಯನಿಷ್ಠಾಧಿಕರಣಂ, ಮೇಯತ್ವಾತ್ ಘಟವತ್,

ಒಂದನೆಯ ಅನುಮಾನದಲ್ಲಿ ಆತ್ಮಾ ಅಂದರೆ ಜೀವನು. ಸಾಧ್ಯದಲ್ಲಿ ಸ್ವ ಎಂದರೆ ಪಕ್ಷವನ್ನಾಗಿ ಮಾಡಿದ ಅಸ್ವತಂತ್ರ ಮೊದಲಾದ ಗುಣಗಳಿಂದ ಕೂಡಿದ ಜೀವನು. ಸ್ವೇತರ ಎಂದರೆ ಅಸ್ವಾತಂತ್ರ್ಯಾದಿಗುಣಗಳಿರುವದರಿಂದ ಜೀವಸದೃಶವಾದ ಜೀವಭಿನ್ನವಾದ ಘಟಾದಿಗಳು ಎಂದರ್ಥ. ಇವೆರಡರಲ್ಲಿಯೂ ಆಶ್ರಯಿಸಿಕೊಂಡು ಇಲ್ಲದಿರುವದರಿಂದ ಸ್ವಸ್ವೇತರ ವೃತ್ತಿತ್ವಾನಾಕ್ರಾಂತನೆಂದರೆ ಶ್ರೀಹರಿಯು ಅವನಲ್ಲಿರುವ ನಿತ್ಯನಿಷ್ಠಾಧಿಕರಣನು ನಿತ್ಯಸಂಬಂಧಕ್ಕೆ ಅಧಿಕರಣನು. ಪರಮಾತ್ಮನಲ್ಲಿರುವ ಸ್ವಾಮಿತ್ವನಿರೂಪಿತಸ್ವತ್ವ ಎಂಬ ಸಂಬಂಧವುಳ್ಳವನು. ಅಂದರೆ ಪರಮಾತ್ಮನಿಯಮ್ಯ ನೆಂದು ಭಾವ. ಹೇತು ಮೇಯತ್ವಾತ್ ಅಂದರೆ ಪರಿಮಿತ ಶಕ್ತಿಯುಳ್ಳವನಾದ್ದರಿಂದ ಎಂದರ್ಥ.

ಭಗವಂತ ಸರ್ವಗತನಾದುದರಿಂದ ಜೀವ ಮತ್ತು ಘಟಾದಿಗಳಲ್ಲಿ ಅವೃತ್ತಿ ಎಂದು ಹೇಳುವದು ಹೇಗೆ ಎಂದರೆ ಅಖಿಲ ಜೀವತದಿತರವೃತ್ತಿ ಎಂದರೆ ಜೀವ ಮತ್ತು ಘಟಾದಿಗಳೆಂಬ ಅಧಿಕರಣಸಾಪೇಕ್ಷವಾದ ಇರುವಿಕೆ ವಿವಕ್ಷಿತವಾಗದೆ ಈ ವಿಧವಾದದ್ದು 'ಕಿಂಸ್ವಿದಾಸೀದಧಿಷ್ಠಾನಮಾರಂಭಣಂ ಕತಮಸ್ವಿತ್ ಕಥಾಸೀತ್' ಎಂದು ಅಧಿಕರಣವನ್ನು ಆಕ್ಷೇಪಿಸಿರುವದರಿಂದ(ಶ್ರುತಿಯಲ್ಲಿ)ಅನ್ಯಸಾಪೇಕ್ಷಸತ್ತಾರೂಪವಾದ ವೃತ್ತಿತ್ವವಿಲ್ಲದ್ದರಿಂಧ ಅವತ್ತಿತ್ವವು ಬರುವದು. 'ಸ ಭಗವ ಕಸ್ಮಿನ್ ಪ್ರತಿಷ್ಠಿತಃ ಇತಿ ಸ್ವೇ ಮಹಿಮ್ನಿ' ಇತಿ । ಹೀಗೆ ಶ್ರುತಿಗಳಿವೆ. ತನ್ನ ಮಹಿಮೆಯಲ್ಲಿ ತಾನಿರುವನೇ ಹೊರತು ಇನ್ನೊಬ್ಬರನ್ನಾಶ್ರಯಿಸಿಲ್ಲ. ನಿಯಮನಕ್ಕಾಗಿ ಅವುಗಳನ್ನು ಧಾರಣ ಮಾಡಿಕೊಂಡು ಸರ್ವಗತನೂ ಆಗಿರುವನು. ಇಲ್ಲಿ ಮೇಯತ್ವಾತ್ ಎನ್ನುವದಕ್ಕೆ ಮಾ ವಿಷಯತ್ವ (ಜ್ಞಾನವಿಷಯತ್ವವೆಂಬ)ಯಥಾ ಶ್ರುತ ಅರ್ಥವನ್ನೇಕೆ ಮಾಡಬಾರದು ಎಂದು ಶಂಕಿಸುವದು ಸರಿಯಲ್ಲ. ಹಾಗೆ ಮಾಡಿದಲ್ಲಿ ಘಟಾದಿಗಳೇ ದೃಷ್ಟಾಂತವಾಗುವಾಗ ಅವುಗಳನ್ನು ಬಿಟ್ಟು ಆತ್ಮವತ್ ಎಂದು ದೃಷ್ಟಾಂತ ಅಸಂಗತವಾಗಬೇಕಾಗುವದು. ಆತ್ಮವತ್ ಎಂದರೆ ಪರಮಾತ್ಮವತ್ ಎಂದರ್ಥ. ಇಲ್ಲಿ ಸಾಧ್ಯಹೇತು ಎರಡೂ ಇಲ್ಲದ್ದರಿಂದ ದೃಷ್ಟಾಂತವಾಗಲಾರದು ಎನ್ನುವಂತಿಲ್ಲ. ವ್ಯತಿರೇಕ ದೃಷ್ಟಾಂತವೆಂದು ಅಭಿಪ್ರಾಯವಿದೆ. ಪರಮಾತ್ಮನಲ್ಲಿ ಸ್ವಸ್ವೇತರವೃತ್ತಿತ್ವಾನಾಕ್ರಾಂತನಿತ್ಯನಿಷ್ಠಾಧಿಕರಣತ್ವವೂ ಇಲ್ಲ. ಕಾರಣ ಸಾಧ್ಯಾಭಾವಃ ಯತ್ರ ತತ್ರ ಹೇತ್ವಭಾವಃ ಪರಿಮಿತಶಕ್ತಿತ್ವಾಭಾವವೂ ಇದೆ. ಎಂದು ಭಾವ. ಇನ್ನು ದೇಹ ಪಕ್ಷಕವಾದ ಎರಡನೇ ಅನುಮಾನದಲ್ಲಿ ಮೇಯತ್ವಾತ್ ಎಂಬುದಕ್ಕೆ ಪರಿಮಿತತ್ವಾತ್ ಎಂದಿಷ್ಟೇ ಅರ್ಥ. ಪರಿಮಿತ ಶಕ್ತಿತ್ವಾತ್

ಎಂದರ್ಥ ಮಾಡಿದರೆ ಘಟವತ್ ಎಂದು ದೃಷ್ಟಾಂತವು ಅನುಗುಣವಾಗಲಾರದು. ಶಕ್ತಿ ಎಂದರೆ ಕಾರ್ಯ ಹುಟ್ಟುವದಕ್ಕೆ ಪ್ರಯೋಜಕವಾದ ಚೇಷ್ಟಾ (ಕ್ರಿಯೆ) ಜನಕ ಪ್ರಯತ್ನ ಸ್ವರೂಪ ಯೋಗ್ಯತೆಯು ಇದು ಘಟಕ್ಕೆ ಇಲ್ಲ. ಆದ್ದರಿಂದಲೇ ಎರಡನೆಯ ಅನುಮಾನ ಕೇವಲ ವ್ಯತಿರೇಕಿಯಲ್ಲ ಘಟಾದಿಗಳಲ್ಲಿ ಪರಿಮಿತತ್ವವೂ ಇದೆ ಪರಮಾತ್ಮನಿಯಮ್ಯತ್ವವೂ ಇದೆ.

ನಿಷ್ಠಾ ಎಂಬ ಶಬ್ದಕ್ಕೆ ಸಂಬಂಧ ಎನ್ನುವ ಅರ್ಥ ಹೇಗೆ ಎಂದರೆ. ಭೂತಲನಿಷ್ಠೋ ಘಟಃ ಮುಂತಾದ ಸ್ಥಳದಲ್ಲಿ ಭೂತಲೇ, ನಿಷ್ಠಾ ಯಸ್ಯಸಃ ಎಂಬ ವಿಗ್ರಹ ವಾಕ್ಯದಲ್ಲಿ ಸೇರಿರುವ ನಿಷ್ಠಾ ಪದಕ್ಕೆ ಭೂತಲಾನುಯೋಗಿಕ ಘಟನಿಷ್ಠ ಸಂಯೋಗಾತ್ಮಕ ಆಧೇಯತಾ ಎಂಬರ್ಥವು ಕಂಡುಬರುವದು. (ಭೂಮಿಯಲ್ಲಿ ಸಂಯೋಗ ಸಂಬಂಧದಿಂದ ಘಟವಿದೆ ಎಂದರ್ಥ) ಇನ್ನು ಸಾಧ್ಯದಲ್ಲಿ ನಿತ್ಯಪದ ವ್ಯರ್ಥವೆಂದು ಶಂಕಿಸಬಾರದು. ಭಗವಂತನಿಗೂ ಭಕ್ತರಿಗೂ ಸ್ವಾಮಿ ಭೃತ್ಯಭಾವ ಸಂಬಂಧವು ನಿತ್ಯವಾಗಿದೆ ಎಂದು ತಿಳಿಸುವದೆ ಉದ್ದೇಶ್ಯವಾಗಿದೆ. ಉದ್ದೇಶ್ಯ ಜ್ಞಾನಕ್ಕಾಗಿ ನಿತ್ಯಪದ ಸಾರ್ಥಕವಾಗಿದೆ. ಅದಕ್ಕಾಗಿಯೇ ಗುಣಾದಿಕಂ ಗುಣ್ಯಾದಿನಾ ಭಿನ್ನಾಭಿನ್ನಂ , ಸಮಾನಾಧಿ ಕೃತತ್ವಾತ್ ಎಂದು ತಾರ್ಕಿಕರನ್ನು ಕುರಿತು ಮಾಡಿದ ಅನುಮಾನದಲ್ಲಿ ಗುಣಗುಣಿಗಳಿಗೆ ಭೇದವನ್ನು ತಾರ್ಕಿಕರೂ ಒಪ್ಪಿರುವದರಿಂದ ಅಭೇದವನ್ನೇ ಸಾಧನ ಮಾಡಬೇಕಿದ್ದರೂ ಭಿನ್ನಾಭಿನ್ನವೆಂದೇ ಗುಣಗಳ ಪ್ರತೀತಿಯು ಉದ್ದೇಶವಾಗಿರುವದರಿಂದ ಭಿನ್ನ ಪದಕ್ಕೆ ಸಾರ್ಥಕ್ಯವಿದೆ. ಸಾಧ್ಯದಲ್ಲಿ ಸೇರಿರುವ ವಿಶೇಷಣಗಳಿಗೆ ವ್ಯಭಿಚಾರಾದಿ ನಿರಾಸಕತ್ವವೇ ಇರಬೇಕೆಂಬ ನಿಯಮವಿಲ್ಲ. ಕ್ಷಿತ್ಯಾದಿಕಂ, ಸ್ವೋಪಾದಾನಗೋಚರಾಪರೋಕ್ಷಜ್ಞಾನ-ಚಿಕೀರ್ಷಾ ಕೃತಿಮಜ್ಜನ್ಯಂ, ಕಾರ್ಯತ್ವಾತ್ ಘಟವತ್ ಎಂಬ ಅನುಮಾನದಲ್ಲಿ ಕೃತಿಮಜ್ಜನ್ಯಂ ಎಂದಿಷ್ಟೇ ಸಾಧ್ಯಮಾಡಿದರೂ ಕ್ಷಿತ್ಯಂಕುರಾದ್ಯುತ್ಪಾದಪ್ರಯೋಜಕ-ಕೃತಿಮತ್ತಯಾ ಈಶ್ವರ ಸಿದ್ಧಿ ಆಗುತ್ತಿದ್ದರೂ ಜ್ಞಾನ ಚಿಕೀರ್ಷಾಗಳನ್ನು ಸೇರಿಸಿದ್ದು ಜ್ಞಾನಚಿಕೀರ್ಷಾಕೃತಿಮತ್ವೇನ ಈಶ್ವರಪ್ರತೀತಿಯು ಉದ್ದೇಶವಾಗಿರು- ವದರಿಂದ ಉದ್ದೇಶ ಪ್ರತೀತ್ಯರ್ಥವಾಗಿ ಸಾರ್ಥಕವೆಂದು ಸಮಾಧಾನ ಹೇಳಿರುವರು. ಅಂತೂ ಮೇಲೆ ಹೇಳಿದ ಅನುಮಾನ(ಯುಕ್ತಿ)ಗಳಿಂದ ನಿನ್ನಲ್ಲಿಯೂ ನಿನ್ನ ದೇಹದಲ್ಲಿಯೂ ಭಗವತ್ಸ್ವಾಮಿಕತ್ವವನ್ನು ಅನುಸಂಧಾನ ಮಾಡುವ ನಿನಗೆ ತಕ್ಷಕನು ಕಚ್ಚಿದರೂ ದೋಷವೆಂದಾಗಲಾರದು. 'ಆತ್ಮೇತ್ಯುಪಾಸನಂ ಕಾರ್ಯಂ ಸರ್ವದೈವ ಮುಮುಕ್ಷುಭಿಃ । ನಾನಾಕ್ಲೇಶಸಮಾಯುಕ್ತೋಪ್ಯೇತಾವನ್ನೈವ ವಿಸ್ಮರೇತ್ । ಸರ್ವೋತ್ಕೃಷ್ಟೋಽಯಮವ್ಯೈವೇಕಃ ಸ್ತದೀಯೋಽಹಂ ಸ ಮೇ ಪತಿಃ । ಮಮ ಸ್ವಾಮಿ ಹರಿರ್ನಿತ್ಯಂ ಸರ್ವಸ್ಯ ಪತಿರೇವ

ಚ'' ಮುಂತಾದ ಪ್ರಮಾಣಾನುಸಾರ ಈ ರೀತಿ ವ್ಯಾಖ್ಯಾನಸಿದ್ಧೇವೆ ಎನ್ನುತ್ತಾರೆ ಶ್ರೀಸತ್ಯಧರ್ಮತೀರ್ಥಶ್ರೀಪಾದಂಗಳವರು.

**ಮೃತ್ಯವೋ ನೋಪಸರ್ಪಂತೀ ಮೃತ್ಯೂನಾಂ ಮೃತ್ಯುಮೀಶ್ವರಮ್ ।**
**ಅಹಂ ಬ್ರಹ್ಮ ಪರಂಧಾಮ ಬ್ರಹ್ಮಾಹಂ ಪರಮಂ ಪದಮ್ ॥ ೫೪ ॥**

ಮೃತ್ಯೂನಾಂ ಮೃತ್ಯುಂ=ಮೃತ್ಯುವಿಗೂ ಮಾರಕನಾದ ಈಶ್ವರಂ=ಸ್ವಾಮಿಯಾದ ಉಪ=ಪರಮಾತ್ಮನ ಸಮೀಪದಲ್ಲಿ ಸ್ಥಿತಂ=ಇರುವ ನಿನ್ನನ್ನು ನ ಸರ್ಪಂತಿ= ಹೊಂದುವದಿಲ್ಲ ಮತ್ತು ದೋಷ ಬರದಿರಲು ಬೇರೆ ಉಪಾಯ ಹೇಳುವರು. ಅಹಂ= (ನ ಹನ್ಯತೇ ಇತಿ ಅಹಂ, ನ ಹೀಯತೇ ಇತಿ ವಾ, ಕದಾಪಿ ನ ಜಹಾತಿ ಸ್ವಶಕ್ತಿಂ ಇತಿ ವಾ ।) ಕೊಲ್ಲಲ್ಪಡದಿರುವದರಿಂದ ತ್ಯಜಿಸಲ್ಪಡದಿರುವದರಿಂದ ತನ್ನ ಶಕ್ತಿಯನ್ನು ಬಿಡದಿರುವದರಿಂದ ಅಹ ಎನಿಸುವ ಬ್ರಹ್ಮ=ಗುಣಪೂರ್ಣನಾದ ಪರಮಾತ್ಮನು ಪರಂಧಾಮ=ಮುಖ್ಯಆಶ್ರಯನು ಪರಮಂ ಪದಂ=ಮುಖ್ಯಗಮ್ಯನು ಎಂದು ಧ್ಯಾನ ಮಾಡಬೇಕು ಎಂದು ಭಾವ.

**ಏವಂ ಸಮೀಕ್ಷ್ಯ ಚಾತ್ಮಾನಮಾತ್ಮನ್ಯಾಧಾಯ ನಿಷ್ಕಲೇ ॥ ೫೫ ॥**

ಏವಂ ಈ ರೀತಿ ತ್ವಂ=ನೀನು ಆತ್ಮಾನಂ=ನಿನ್ನನ್ನು ನಿಷ್ಕಲೇ=ಸ್ವ ಭಿನ್ನಾಂಶ ರಹಿತನಾದ ಆತ್ಮನಿ=ಪರಮಾತ್ಮನಲ್ಲಿ ಆಧಾಯ=ಅವನೇ ಆಶ್ರಯನೆಂದು ಸಮೀಕ್ಷ್ಯ=ಚಿಂತಿಸಿ

**ದಶಂತಂ ತಕ್ಷಕಂ ಪಾದೇ ಲೇಲಿಹಾನಂ ವಿಷಾನನೈಃ ।**
**ನದ್ರಕ್ಷ್ಯಸಿ ಶರೀರಂ ಚ ವಿಶ್ವಂ ಚ ಪೃಥಗಾತ್ಮನಃ ॥ ೫೬ ॥**

ಪಾದೇ=ಕಾಲಿನಲ್ಲಿ ದಶಂತಂ=ಕಚ್ಚುವ(ಇದರಿಂದ ಶೃಂಗಿಯು ಕಾಲಿಗೆ ಕಚ್ಚಲಿ ಎಂದು ಶಾಪ ಕೊಟ್ಟಿದ್ದನು ಎಂಬುದು ತಿಳಿಯುವದು.) ವಿಷಾನನೈಃ=ವಿಷಪೂರಿತವಾದ ಮುಖದಿಂದ ಲೇಲಿಹಾನಂ=ಆಸ್ವಾದಿಸುವ ಶರೀರಂ=ಶರೀರವನ್ನು ನ ದ್ರಕ್ಷ್ಯಸಿ= ನೋಡಲಾರೆ.(ಸರ್ಪವನ್ನು ನೋಡಲಾರೆ ಎಂದು ವಿಜಯಧ್ವಜರು.)ಅಭಿಮಾನ- ವಿಲ್ಲದಿರುವದರಿಂದ ವಿಶ್ವಂ ಚ=ಜಗತ್ತನ್ನು ಆತ್ಮನಃ ಪೃಥಕ್=ಪರಮಾತ್ಮನ ಅಧೀನವಲ್ಲ ಎಂದು ನ ದ್ರಕ್ಷ್ಯಸಿ=ತಿಳಿಯಲಾರೆ. ಅಂದರೆ ತಕ್ಷಕನು ನನ್ನನ್ನು ಅಧೋಕ್ಷಜನ ಆಜ್ಞೆಯಿಂದಲೇ ದಕ್ಷಿಸುವದು.(ಕಚ್ಚುವುದು) ಎಂದು ಈ ಕ್ಷಣವೇ (ತಿಳಿಯುವದೇ) ತದನೀಕ್ಷಣಂ=ಸರ್ಪವನ್ನು ನೋಡದಿರುವದು ಎಂಬ ಅಭಿಪ್ರಾಯದಿಂದ ನ ದ್ರಕ್ಷಸಿ ಎಂದಿರುವರು.

**ಏತತ್ ತೇ ಕಥಿತಂ ತಾತ ಯಥಾ ತ್ವಂ ಪೃಷ್ಟವಾನ್ ನೃಪ ।**
**ಹರೇರ್ವಿಶ್ವಾತ್ಮನಶ್ಚೇಷ್ಟಾಂ ಕಿಂ ಭೂಯ ಶ್ರೋತುಮಿಚ್ಛಸಿ ॥ ೫೭ ॥**

ಹೇ ನೃಪ=ಎಲೋ ರಾಜನೇ ವಿಶ್ವಾತ್ಮನಃ ಹರೇಃ=ಜಗದಂತರ್ಯಾಮಿಯಾದ ಶ್ರೀಹರಿಯ ಚೇಷ್ಟಾಂ ಉದ್ದಿಶ್ಯ=ವ್ಯಾಪಾರಗಳ ವಿಷಯದಲ್ಲಿ ಯಥಾ ತ್ವಂ ಪೃಷ್ಟವಾನ್ ಅಸಿ=ನೀನು ಏನು ಕೇಳಿದೆಯೋ ಅದಕ್ಕೆ ಉತ್ತರವು ತೇ=ನಿನಗೆ ಕಥಿತಂ=ಹೇಳಲ್ಪಟ್ಟಿದೆ. ಕಿಂ ಭೂಯಃ ಶ್ರೋತುಂ ಇಚ್ಛಸಿ=ಇನ್ನೇನು ಕೇಳಬೇಕೆಂದು ಇಚ್ಛಿಸುವಿ. ಅಂದರೆ ಶ್ರೀಹರಿಯ ಚರಿತ್ರವನ್ನೇ ಪುನಃ ಕೇಳುವಿಯೋ ಅಥವಾ ಅದಕ್ಕೆ ಉಪಯುಕ್ತವಾದ ಬೇರೆ ಏನಾದರೂ ಕೇಳಲು ಇಚ್ಛಿಸುವಿಯೋ ಎಂದರ್ಥ.

**ಇಲ್ಲಿ ಸತ್ಯಧರ್ಮತೀರ್ಥರ ಅಭಿಪ್ರಾಯ ಹೀಗಿದೆ.**

'ತ್ವಂ ಚ ರಾಜನ್' (೪೫ನೇ ಶ್ಲೋಕ) ಎಂದು ಆರಂಭ ಮಾಡಿ ಜೀವನ ಪ್ರಕರಣವೇ ನಡೆದಿದ್ದು ಮಧ್ಯದಲ್ಲಿ 'ಆಕಾಶ ಇವ ಚಾಧಾರಃ' ೫೨ನೇ ಶ್ಲೋಕದಲ್ಲಿ ಪರಮಾತ್ಮನನ್ನು ಹೇಳುವದೇಕೆ ಎಂಬ ಶಂಕೆಗೆ ೫೨ನೇ ಶ್ಲೋಕವನ್ನೂ ಜೀವನ ಪರವಾಗಿ ವ್ಯಾಖ್ಯಾನಿಸುತ್ತೇವೆ ಎಂದು ಹೇಳಿ ಈ ರೀತಿ ವ್ಯಾಖ್ಯಾನ ಮಾಡಿದ್ದಾರೆ. ('ಆಕಾಶೇ ಏವ ತದೋತಂ ಪ್ರೋತಂ ಚ' ಎಂದಿರುವದರಿಂದಆಕಾಶ ಶಬ್ದವಾಚ್ಯನಾದ ಶ್ರೀಹರಿಯಲ್ಲಿ ಎಲ್ಲವೂ ಹಾಸುಹೊಕ್ಕಾಗಿದೆ ಎಂದು ಹೇಳುವಂತೆ)ಆಕಾಶವತ್ ಧ್ರುವಃ=ಜೀವನು ಆಕಾಶದಂತೆ ಸ್ವಯಂ ನಿತ್ಯನು 'ಶಾಶ್ವತಃ ಸದೈಕರೂಪಃ'ಎಂದು ಹೇಳಿರುವರು. ನಾನಾ ಮಿತಃ=ತನ್ನ ಕರ್ಮಾನುಸಾರ ಅನೇಕ ಯೋನಿಗಳಲ್ಲಿ ಜನಿಸಿದವನೆಂದು ಪ್ರಸಿದ್ಧನು ಆಧಾರಃ=ಇಂದ್ರಿಯಗಳಿಗೆ ಆಶ್ರಯನು. ಆತ್ಮಸ್ಥಂ=ಜೀವರ ಸಮೂಹದಲ್ಲಿ ಸೇರಿದ ತನ್ನನ್ನು ಏವಂ ಆತ್ಮನಾ=ಈ ರೀತಿ ಪ್ರಯತ್ನದಿಂದ (ಅನುಮಾನಗರ್ಭಿಣ್ಯಾಬುಧ್ಯಾ ಯುಕ್ತಿಯುಕ್ತವಾದ ಜ್ಞಾನದಿಂದ) 'ನಾನು ನನ್ನ ಕರ್ಮಾಧೀನಗಳಾದ ನಾನಾದೇಹಗಳಿಂದ ಕೂಡಿದವನಿಂದ ಅಭಿನ್ನನು. ಹೇಗೆಂದರೆ ಕೌಮಾರಾದ್ಯವಸ್ಥಾ ವಿಶಿಷ್ಟ ಆತ್ಮನಂತೆ. ಗೀತೆಯಲ್ಲಿ ತಿಳಿಸಿದಂತೆ 'ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ । ತಥಾ ದೇಹಾಂತರಪ್ರಾಪ್ತಿಃ ಧೀರಃ ತತ್ರ ನ ಮುಹ್ಯತಿ' । ಎಂದು. ಯಥಾ ಕೌಮಾರಾದಿಶರೀರಭೇದೇಽಪಿ ದೇಹೀ ತದೀಕ್ಷಿತಾ ಸಿದ್ಧಃ । ಏವಂ ದೇಹಾಂತರ ಪ್ರಾಪ್ತಾವಪಿ ಈಕ್ಷಿತೃತ್ವಾತ್' ಗೀತಾಭಾಷ್ಯ ಪ್ರಮೇಯದೀಪಿಕಾದಿಗಳಿಂದ ವಿಸ್ತಾರ ತಿಳಿಯಬಹುದು. ವಿಮೃಶ=ವಿಚಾರ ಮಾಡು. ವಾಸುದೇವಾನುಚಿಂತನದಿಂದ ಸಹಿತನಾದ ನಿನ್ನನ್ನು ಮತ್ತು ಅನುಮಾನಗರ್ಭಿಣ್ಯಾ ಎಂದರೆ 'ಓಂಅನವಸ್ಥಿತೇರ-

ಸಂಭವಾಚ್ಚ ನೇತರಃ ಓಂ' ಓಂ ಇತರ ವ್ಯಪದೇಶಾದ್ಧಿತಕರಣಾದಿದೋಷಪ್ರಸಕ್ತಿಃ ಓಂ' ಮುಂತಾದ ಯುಕ್ತಿಗಳು ಇತರರನ್ನು ಅಪೇಕ್ಷಿಸದೆ ವಾಸುದೇವನನ್ನು ಅಪೇಕ್ಷಿಸುವದಕ್ಕೆ ಹೇತುಗಳು ಯಾವ ಬುದ್ಧಿಯು ಗರ್ಭದಲ್ಲಿದೆಯೋ ಅದರಿಂದ ಉಂಟಾದ ವಾಸುದೇವಾನುಚಿಂತನದಿಂದ ಸಹಿತನಾದ ಸ್ವ ಅಸ್ವಾತಂತ್ರ್ಯ ಶ್ರೀಹರಿಯ ಸ್ವಾತಂತ್ರ್ಯ ದೇಹಾನಿತ್ಯತ್ವ ಜ್ಞಾನವುಳ್ಳ ನಿನ್ನನ್ನು ಬ್ರಾಹ್ಮಣಪುತ್ರನಿಂದ ಪ್ರೇರಿತನಾದರೂ ತಕ್ಷಕನು ಕಚ್ಚಲಾರನು. ಅಂದರೆ ಅವನು ಕಚ್ಚಿದ ನಿಮಿತ್ತ ದುರ್ಮರಣ ಪ್ರಯುಕ್ತ ಪಾಪವನ್ನು ಹೊಂದುವವನು ಆಗುವುದಿಲ್ಲ.

ಶುಕಮುನಿಗಳೇ ಮರಣವೇ ಬರದಂತೆ ಶಿಷ್ಯನ ಮೇಲೆ ಅನುಗ್ರಹ ಮಾಡಿ ಎಂದರೆ ಹೇಳುತ್ತಾರೆ. ಅದು ಸಾಧ್ಯವಿಲ್ಲವೆಂದು

ಮೃತ್ಯುನಾ ಮೃತ್ಯುಂ ಈಶ್ವರಂ=ಯಮನಿಗೂ ಮಾರಕನಾದ ನಿಯಾಮಕನಾದ ಪರಮೇಶ್ವರನಾದ ಶ್ರೀಹರಿಯನ್ನು ಮಾತ್ರ ಮೃತ್ಯವಃ ನ ಉಪಸರ್ಪಂತಿ=ಮೃತ್ಯುಗಳು ಸಮೀಪಿಸಲಾರವು. ಅವನನ್ನು ಬಿಟ್ಟು ಬೇರೆಯವರು ಅವನಂತಲ್ಲ ಕಾರಣ ಮೃತ್ಯುವು ತಪ್ಪಿದ್ದಲ್ಲ. ಅವನ ಅನುಚಿಂತನದಿಂದ ಪಾಪವು ಮಾತ್ರ ತಡೆಯಲ್ಪಡಬಹುದು ಎಂದು ಭಾವ. 'ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋ ಮುಖಂ । ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಮ್' ಎಂದು ನೃಸಿಂಹ ಮಂತ್ರವಿದೆ. ಅಥವಾ ಈಶ್ವರಂ=ಈಶ್ವರಃ ಅಸ್ಯಅಸ್ತೀತಿ ಈಶ್ವರಃ ತಂ (ಅರ್ಶಾದ್ಯಚ್ ಪ್ರತ್ಯಯಾಂತ) ಹೀಗೆ ಮಾಡಿದಾಗ ನಿಯಾಮಕ ಈಶ್ವರ ವಿಶಿಷ್ಟನಾದ ನಿನ್ನನ್ನು ಎಂದರ್ಥ. ಈಗ ಮೃತ್ಯುಮೃತ್ಯುಂ ಎಂಬುದು ವಿಶೇಷ್ಯದಲ್ಲಿ ಬಾಧಿತವಾದ್ದರಿಂದ ವಿಶೇಷಣನಾದ ಈಶ್ವರ ಪದಾರ್ಥದಲ್ಲಿ ಅನ್ವಿತವಾಗುವದು. ಮೃತ್ಯುಮೃತ್ಯುವಾದ ಈಶ್ವರನುಳ್ಳ ಅಂದರೆ ಈಶ್ವರ ಸ್ವಾಮಿಕನಾದ ನಿನ್ನನ್ನು ಮೃತ್ಯವಃ ನೋಪಸರ್ಪಂತಿ ದುರ್ಮರಣ ಫಲ ಕೊಡಲಾರವು.

॥ ಇಲ್ಲಿಗೆ ನಾಲ್ಕನೇ ಅಧ್ಯಾಯವು ಸಮಾಪ್ತವಾಯಿತು ॥

## ಅಥ ಪಂಚಮೋಽಧ್ಯಾಯಃ

**ಸಾರಾಂಶ**

ಶೌನಕರೇ ಕೇಳಿರಿ ವ್ಯಾಸರ ಪುತ್ರರಾದ ಶುಕಾಚಾರ್ಯರ ಮಾತನ್ನು ಕೇಳಿ ವಿಷ್ಣುವಿನಿಂದ ರಕ್ಷಿತನಾದ ಪರೀಕ್ಷಿತನು ಅವರ ಪಾದಗಳಿಗೆ ತಲೆಬಾಗಿ ನಮಸ್ಕರಿಸುವವನಾಗಿ ಹೀಗೆ ಪ್ರಾರ್ಥಿಸುವನು.

ಶುಕಾಚಾರ್ಯರೇ ಆದ್ಯಂತ ರಹಿತನಾದ ಶ್ರೀಹರಿಯ ಮಹಿಮೆಗಳನ್ನು ತಮ್ಮ ಮುಖದಿಂದ ತಿಳಿದು ನಾನು ಕೃತಾರ್ಥನಾಗಿದ್ದೇನೆ. ಭಗವತ್ಪರಾಯಣರಾದ ಭಕ್ತರಲ್ಲಿ ದಯೆತೋರುವ ತಮ್ಮಂತಹವರು ಸಂಸಾರದಲ್ಲಿಯೇ ಮುಳುಗಿ ಮುಳುಗಿ ಏಳುತ್ತಿರುವ ನನ್ನಂತಹವರಿಗೆ ಅನುಗ್ರಹವನ್ನು ಮಾಡುತ್ತಿರುವದು ಸಹಜವೇ ಸರಿ. ನಿಮ್ಮ ಅನುಗ್ರಹದಿಂದ ಭಗವಂತನ ಗುಣಾನುವರ್ಣನರೂಪವಾದ ಶ್ರೀಮದ್ಭಾಗವತ ಪುರಾಣವನ್ನು ಸವಿಸ್ತಾರವಾಗಿ ಕೇಳುವಂತಾಯಿತು. ಇನ್ನು ಕೇಳತಕ್ಕದ್ದು ಮತ್ತೇನಿದೆ ? ಪರಬ್ರಹ್ಮನ ಚಿಂತನೆಯಲ್ಲಿ ತೊಡಗಿರುವ ನಾನು ತಕ್ಷಕನೇ ಮೊದಲಾದವರಿಗೆ ಭಯಪಡಲಾರೆ.

ನಿಮ್ಮ ಉಪದೇಶದಂತೆ ನಾನು ನನ್ನ ಮಾತನ್ನು ನಿಲ್ಲಿಸಿ, ಕಾಮಾದಿಗಳನ್ನು ಗೆದ್ದು ಮನಸ್ಸನ್ನು ಭಗವಂತನಲ್ಲಿ ಇಟ್ಟು ಪ್ರಾಣವನ್ನು ತೊರೆಯುತ್ತೇನೆ. ಇದಕ್ಕೆ ತಾವು ಅನುಮತಿ ನೀಡಿರಿ. ಪರೀಕ್ಷಿತನ ಈ ಪ್ರಾರ್ಥನೆಗೆ ಶುಕಾಚಾರ್ಯರು ಅನುಮತಿಯನ್ನು ನೀಡಿ ತಮ್ಮ ಶಿಷ್ಯರೊಂದಿಗೆ ಅಲ್ಲಿಂದ ತಮ್ಮ ಉದ್ದೇಶಿತ ಸ್ಥಳಕ್ಕೆ ಹೋದರು.

ಇತ್ತ ತಕ್ಷಕನು ಪರೀಕ್ಷಿತನನ್ನು ಕೊಲ್ಲುವ ಇಚ್ಛೆಯಿಂದ ಅವನನ್ನು ಸಮೀಪಿಸುತ್ತಿರುವಾಗಲೇ ಮಾರ್ಗಮಧ್ಯದಲ್ಲಿ ಕಶ್ಯಪನೆಂಬ ವಿಷವೈದ್ಯನನ್ನು ನೋಡಿದನು. ನಾನು ಕಚ್ಚಿದ ಮೇಲೆ ಮತ್ತೆ ಇವನು ಬದುಕಿಸಬಾರದು ಎಂದು

ಕಶ್ಯಪನಿಗೆ ಬಹಳಷ್ಟು ಹಣವನ್ನು ನೀಡಿ ಅವನು ರಾಜನ ಬಳಿ ಬರದಂತೆ ಹಿಂದಕ್ಕೆ ಕಳುಹಿಸಿದನು. ನಂತರ ತನಗೆ ಬೇಕಾದ ರೂಪವನ್ನು ಧರಿಸಲು ಶಕ್ತನಾದ ತಕ್ಷಕನು ರಾಜನ ಬಳಿ ಬಂದು ಅವನನ್ನು ಕಚ್ಚಿ ಹಾಕಿದನು.

ಮಹರ್ಷಿಗಳೇ ತಕ್ಷಕನು ಪರೀಕ್ಷಿತನನ್ನು ಕಚ್ಚುವ ಮೊದಲೇ ಅವನ ಆತ್ಮವು ವಾಸುದೇವನನ್ನು ಸೇರಿಬಿಟ್ಟಿದ್ದಿತು. ತಕ್ಷಕನು ಕೇವಲ ನಿರ್ಜೀವ ದೇಹವನ್ನು ಕಚ್ಚಿ ಎಲ್ಲರೂ ನೋಡುತ್ತಿದ್ದಂತೆ ರಾಜನ ಶರೀರವನ್ನು ಸುಟ್ಟು ಭಸ್ಮಗೊಳಿಸಿದನು.

ನಂತರ ಪರೀಕ್ಷಿದ್ರಾಜನ ಪುತ್ರನಾದ ಜನಮೇಜಯನು ತನ್ನ ತಂದೆಯನ್ನು ತಕ್ಷಕನು ಕಚ್ಚಿ ಕೊಂದನೆಂಬ ವಿಚಾರ ತಿಳಿದು ಅತ್ಯಂತ ಕ್ರುದ್ಧನಾದನು. ಸರ್ಪಸಂತತಿಯೇ ಇರಬಾರದೆಂದು ಶಪಥ ಮಾಡಿ ಸರ್ಪಯಾಗವನ್ನು ಮಾಡುವ ಬ್ರಾಹ್ಮಣರೊಂದಿಗೆ ಸಮಾಲೋಚಿಸಿದನು. ಸರ್ಪಯಾಗದ ಅಗ್ನಿಕುಂಡದಲ್ಲಿ ಸಮಸ್ತ ಸರ್ಪಗಳು ಬಂದು ಬೀಳುವಂತೆ ಮಂತ್ರಬಲದಿಂದ ಸೆಳೆದನು. ಹೀಗೆ ಅನೇಕ ಸರ್ಪಗಳನ್ನು ನಾಶಮಾಡಿದನು. ಇದನ್ನು ತಿಳಿದ ತಕ್ಷಕನು ಭಯದಿಂದ ಇಂದ್ರನಿಗೆ ಶರಣು ಬಂದನು. ಇಂದ್ರನಲ್ಲಿ ರಕ್ಷಣೆ ಪಡೆದ ತಕ್ಷಕನನ್ನು ಕರೆ ತರಲು ಸಹೇಂದ್ರಾಯ ತಕ್ಷಕಾಯ ಸ್ವಾಹಾ ಎಂದು ಮಂತ್ರ ಹೇಳಿ ಎಂದು ಋತ್ವಿಜರಿಗೆ ಆದೇಶಿಸಿದನು. ಯಾವಾಗ ಬ್ರಾಹ್ಮಣರು ರಾಜನ ಆದೇಶದಂತೆ ಸಹೇಂದ್ರಾಯ ತಕ್ಷಕಾಯ ಸ್ವಾಹಾ ಎಂದು ಮಂತ್ರ ಹೇಳಿ ಅಗ್ನಿ ಕುಂಡದಲ್ಲಿ ಆಹುತಿಯನ್ನು ಹಾಕಿದರೋ ಆಗ ಇಂದ್ರನ ವಿಮಾನವೂ ಸಹ ನಿಜಸ್ಥಾನದಿಂದ ಅಲ್ಲಾಡಲು ಆರಂಭಿಸಿತು. ಸ್ವಲ್ಪ ಸಮಯದಲ್ಲಿಯೇ ತಕ್ಷಕನೊಂದಿಗೆ ಇಂದ್ರನ ವಿಮಾನವು ಕೆಳಗೆ ಇಳಿಯಲು ಆರಂಭಿಸಿತು. ಇಂದ್ರ ಹಾಗು ತಕ್ಷಕರಿಬ್ಬರೂ ಸಂಭ್ರಾಂತರಾದರು. ಆ ಸಮಯದಲ್ಲಿ ಬೃಹಸ್ಪತ್ಯಾಚಾರ್ಯರು ಜನಮೇಜಯನನ್ನು ಸಂಬೋಧಿಸಿ ರಾಜನೇ ನೀನು ತಕ್ಷಕನನ್ನು ಸಂಹರಿಸುವದು ಉಚಿತವಲ್ಲ. ಅವನು ಅಮೃತಪಾನ ಮಾಡಿ ಅಜರಾಮರನಾಗಿರುತ್ತಾನೆ. ಸಕಲ ಕರ್ಮಗಳಿಗೆ ಫಲ ಕೊಡುವವನು ಭಗವಂತ. ನೀನು ಆರಂಭಿಸಿರುವ ಸರ್ಪಯಾಗವನ್ನು ನಿಲ್ಲಿಸು. ನೀನು ಮಾಡುತ್ತಿರುವ ಯಾಗ ಇದು ಭಗವತ್ಪ್ರೀತಿಕರವಾದದ್ದಲ್ಲ. ಯಾರೋ ಒಬ್ಬರು ಮಾಡಿದ ಪಾಪಕ್ಕೆ ಅನಪರಾಧಿ ಬಹುಜನರನ್ನು ಶಿಕ್ಷಿಸುವುದು ಅಪರಾಧವೇ ಸರಿ. ಇಲ್ಲಿಗೆ ನಿನ್ನ ಸರ್ಪಯಾಗವು ಮುಕ್ತಾಯಗೊಳ್ಳಲಿ ಎಂದು ನುಡಿದರು. ಈ ರೀತಿಯಾಗಿ ಬೃಹಸ್ಪತ್ಯಾಚಾರ್ಯರು ಹೇಳಿದ ಮಾತನ್ನು ಶಿರಸಾ ವಹಿಸಿ ಹಾಗೆ ಆಗಲಿ ಎಂದು ಸರ್ಪಯಾಗವನ್ನು ಅಲ್ಲಿಗೆ ನಿಲ್ಲಿಸಿ ಬೃಹಸ್ಪತ್ಯಾಚಾರ್ಯರನ್ನು ಗೌರವದಿಂದ ಕಳುಹಿಸಿಕೊಟ್ಟನು.

ಸೂತ ಉವಾಚ-

**ಏತನ್ನಿಶಮ್ಯ ಮುನಿನಾಭಿಹಿತಂ ಪರೀಕ್ಷಿದ್**
**ವ್ಯಾಸಾತ್ಮಜೇನ ನಿಖಿಲಾತ್ಮದೃಶಾ ಸಮೇನ ।**
**ತತ್ಪಾದಪದ್ಮಮುಪಸೃತ್ಯ ನತೇನ ಮೂರ್ಧ್ನಾ**
**ಬದ್ಧಾಂಜಲಿಸ್ತಮಿದಮಾಹ ಸ ವಿಷ್ಣುರಾತಃ ॥ ೧ ॥**

ನಿಖಿಲಾತ್ಮದೃಶಾ=ಪೂರ್ಣನಾದ ಪರಮಾತ್ಮನ ಜ್ಞಾನವುಳ್ಳ ಸಮೇನ=ಅನುತ್ತಮರಾದ ವ್ಯಾಸಾತ್ಮಜೇನ=ವೇದವ್ಯಾಸರ ಪುತ್ರರಾದ ಮುನಿನಾ=ಶುಕಾಚಾರ್ಯರಿಂದ ಅಭಿಹಿತಂ= ಹೇಳಲ್ಪಟ್ಟ ಅಭಿತಃ=ಸರ್ವರೀತಿಯಿಂದ ಹಿತರೂಪಂ=ಹಿತಕರವಾದ ಏತತ್=ಪುರಾಣವನ್ನು ನಿಶಮ್ಯ=ಕೇಳಿ ಪರೀಕ್ಷಿತ್‌ರಾಜನು ತತ್ಪಾದಪದ್ಮಂ=ಶುಕ ಮುನಿಗಳ ಪಾದಕಮಲವನ್ನು ಉಪಸೃತ್ಯ=ವಿನಯಪೂರ್ವಕ ಹೊಂದಿ ನತೇನ=ನಮ್ರವಾದ ಮೂರ್ಧ್ನಾ=ಶಿರಸ್ಸಿನಿಂದ (ತಲೆಬಾಗಿ) ಬದ್ಧಾಂಜಲಿಃ=ಕೈ ಜೋಡಿಸಿದವನಾಗಿ ಸಃ ವಿಷ್ಣುರಾತಃ=ಪರೀಕ್ಷಿತರಾಜನು ತಂ=ಶುಕಾಚಾರ್ಯರನ್ನು ಕುರಿತು ಇದಂ=ಮುಂದೆ ಹೇಳುವ ಮಾತನ್ನು ಆಹ=ಹೇಳಿದನು.

**ವಿಶೇಷ-** ಅಶನವ್ಯಸನದಿಂದ ಮೇಲೆದ್ದು ನಮಸ್ಕಾರಾದಿಗಳನ್ನು ಮಾಡದೇ ಇರಲಿಲ್ಲವೆಂದೂ ಸೂಚಿಸಲು **ನತೇನ** ಎಂಬ ಆರೋಹಾವರೋಹವಿಷಯಾರ್ಥಕ ಶಬ್ದ ಪ್ರಯೋಗ ಮಾಡಿರುವರು. ನಮು ಪ್ರಹ್ವೀಭಾವೇ ಎಂದಿರುವದರಿಂದ ನತ ಎಂದರೆ ಬಾಗಿದವ ಎಂದರ್ಥ. (ಅನತ)ಬಾಗದಿರುವ ಸ್ಥಿತಿ ಉಳ್ಳವನಾದರೂ ಉಪವಾಸ ಪ್ರಭಾವದಿಂದ ಸುಮ್ಮನೆ ಕೂಡಲಿಲ್ಲ ಎಂದು ಭಾವ.

ಪರೀಕ್ಷಿತ ಉವಾಚ-

**ಸಿದ್ಧೋಽಸ್ಮ್ಯನುಗೃಹೀತೋಽಸ್ಮಿ ಭವತಾ ಕರುಣಾತ್ಮನಾ ।**
**ಶ್ರಾವಿತೋ ಯಚ್ಚ ಮೇ ಸಾಕ್ಷಾದನಾದಿನಿಧನೋ ಹರಿಃ ॥ ೨ ॥**

ಯತ್=ಯಾವ ಕಾರಣ ಕರುಣಾತ್ಮನಾ=ಕೃಪಾಯುಕ್ತವಾದ ಮನಸ್ಸುಳ್ಳ ಭವತಾ= ತಮ್ಮಿಂದ ಅನಾದಿನಿಧನಃ=ಉತ್ಪತ್ತಿನಾಶ ರಹಿತನಾದ ಸಾಕ್ಷಾತ್‌ಹರಿಃ=ಪರಮಾತ್ಮನು ಶ್ರಾವಿತಃ=ಉಪದೇಶಿಸಲ್ಪಟ್ಟಿರುವನು ತತಃ=ಆದ್ದರಿಂದ ಸಿದ್ಧೋಽಸ್ಮಿ=ಕೃತಕೃತ್ಯನಾಗಿದ್ದೇನೆ. (ಪುರುಷಾರ್ಥ ನಿಶ್ಚಿತವಾಗಿದೆ.)ಅನುಗೃಹೀತಃ=ಅನುಗ್ರಹಿಸಲ್ಪಟ್ಟಿರುವೆನು.

**ವಿಶೇಷ-** ಅನಾದಿನಿಧನೋ ಹರಿಃ ಎನ್ನುವಲ್ಲಿ ಅನಾದಿನಿಧನಃ ಅಹಃ ಇಃ ಎಂದು ಪದ ವಿಭಾಗ ಮಾಡಿ ಹೀಗೂ ಒಂದು ಅರ್ಥ ಮಾಡುವರು. ನನ್ನಲ್ಲಿ ಈ ವಿಧವಾದ ಲೋಕೋತ್ತರ ವಿಶೇಷವು ಬಂದದ್ದು ನಿನ್ನಲ್ಲಿ ಲೋಕೇಶ್ವರತ್ವಸಿದ್ಧವಾದ್ದರಿಂದಲೇ ಎಂದೂ ಹೇಳುವರು. ಸಾಕ್ಷಾತ್=ಪ್ರೇಕ್ಷಾವಂತರ ಪ್ರತ್ಯಕ್ಷದಿಂದ ತವ=ನಿನಗೆ ಯತಃ=ಯಾವಕಾರಣ ಲೋಕೇಶ್ವರತ್ವ ಇರುವುದರಿಂದಲೇ ಇಷ್ಟು ಭಾಗ್ಯವು ನನಗೆ ಬಂದಿದೆ. ಇಃ=ನನ್ನ ಕಾಮನೆಯು ಯತ್=ಯಾವುದರಲ್ಲಿ ಇತ್ತೋ ತತ್=ಅಂತಹ ಅಹಃ=ಮೋಕ್ಷವು ಸಿಗುವಂತಾಗಿದೆ. ತತಃ=ಆದ್ದರಿಂದ ಸಿದ್ಧನಾಗಿದ್ದೇನೆ. 'ಅಹರ್ಮೋಕ್ಷಃ ಸಮುದ್ದಿಷ್ಟಂ ಜ್ಞಾನಂ ಚ ಕ್ವಚಿದೀರ್ಯತೇ' ಎಂದು ಬೃಹದ್ಭಾಷ್ಯದಲ್ಲಿದೆ.

**ನಾತ್ಯದ್ಭುತಮಿದಂ ಮನ್ಯೇ ಮಹತಾಮಚ್ಯುತಾತ್ಮನಾಮ್ ।**
**ದೀನೇಷು ತಾಪತಪ್ತೇಷು ಭೂತೇಷು ಯದನುಗ್ರಹಃ** ॥ ೩ ॥

ತಾಪತಪ್ತೇಷು=ಸಂಸಾರದಿಂದ ತಪ್ತರಾದ ದೀನೇಷು=ದುಃಖಿತರಾದ ಭೂತೇಷು=ಪ್ರಾಣಿಗಳಲ್ಲಿ ಅಚ್ಯುತಾತ್ಮನಾಂ=ಭಗವದ್ಭಕ್ತರಾದ ಮಹತಾಂ=ದೊಡ್ಡವರ ಅನುಗ್ರಹಃ ಇತಿ ಯತ್=ಅನುಗ್ರಹವೇನಿದೆಯೋ ತತ್ ಇದಂ=ಇದು ನ ಅತ್ಯದ್ಭುತಂ=ಆಶ್ಚರ್ಯವೇನಲ್ಲ ಇತಿ ಮನ್ಯೇ=ಎಂದು ತಿಳಿಯುವೆನು. ಅದು ಅವರ ಸ್ವಭಾವವೆಂದು ಭಾವ.

**ವಿಶೇಷ-** ನನು ಭವತಾ ಮಮ ಭವತಾಪಾಪಾದಿತಾ ತರ್ಹಿ ಸಃ ಕ್ರೂರ ಇತಿ ಕಥಂ ತದಾತ್ಮನಃ ಮಮ ನಾತ್ಯದ್ಭುತಂ ಮನ್ಯೇ ಇತ್ಯುಚ್ಯತೇ ಇತ್ಯತಃ ಆಹ ಯದನುಗ್ರಹಃ ಇತಿ । ಪರೀಕ್ಷಿತನೇ ನೀನು ನನ್ನನ್ನು ರುದ್ರನೆಂದು ಹೇಳಿದಿ. ಅಂದ ಮೇಲೆ ಅವನಂತೆ (ಉಗ್ರ)ಕ್ರೂರನೆಂದಾಯಿತು. ಅನುಗ್ರಹ ಆಶ್ಚರ್ಯವಲ್ಲವೆಂದು ಹೇಗೆ ಹೇಳುವಿ ಎಂದರೆ ಉತ್ತರಿಸುವನು. ಹೀಗೆ ಅರ್ಥಮಾಡಿದ್ದರಿಂದ ಅನುಗೃಹಿತೋಽಸ್ಮಿ ಎಂಬುದರಿಂದ ಪುನರುಕ್ತಿಯಾಗಲಿ ಲಿಂಗವನ್ನು ರಕ್ಷಿಸುವದಕ್ಕಾಗಿ ಇತಿ ಶಬ್ದಾಧ್ಯಾಹಾರವನ್ನಾಗಲಿ ಮಾಡಬೇಕಿಲ್ಲ. ಯತ್ ತ್ವಂ ಅನುಗ್ರಹಃ ಹೀಯತೇ ಇತಿ ಹಃ (ಜಹಾತೇಃ ಘಜಯರ್ಥೇಕವಿಧಾನಮಿತಿ ಕಃ) (ಅಹೇಯತ್ವಾದಹಂ ನಾಮ ಎಂಬಂತೆ) ಉಗ್ರ ಇತಿ ಹಃ ತ್ಯಾಜ್ಯಃ ನ ಇತ್ಯನುಗ್ರಹಃ=ಅಂದರೆ ರುದ್ರನಾದರೂ ಉಗ್ರನೆಂದು ತ್ಯಾಜ್ಯನಲ್ಲ. ಇದರ ಅರ್ಥ ಉಗ್ರರಿಗೆ ಮಾತ್ರ ಉಗ್ರನೇ ಹೊರತು ಸಜ್ಜನರಿಗೆ ಉಗ್ರನಲ್ಲ ಎಂದು.

**ಪುರಾಣಸಂಹಿತಾಮೇತಾಮಶ್ರೌಷಂ ಭವತೋ ಹ್ಯಹಮ್ ।**
**ಯಸ್ಯಾಂ ಖಲೂತ್ತಮಶ್ಲೋಕೋ ಭಗವಾನನುವರ್ಣ್ಯತೇ** ॥ ೪ ॥

ಅಹಂ=ನಾನು ಭವತಃ=ತಮ್ಮಿಂದ ಯಸ್ಯಾಂ=ಯಾವುದರಲ್ಲಿ ಉತ್ತಮಶ್ಲೋಕಃ= ಬ್ರಹ್ಮಾದಿಗಳಿಂದ ಕೀರ್ತಿತನಾದ ಭಗವಾನ್=ಶ್ರೀಹರಿಯು ಅನುವರ್ಣ್ಯತೇ= ಪ್ರತಿಪಾದಿಸಲ್ಪಡುವನೋ ಏತಾಂ=ಈ ಪುರಾಣಸಂಹಿತಾಂ=ಶ್ರೀಮದ್ಭಾಗವತ ಸಂಹಿತೆಯನ್ನು ಅಶ್ರೌಷಂ=ಶ್ರವಣ ಮಾಡಿದೆನು ಖಲು=ನಿಶ್ಚಯ ಹಿ=ಆದ್ದರಿಂದ ಅನುಗೃಹೀತನು

**ವಿಶೇಷ-** ಖಲೂತ್ತಮಶ್ಲೋಕಃ ಎಂಬಲ್ಲಿ ಖಂ ಲುನಾತೀತಿ ಖಲು । ಸುಖನಾಶಕವಾದ ಉದ್ಗತಂ ತಮಃ ಯೇನ ಸಃ ಉತ್ತಮಃ । ಉತ್ತಮಃ ಶ್ಲೋಕಃ ಯಶಃ ಯಸ್ಯ ಸಃ ಅಜ್ಞಾನನಾಶಕಕೀರ್ತಿಯುಳ್ಳವನು. ಖಲೂತ್ತಮಶ್ಲೋಕಃ ಎಂಬುದು ಒಂದು ಪದವೆಂದು ಹೇಳಬಹುದು. ಸುಖನಾಶಕ ಅಜ್ಞಾನನಾಶಕವಾದ ಕೀರ್ತಿಯುಳ್ಳ ಭಗವಂತನೆಂದರ್ಥ.

*'ವಾಸುದೇವಾನುಚಿಂತಯಾ' ಎಂದು ನೀವು ಹೇಳಿದ ಉಪಾಸನೆಯ ಫಲವೇ ಇದು ಎಂದು ತಿಳಿಸುವರು.*

**ಭಗವನ್ ತಕ್ಷಕಾದಿಭ್ಯೋ ಮೃತ್ಯುಭ್ಯೋ ನ ಬಿಭೇಮ್ಯಹಮ್ ।**
**ಪ್ರವಿಷ್ಟೋ ಬ್ರಹ್ಮನಿರ್ವಾಣಮಭಯಂ ದರ್ಶಿತಂ ತ್ವಯಾ ॥ ೫ ॥**

ಹೇ ಭಗವನ್=ಪೂಜ್ಯರಾದ ಶುಕಾಚಾರ್ಯರೇ ತ್ವಯಾ=ನಿಮ್ಮಿಂದ ದರ್ಶಿತಂ= ತಿಳಿಸಲ್ಪಟ್ಟ ಅಭಯಂ=ಭಯರಹಿತನಾದ ನಿರ್ವಾಣಂ=ಪ್ರಾಕೃತ ಶರೀರ ರಹಿತನಾದ ಬ್ರಹ್ಮಪ್ರವಿಷ್ಟಃ=ಶ್ರೀಹರಿಯಲ್ಲಿ ಮನಸಿಟ್ಟವನಾದ್ದರಿಂದ ಅಹಂ=ನಾನು ತಕ್ಷಕಾದಿಭ್ಯಃ ಮೃತ್ಯುಭ್ಯಃ ಚ=ತಕ್ಷಕಾದಿಗಳಿಂದ ಬರುವ ಮರಣದಿಂದ ನ ಬಿಭೇಮಿ=ಹೆದರುವುದಿಲ್ಲ

*ಜನರು ನೋಡುವಂತೆ ಈ ರೀತಿ ಮಾಡುವೆನು ಎಂದು ಗುರುಗಳನ್ನು ಪ್ರಾರ್ಥಿಸುವರು.*

**ಅನುಜಾನೀಹಿ ಮಾಂ ಬ್ರಹ್ಮನ್ ವಾಚಂ ಯಚ್ಛಾಮ್ಯಧೋಕ್ಷಜೇ ।**
**ಮುಕ್ತಕಾಮಾಶಯಂ ಚೇತಃ ಪ್ರವೇಕ್ಷ್ಯೇ ವಿಸೃಜಾಮ್ಯಸೂನ್ ॥ ೬ ॥**

ಹೇ ಬ್ರಹ್ಮನ್=ಶುಕಾಚಾರ್ಯರೇ ವಾಚಂ=ವಾಗಿಂದ್ರಿಯವನ್ನು ಅಧೋಕ್ಷಜೇ= ಶ್ರೀಹರಿಯಲ್ಲಿ ಯಚ್ಛಾಮಿ=ಅವನ ಅಧೀನವೆಂದು ತಿಳಿಯುವೆನು ಮುಕ್ತಕಾಮಾಶಯಂ= ಬಿಡಲ್ಪಟ್ಟ ವಿಷಯಾಸಕ್ತವಾದ ಚೇತಃ=ಜಡಮನಸ್ಸನ್ನು(ಮುಕ್ತ್ವಾ=ಬಿಟ್ಟು) ಅಧೋಕ್ಷಜೇ ಪ್ರವೇಕ್ಷ್ಯೇ=ಶ್ರೀಹರಿಯಲ್ಲಿ ಪ್ರವೇಶಿಸುವೆನು ನಂತರ ಅಸೂನ್=ಪ್ರಾಣಗಳನ್ನು ವಿಸೃಜಾಮಿ=ಬಿಡುವೆನು ಅದಕ್ಕಾಗಿ ಮಾಂ=ನನ್ನನ್ನು ಅನುಜಾನೀಹಿ=ಅಪ್ಪಣೆ ಮಾಡಿರಿ.

*ಹನ್ನೆರಡು ವರ್ಷ ರಾಮಾಯಣ ಕೇಳಿ ರಾಮನು ಸೀತೆಗೆ ಏನಾಗಬೇಕು ಅಥವಾ ಸೀತೆಯು ರಾಮನಿಗೇನಾಗಬೇಕು ಎಂಬ ನೀತಿಯನ್ನು ಅನುಸರಿಸಿದವನು ನಾನಲ್ಲ ಎಂದು ರಾಜನು ಎಲ್ಲವನ್ನು ಸಂಗ್ರಹಿಸಿ ಹೇಳುವನು.*

**ಅಜ್ಞಾನಂ ಚ ನಿರಸ್ತಂ ಮೇ ಜ್ಞಾನವಿಜ್ಞಾನನಿಷ್ಠಯಾ ।**
**ಭವತಾ ದರ್ಶಿತಂ ಕ್ಷೇಮಂ ಪರಂ ಭಗವತಃ ಪದಮ್ ॥ ೭ ॥**

ಜ್ಞಾನವಿಜ್ಞಾನನಿಷ್ಠಯಾ=ಜ್ಞಾನಸಾಧನವೇದಾದಿಗಳು ಅವುಗಳಿಂದ ತಿಳಿಯಲ್ಪಡುವ ಬ್ರಹ್ಮನಲ್ಲಿ ನಿಷ್ಠವಾದುದರಿಂದ ಮೇ=ನನ್ನ ಅಜ್ಞಾನಂ=ಅಜ್ಞಾನವು ನಿರಸ್ತಂ=ನಾಶವಾಯಿತು. ಅದೂ ಕೂಡ ನನ್ನ ಸಾಮರ್ಥ್ಯದಿಂದಲ್ಲವೆಂದು ಹೇಳುವನು. ನಿತ್ಯದಲ್ಲೂ ಕ್ಷೇಮಂ=ಕ್ಷೇಮರೂಪವಾದ ಪರಂ=ಮೋಕ್ಷಪ್ರದವಾದ ಭಗವತಃ ಪದಮ್=ಭಗವಂತನ ಸ್ವರೂಪವು ಭವತಾ=ತಮ್ಮಿಂದ ದರ್ಶಿತಂ=ತಿಳಿಸಲ್ಪಟ್ಟಿತು. 'ಕ್ಷಮೋ ನಾ ಪ್ರಾಪ್ತರಕ್ಷಯಾ ಮೋಕ್ಷೇಪ್ಯಸ್ತೀತೀತಿ ಮಂಗಲೇ' ಎಂದು ಯಾದವಕೋಶವಿರುವದರಿಂದ ಮೋಕ್ಷಾದಿರೂಪಮಂಗಲಪ್ರದನು ಎಂದರ್ಥ.

ಸೂತ ಉವಾಚ –

**ಇತ್ಯುಕ್ತಸ್ತಮನುಜ್ಞಾಯ ಭಗವಾನ್ ಬಾದರಾಯಣಿಃ ।**
**ಜಗಾಮ ಭಿಕ್ಷುಭಿಸ್ಸಾಕಂ ನರದೇವೇನ ಪೂಜಿತಃ ॥ ೮ ॥**

ಇತ್ಯುಕ್ತಃ=ಈ ರೀತಿ ಪ್ರಾರ್ಥಿಸಲ್ಪಟ್ಟ ಭಗವಾನ್ ಬಾದರಾಯಣಿಃ=ಪೂಜ್ಯರಾದ ಶುಕಾಚಾರ್ಯರು ತಂ ಅನುಜ್ಞಾಯ=ಪರೀಕ್ಷಿತನಿಗೆ ಅಪ್ಪಣೆ ಇತ್ತು ನರದೇವೇನ= ಪರೀಕ್ಷಿತ ರಾಜನಿಂದ ಪೂಜಿತಃ=ನಮಸ್ಕಾರಾದಿಗಳಿಂದ ಪೂಜಿಸಲ್ಪಟ್ಟು ಭಿಕ್ಷುಭಿಃ ಸಾಕಂ= ಸಂನ್ಯಾಸಿಗಳೊಡನೆ ಜಗಾಮ=ಹೊರಟನು.

**ಪರೀಕ್ಷಿದಪಿ ರಾಜರ್ಷಿರಾತ್ಮನ್ಯಾತ್ಮಾನಮಾತ್ಮನಾ ।**
**ಸಮಾಧಾಯ ಪರಂ ದಧ್ಯಾವಸ್ಪಂದಾಸುರ್ಯಥಾತರುಃ ॥ ೯ ॥**

ರಾಜರ್ಷಿಃ=ರಾಜಋಷಿಯಾದ ಪರೀಕ್ಷಿದಪಿ=ಪರೀಕ್ಷಿತನೂ ಸಹ ಆತ್ಮನಿ=ಮನಸ್ಸಿನಲ್ಲಿ ಆತ್ಮನಾ=ಬಲದಿಂದ ಪರಮಾತ್ಮಾನಂ=ಸರ್ವೋತ್ತಮನಾದ ಭಗವಂತನನ್ನು ಸಮಾಧಾಯ=ಇಟ್ಟುಕೊಂಡು ಅಸ್ಪಂದಾಸುಃ=ಇಂದ್ರಿಯಗಳ ಕಿಂಚಿತ್ತು ಚಲನವಿಲ್ಲದೇ ಪರಂ ತರುಃ ಯಥಾ=ಟೊಂಗಗಳಿಲ್ಲದ ಮರದಂತೆ ದಧ್ಯೌ=ಧ್ಯಾನ ಮಾಡಿದನು.

**ವಿಶೇಷ-** ಇದರಿಂದ ಮೊಟ್ಟು ಮರವು ಗಾಳಿಯಿಂದ ಚಲಿಸದು ಎಂಬ ನಾಣ್ಣುಡಿಗೆ ಮೂಲ ಹೇಳಿದಂತಾಯಿತು. ಇಲ್ಲಿ ಅಸ್ಪಂದಾಸುರ್ಯಥಾತರುಃ ಎಂದದ್ದರಿಂದ ಹಿಂದೆ ವಾಸುದೇವಾನುಚಿಂತಯಾ ಎಂಬಲ್ಲಿಯೂ ವಾ ಅಸುದೇವಾನುಚಿಂತಯಾ ಎಂದು ವಿಭಾಗ ಮಾಡಿ ಇಂದ್ರಿಯನಿಯಾಮಕರಾದ ವಾಯುದೇವರ ಧ್ಯಾನವು ಕಟಾಕ್ಷೀಕೃತವಾಗಿದೆ ಎಂದು ತಿಳಿಯುವದು.

**ಪ್ರಾಕ್ಕೂಲೇ ಬರ್ಹಿಷ್ಯಾಸೀನೋ ಗಂಗಾಕೂಲ ಉದಙ್ಮುಖಃ |**
**ಬ್ರಹ್ಮಭೂತೋ ಮಹಾಯೋಗೀ ನಿಸ್ಸಂಗಶ್ಛಿನ್ನಸಂಶಯಃ || ೧೦ ||**

ಪ್ರಾಕ್ಕೂಲೇ=ಮೊದಲು ದಂಡೆಯ ನಂತರ ಇರುವ ಗಂಗಾಕೂಲೇ=ಗಂಗಾತೀರದಲ್ಲಿ ಬರ್ಹಿಷಿ=ಹಾಸಿದ ದರ್ಭಗಳಲ್ಲಿ ಉದಙ್ಮುಖಂ=ಉತ್ತರಾಭಿಮುಖವಾಗಿ ಆಸೀನಃ=ಕುಳಿತು ಬ್ರಹ್ಮಭೂತಃ=ಪರಮಾತ್ಮನಲ್ಲಿರುವವನಾಗಿ ನಿಸ್ಸಂಗಃ=ಫಲಾಪೇಕ್ಷಾರಹಿತನಾಗಿ ಛಿನ್ನಸಂಶಯಃ=ಸಂಶಯರಹಿತನಾಗಿ ಮಹಾಯೋಗಿ=ಪರಮಯೋಗಿಯಾದ ಪರೀಕ್ಷಿತನು ದಧ್ಯೌ=ಧ್ಯಾನ ಮಾಡಿದನು.

**ವಿಶೇಷ-** ಗಂಗಾಕೂಲೇ ಎನ್ನುವಲ್ಲಿ ಗಂಗಾ ಅಕೂಲಂ ಎಂದು ಪದಚ್ಛೇದ. ಗಂಗೆಯ ಕೂಲ ಎಂದರೆ ದಂಡೆ. ಆದರಿಂದ ಭಿನ್ನವಾದುದರಲ್ಲಿ (ದಂಡೆಯನ್ನು ಬಿಟ್ಟು) ಎಂದರ್ಥ. ನೀರಿನ ಮಧ್ಯದಲ್ಲಿರುವ ಪ್ರಾಸಾದದಲ್ಲಿ ಎಂದರ್ಥ. ''ಸಮಂತ್ರ್ಯಮಂತ್ರಿಭಿಶ್ಚೈವ ತಥಾಮಂತತತ್ವವಿತ್ । ಪ್ರಾಸಾದಂ ಕಾರಯಾಮಾಸ್ಯೈಕಂ ಸ್ಥಂಭಂ ಸುರಕ್ಷಿತಂ' ಎಂದು ಆದಿಪರ್ವ ಭಾರತದಲ್ಲಿ ಹೇಳಿದ್ದನ್ನು ಸ್ಮರಿಸಬಹುದು.

**ತಕ್ಷಕಪ್ರಹಿತೋ ವಿಪ್ರಾಃ ಕ್ರುದ್ಧೇನ ದ್ವಿಜಸೂನುನಾ ।**
**ಹಂತುಕಾಮೋ ನೃಪಂ ಗಚ್ಛನ್ ದದರ್ಶ ಪಥಿ ಕಾಶ್ಯಪಮ್ || ೧೧ ||**

ಹೇ ವಿಪ್ರಾಃ=ಬ್ರಾಹ್ಮಣರೇ ಕ್ರುದ್ಧೇನ=ಜಪಕ್ಕೆ ಕುಳಿತಿರುವ ತನ್ನ ತಂದೆಯ ಕೊರಳಲ್ಲಿ ಸತ್ತ ಹಾವನ್ನು ಹಾಕಿದುದರಿಂದ ಕುಪಿತನಾದ ದ್ವಿಜಸೂನುನಾ=ಶೃಂಗಿ ಎಂಬ ಮುನಿಪುತ್ರನಿಂದ ಪ್ರಹಿತಃ=ಶಾಪಕೊಟ್ಟದ್ದರಿಂದ ಕಳುಹಿಸಲ್ಪಟ್ಟ ತಕ್ಷಕಃ=ಈ ಹೆಸರಿನ ಸರ್ಪವು ನೃಪಂ=ರಾಜನನ್ನು ಹಂತುಕಾಮಃ=ಕೊಲ್ಲುವ ಇಚ್ಛೆಯಿಂದ ಗಚ್ಛನ್=ಹೋಗುವವನಾಗಿ ಪಥಿ=ಹಾದಿಯಲ್ಲಿ ಕಾಶ್ಯಪಂ ಅಪಶ್ಯತ್=ಕಶ್ಯಪಗೋತ್ರದಲ್ಲಿ ಜನಿಸಿದ ಒಬ್ಬನನ್ನು ದದರ್ಶ=ನೋಡಿದನು.

**ತಂ ತರ್ಪಯಿತ್ವಾ ದ್ರವಿಣೈರ್ನಿವರ್ತ್ಯ ವಿಷಹಾರಿಣಮ್ ।**
**ದ್ವಿಜರೂಪಪ್ರತಿಚ್ಛನ್ನಃ ಕಾಮರೂಪೋಽದಶನ್ನೃಪಮ್ ॥ ೧೨ ॥**

ವಿಷಹಾರಿಣಂ=ವಿಷ ಪರಿಹಾರಕನಾದ ತಂ=ಆ ಕಾಶ್ಯಪ ಬ್ರಾಹ್ಮಣನನ್ನು ದ್ರವಿಣೈಃ ತರ್ಪಯಿತ್ವಾ=ಹೇರಳವಾದ ಹಣದಿಂದ ತೃಪ್ತಿಪಡಿಸಿ ನಿವರ್ತ್ಯ=ತಿರುಗಿ ಕಳಿಸಿ ದ್ವಿಜರೂಪ ಪ್ರತಿಚ್ಛನ್ನಃ=ಮೊದಲು ಬ್ರಾಹ್ಮಣವೇಷದಲ್ಲಿ ಅಡಗಿದವನು ಕಾಮರೂಪಃ= ಇಚ್ಛೆಯಿಂದಲೇ ಒಂದು ಕೃಮಿಯ ರೂಪಧರಿಸಿದವನಾಗಿ ನೃಪಂ=ರಾಜನನ್ನು ಅದಶತ್= ಕಚ್ಚಿದನು.

**ವಿಶೇಷ-** ಆದಿಪರ್ವದ ಉಪಪರ್ವವೆನಿಸಿದ ಆಸ್ತಿಕೇಯ ಪರ್ವದಲ್ಲಿ ಹೇಳಿದ ಕಥೆಯನ್ನು ಅನುಸಂಧಾನ ಮಾಡಬೇಕು. ೨೨ನೇ ಅಧ್ಯಾಯ ೩೦ನೇ ಶ್ಲೋಕದಿಂದ ೨೩ನೇ ಅಧ್ಯಾಯ ೩೬ನೇ ಶ್ಲೋಕದ ವರೆಗೆ ಹೇಳಿದ ಕಥೆಯ ಸಾರವನ್ನು ಇಲ್ಲಿ ಸಂಕ್ಷಿಪ್ತವಾಗಿ ಕಾಣಬಹುದಾಗಿದೆ.

**ಕಥೆ ಹೀಗಿದೆ-** ತಕ್ಷಕನು ಪರೀಕ್ಷಿತನನ್ನು ಕಚ್ಚಿಸಾಯಿಸುವದಕ್ಕಾಗಿ ಬ್ರಾಹ್ಮಣ ವೇಷದಿಂದ ಹೊರಟಿದ್ದನು. ಆ ಸಮಾಚಾರವನ್ನು ತಿಳಿದ ಒಬ್ಬ ಕಶ್ಯಪ ಬ್ರಾಹ್ಮಣನು ಅವನನ್ನು ರಕ್ಷಿಸಲು ಹೊರಟನು ಮಾರ್ಗಮಧ್ಯದಲ್ಲಿ ಇಬ್ಬರಿಗೂ ಭೇಟಿಯಾಯಿತು. ಆಗ ತಕ್ಷಕನು ಬ್ರಾಹ್ಮಣನನ್ನು ಕೇಳಿದನು. ಬ್ರಾಹ್ಮಣನೇ ಎಲ್ಲಿ ಹೊರಟಿರುವಿ ಎಂದು. ಎಲೋ ಬ್ರಾಹ್ಮಣನೇ, (ತಕ್ಷಕನ) ಬ್ರಾಹ್ಮಣ ಕುವರನ ಶಾಪದಿಂದಾಗಿ ತಕ್ಷಕನು ಪರೀಕ್ಷಿತನನ್ನು ಭಕ್ಷಿಸುವನೆಂದು ಸಮಾಚಾರವಿದೆ ಅದನ್ನು ಕೇಳಿ ಪರೀಕ್ಷಿತನನ್ನು ಬದುಕಿಸಲು ಹೊರಟಿರುವೆನು. ಎಂದನು. ಈ ಮಾತನ್ನು ಕೇಳಿ ತಕ್ಷಕನು ನಾನೇ ಆ ತಕ್ಷಕನು ಬ್ರಾಹ್ಮಣನೇ ನನ್ನ ವಿಷವನ್ನು ವಿಷಮಗೊಳಿಸಲು ನೀನೇನು ವಿಷಮಾಕ್ಷನೇ ಅಥವಾ ವಾಯುದೇವನೇ ವ್ಯರ್ಥವಾಗಿ ಏಕೆ ಆಕಾಶರೂಮಂಥನ ಆಕಾಶ ಅಗಿದು ತಿನ್ನುವದು. ಮಾಡುವ ಪ್ರಯತ್ನ ಮಾಡುವಿ ಸುಮ್ಮನೆ ಹೋಗು ಎಂದನು. ಮತ್ತು ಹೇಳಿದನು ಒಂದು ವೇಳೆ ನಾನು ಮಹಾಸಮರ್ಥನೆಂಬ ವಿಶ್ವಾಸ ಇರುವದೇ ಆದರೆ ನಾನು ಈ ವಟವೃಕ್ಷವನ್ನು ಕಚ್ಚುವೆನು ಇದನ್ನು ಮೊದಲಿನಂತೆ ಮಾಡುನೋಡುವೆ ಎಂದನು.

ಆಗ ಬ್ರಾಹ್ಮಣನು ಆಗಲಿ ಕಚ್ಚು ಈ ಗಿಡವನ್ನು ಆಗ ನಿನ್ನ ಯೋಗ್ಯತೆ ತಿಳಿಯುವದು ಎಂದನು. ಸರಿ ಎಂದ ಸರ್ಪವು ಆ ಗಿಡವನ್ನು ಕಚ್ಚಿತು. ಗಿಡವು ಭಸ್ಮವಾಯಿತು. ಆಗ ಬ್ರಾಹ್ಮಣನು ಮಂತ್ರವನ್ನು ಹಾಕಿ ಮೊದಲಿನಂತೆ ಗಿಡವನ್ನು ಮಾಡಿದನು. ಅದನ್ನು ಕಂಡು ಆಶ್ಚರ್ಯ ಚಕಿತನಾದ ವಂಚಕನಾದ ತಕ್ಷಕನು ಅವನನ್ನು ಬದುಕಿಸುವದರಿಂದ

ನಿನಗೇನು ಪ್ರಯೋಜನ ಎಂದನು. ಹೇರಳ ಹಣ ಸಿಗುವದೆಂದನು ಬ್ರಾಹ್ಮಣ. ಆಗ ತಕ್ಷಕನು ಏಕೆ ಅಲ್ಲಿಯವರೆಗೆ ಹೋಗಿ ಬರುವ ಶ್ರಮ ಇಲ್ಲಿಯೇ ಅವನು ಕೊಡುವದಕ್ಕಿಂತ ಅಧಿಕ ಹಣ ಕೊಡುವೆ ತೆಗೆದುಕೊಂಡು ಹೋಗು ಅವನ ಆಯುಷ್ಯ ಮುಗಿದಿದೆ. ನಿನಗೇನು ಕೀರ್ತಿಯೂ ಬರುವುದಿಲ್ಲ ನಿನಗಾಗುವ ದುಃಖವಾದರೂ ಏನು ಎಂದನು. ಬ್ರಾಹ್ಮಣನು ಅವನ ಆಯುಷ್ಯ ಮುಗಿದಿರುವದನ್ನು ಜ್ಞಾನ ದೃಷ್ಟಿಯಿಂದ ತಿಳಿದು ಹಣ ಪಡೆದು ಹೊರಟು ಹೋದನು. ನಂತರ ತಕ್ಷಕನು ಅನೇಕ ಸರ್ಪಗಳಿಗೆ ಬ್ರಾಹ್ಮಣ ವೇಷದಿಂದ ಹಣ್ಣಗಳನ್ನು ತೆಗೆದುಕೊಂಡು ರಾಜನ ಬಳಿಗ ಹೋಗು ಎನ್ನಲು ಅವು ಆದರಂತೆ ಮಾಡಿದವು. ರಾಜನು ಅವುಗಳನ್ನು ಸ್ವೀಕರಿಸಿ ಮಂತ್ರಿಗಳಿಗೂ ಇತ್ತು ತಾನು ಒಂದು ಹಣ್ಣನ್ನು ಸ್ವೀಕರಿಸಿದನು. ಇವನು ತೆಗೆದ ಹಣ್ಣನಲ್ಲಿಯೇ ಸಣ್ಣ ಹುಳು ಕೆಂಪಾದ ಕಿರಿಯ ಕಣ್ಣನಿಂದ ಇದ್ದು ಹೊರ ಬಂದು ದೊಡ್ಡ ಸರ್ಪಾಕಾರ ತಾಳಿ ರಾಜನ ದೇಹವನ್ನು ಸುತ್ತಿ ಕಚ್ಚಿತು. ಆ ಹಣ್ಣ ಬೋರೆ ಹಣ್ಣೆಂದು ತಿಳಿಯಬಹುದು ಈಗಲೂ ಆ ತರಹದ ಹುಳಗಳು ಆದರಲ್ಲಿ ಇರುವವು.

*ಆ ವಿಷದ ಸಾಮರ್ಥ್ಯವನ್ನು ಹೇಳುವರು.*

**ಬ್ರಹ್ಮಭೂತಸ್ಯ ರಾಜರ್ಷೇರ್ದೇಹೋಽಹಿಗರಲಾಗ್ನಿನಾ ।**
**ಬಭೂವ ಭಸ್ಮಸಾತ್ ಸದ್ಯಃ ಪಶ್ಯತಾಂ ಸರ್ವದೇಹಿನಾಮ್ ॥ ೧೩ ॥**

ಸರ್ವದೇಹಿನಾಂ ಪಶ್ಯತಾಂ=ಅಲ್ಲಿರುವ ಎಲ್ಲ ಜನರೂ ನೋಡುತ್ತಿದ್ದಂತೆಯೇ ಬ್ರಹ್ಮಭೂತಸ್ಯ=ಶ್ರೀಹರಿ ಧ್ಯಾನಾಸಕ್ತನಾದ ರಾಜರ್ಷೇಃ=ರಾಜರ್ಷಿಯಾದ ಪರೀಕ್ಷಿತನ ದೇಹಃ=ದೇಹವು ಅಹಿಗರಲಾಗ್ನಿನಾ=ಸರ್ಪದ ವಿಷಾಗ್ನಿಯಿಂದ ಸದ್ಯಃ=ತಕ್ಷಣದಲ್ಲಿಯೇ ಭಸ್ಮಸಾತ್ ಬಭೂವ=ಬೂದಿಯಾಯಿತು.

**ಹಾಹಾಕಾರೋ ಮಹಾನಾಸೀದ್ ಭುವಿ ಖೇದಿಕ್ಷು ಸರ್ವತಃ ।**
**ವಿಸ್ಮಿತಾ ಅಭವನ್ ಸರ್ವೇ ದೇವಾಸುರನರಾದಯಃ ॥ ೧೪ ॥**

ಭುವಿ=ಭೂಮಿಯಲ್ಲಿ ಖೇ=ಆಕಾಶದಲ್ಲಿ ಸರ್ವತಃದಿಕ್ಷು=ಎಲ್ಲ ದಿಕ್ಕುಗಳಲ್ಲಿಯೂ ಮಹಾನ್ ಹಾಹಾಕಾರಃ ಆಸೀತ್=ಭಾರೀ ಹಾಹಾಕಾರ ಉಂಟಾಯಿತು. ಸರ್ವೇ=ಎಲ್ಲ ದೇವಾಸುರನರಾದಯಃ=ದೇವತೆಗಳು ದೈತ್ಯರು ಮನುಷ್ಯರೂ ವಿಸ್ಮಿತಾ ಅಭವನ್=ಏನಿದು ವಾಸುದೇವದಾಸರ ಮಾಹಾತ್ಮ್ಯವು ಮರಣವನ್ನೂ ತೃಣೀಕರಿಸಿದನು ಎಂದು ಆಶ್ಚರ್ಯ ಚಕಿತರಾದರು.

**ದೇವದುಂದುಭಯೋ ನೇದುಃ ಗಂಧರ್ವಾಪ್ಸರಸೋ ಜಗುಃ ।**
**ವವೃಕ್ಷುಃ ಪುಷ್ಪವರ್ಷಾಣಿ ವಿಬುಧಾ ಸಾಧುವಾದಿನಃ ॥ ೧೫ ॥**

ದೇವದುಂದುಭಯಃ=ದೇವತೆಗಳ ನಗಾರಿಗಳು ನೇದುಃ=ತಾವೇ ಧ್ವನಿ ಮಾಡಿದವು. ಗಂಧರ್ವಾಪ್ಸರಸಃ ಜಗುಃ=ಗಂ೧೧ಧರ್ವರು ಅಪ್ಸರೆಯರು ಗಾನಮಾಡಿದರು. ಸಾಧುವಾದಿನಃ ವಿಬುಧಾಃ=ಸಾಧು ಸಾಧು ಎಂದು ಹೇಳುವ ದೇವತೆಗಳು ಪುಷ್ಪವರ್ಷಾಣಿ ವವಕ್ಷುಃ=ಹೂಮಳೆಗರೆದರು.

**ಜನಮೇಜಯಃ ಸ್ವಪಿತರಂ ಶ್ರುತ್ವಾ ತಕ್ಷಕಭಕ್ಷಿತಮ್ ।**
**ಅಥಾಽಜುಹಾವ ಸಂಕ್ರುದ್ಧಃ ಸರ್ಪಾನ್ ಸತ್ರೇ ಸಹ ದ್ವಿಜೈಃ (ಮಹಾವಿಷಾನ್) ॥೧೬॥**

ಅಥ=ನಂತರ ಜನಮೇಜಯಃ=ಪರೀಕ್ಷಿತ ಪುತ್ರನಾದ ಜನಮೇಜಯರಾಜನು ಸ್ವಪಿತರಂ=ತನ್ನ ತಂದೆಯನ್ನು ತಕ್ಷಕಭಕ್ಷಿತಂ ಶ್ರುತ್ವಾ=ತಕ್ಷಕ ಕಚ್ಚಿ ಮೃತನಾದನೆಂದು ತಿಳಿದು ಸಂಕ್ರುದ್ಧಃ=ಕುಪಿತನಾಗಿ ಸತ್ರೇ=ಸರ್ಪಯಾಗದಲ್ಲಿ ದ್ವಿಜೈಃಸಹ=ಚಂಡ ಭಾರ್ಗವ ಮುಂತಾದ ಬ್ರಾಹ್ಮಣರಿಂದ ಕೂಡಿಕೊಂಡು ಸರ್ಪಾನ್ ಆಜುಹಾವ=ಸರ್ಪಗಳನ್ನು ಹೋಮ ಮಾಡಿಧನು. ಅವುಗಳ ಹೆಸರು ಮಹಾಭಾರತದಲ್ಲಿ ವಿಸ್ತಾರವಾಗಿದೆ.

**ವಿಶೇಷ-** ಇಲ್ಲಿ ಒಂದು ಸಂದೇಹ. ಪಾಪ ತಕ್ಷಕನದೇನು ತಪ್ಪು ? ಮುನಿಯ ಶಾಪದ ಪ್ರಕಾರ ಕಚ್ಚಿರುವನಷ್ಟೇ. ಅಂದ ಮೇಲೆ ಸರ್ಪ ಸತ್ರ ಮಾಡುವದು ಯುಕ್ತವಲ್ಲ ಎಂದರೆ ಅದು ಸರಿಯಲ್ಲ.

ಜನಮೇಜಯನ ಅಭಿಪ್ರಾಯ ಹೀಗಿದೆ. ಮುನಿಸುತನು ಶಾಪವನ್ನು ಕೊಡಲು ತಾನು ಬಂದು ನಮ್ಮ ತಂದೆಯನ್ನು ಕಚ್ಚಲಿ ನಮ್ಮ ತಂದೆಯೂ ಯಮಪುರವನ್ನೂ ಪ್ರವೇಶಿಸಲಿ ಎನ್ನುವದು ವಿಧಿಸಂಕಲ್ಪ. ಆದರೆ ಮಧ್ಯದಲ್ಲಿ ಕಾಣಿಸಿದ ಕಶ್ಯಪನನ್ನು ಕಳಿಸಿದ್ದೇಕೆ ? ಇವನಿಗೇನು ಅದರಿಂದ ಹೊಟ್ಟೆ ನೋವು ? ಅವನು ಬಂದು ಔಷಧೋಪಚಾರ ಮಾಡಿ ನನ್ನ ತಂದೆಯು ಬದುಕಿದರೆ ಇವನಿಗೇನು ಹಾನಿ ? ಶಾಪವೂ ವಿಫಲವಾಗುತ್ತಿರಲಿಲ್ಲ, ತನಗೇನು ಅಪಾಯವೂ ಇರಲಿಲ್ಲ, ಕಾರಣ ಅದು ಅವನ ಅಪರಾಧವೆಂದು ಭಾವ.

ನಿಜ ಅಡವಿಯಲ್ಲಿ ಇದ್ದದ್ದು ತಕ್ಷಕ-ಬ್ರಾಹ್ಮಣರಿಬ್ಬರೇ. ಕಾಶ್ಯಪನಿಗೆ ಹಣಕೊಟ್ಟು ತಿರುಗಿ ಕಳುಹಿಸಿದನೆಂದು ಹೇಳಿದವರಾರು ಎಂದರೆ ತಕ್ಷಕನು ಕಚ್ಚಿದ ವಟವೃಕ್ಷದಲ್ಲಿ ಒಬ್ಬ ಕಟ್ಟಿಗೆ ಕಡಿಯುವವನಿದ್ದನು. ಕಚ್ಚಿದಾಗ ಅವನೂ ಭಸ್ಮನಾದ. ಮಂತ್ರದಿಂದ

ಬದುಕಿದ ಅವನು ಬಂದು ಮಂತ್ರಿಗಳಿಗೆ ಹೇಳಿದನು. ತಕ್ಷಕನಿಗೂ ಬ್ರಾಹ್ಮಣನಿಗೂ ನಡೆದ ಸಂವಾದ ಮೇಲಿನಿಂದಲೇ ಕೇಳಿದನು. ಇವರೀರ್ವರು ಅವನನ್ನು ನೋಡಿರಲಿಲ್ಲವಷ್ಟೇ.

ಇದೆಲ್ಲ ತಿಳಿದ ಜನಮೇಜಯನು ಅದಕ್ಕಾಗಿ ಯಜ್ಞ ಮಾಡಿದನು. ಮತ್ತು ಉತ್ತಂಕನು ಗುರುಪತ್ನಿಗೆ ಮದಯಂತಿ ಕುಂಡಲ ತರುವಾಗ ತಕ್ಷಕನು ತೊಂದರೆ ಕೊಟ್ಟದ್ದರಿಂದಲೂ ಅವನು ಬಂದು ಸರ್ಪಯಾಗ ಮಾಡಲು ಪ್ರೇರಿಸಿದನು. ಇದು ಕೂಡ ಅಶ್ವಮೇಧ ಪರ್ವದಲ್ಲಿ ಕುಂಡಲಗಳನ್ನು ಬಿಲ್ವ ಗಿಡದ ಮೇಲೆ ಇಟ್ಟನೆಂದು ಆದಿಪರ್ವದಲ್ಲಿ ಭೂಮಿಯಲ್ಲಿಟ್ಟು ನೀರಿಗಾಗಿ ಹೋದನೆಂದೂ ಇದೆ. ಕಾರ್ಯಕಾರಣ ಶಬ್ದಗಳಿಗೆ ಸಾಂಕರ್ಯವಿರುವದರಿಂದ ಪರಂಪರಾಧಿಷ್ಠಾನಭೂಮಿಯೂ ಆಗುವದರಿಂದ ಪರಸ್ಪರ ವಿರೋಧವಿಲ್ಲ. ಈ ಅಪರಾಧಕ್ಕಾಗಿ ಯಾಗ ಮಾಡಿದ. ಇಲ್ಲವಾದರೆ ಸರ್ಪಸತ್ರಮಾಡಲು ಬೇರಾರಿಗೂ ಅಧಿಕಾರವೇ ಇಲ್ಲ. ಈಗಲೂ ಇವನು ಯಾಗ ಮಾಡದಿದ್ದರೆ ಆ ಶಾಸ್ತ್ರವೇ ವ್ಯರ್ಥವಾಗಬೇಕಾಗುವದು. ನಿನಗಾಗಿಯೇ ದೇವತೆಗಳಿಂದ ನಿರ್ಮಿತವಾದ ಸರ್ಪಸತ್ರವಿದೆ ಎಂದು ಉತ್ತಂಕನು ರಾಜನಿಗೆ ಹೇಳಿರುವನು.

ತಕ್ಷಕನನ್ನು ನಾಶ ಮಾಡಲಿ ನಿರಪರಾಧಿಗಳಾದ ಎಲ್ಲ ಸರ್ಪಗಳನ್ನೇಕೆ ದಹನ ಮಾಡಿದ್ದು ಎಂದು ಶಂಕೆ ಉಳಿಯಿತಲ್ಲ ಎಂದರೆ ಕೆಲವರು ಶ್ಲೋಡುವ ಉತ್ತರ ಹೀಗೆ ರಾಜನಾದ ಪರೀಕ್ಷಿತನು ಸತ್ತರೇ ಅವನ ಬಂಧುಗಳೆಲ್ಲ ಮೃತರಾದಂತೆಯೇ ಆದರೆ ತಕ್ಷಕನು ಮಾತ್ರ ಸತ್ತರೆ ಅವನ ಬಂಧುಗಳೇನು ಸತ್ತಂತೆ ಆಗಲಾರರು. ತಕ್ಷಕನೇನು ಅಖಂಡ ಭೂಮಂಡಲೇಶನಲ್ಲ ಕಾರಣ ಅವರನ್ನು ಪ್ರತ್ಯೇಕ ದಹಿಸಿದ್ದು ಎಂದು.

ಪ್ರಸ್ತುತ ಎಲ್ಲ ಸರ್ಪಗಳಿಗೆ ತಾಯಿಯ ಶಾಪವಿತ್ತು. ಕಾರಣ ಈ ರೀತಿ ಬುದ್ಧಿ ಜನಮೇಜಯನಿಗೆ ಉಂಟಾಯಿತು. ಕದ್ರು ಮತ್ತು ವಿನತೆಯರು ಸಮುದ್ರವಿಹಾರಕ್ಕೆ ಹೋದಾಗ ಬಿಳಿ ಕುದುರೆಯನ್ನು ಕಂಡು ಬಾಲದಲ್ಲಿ ಕಪ್ಪಿದೆ ಎಂದಳು. ಕದ್ರು ಇಲ್ಲವೆಂದಳು. ವಿನತಾ ಕದ್ರು ಇಬ್ಬರೂ ಪಂದ್ಯಕಟ್ಟಿದರು. ಆಗ ಕದ್ರು ತನ್ನ ಮಕ್ಕಳಿಗೆ (ನಾಗಗಳಿಗೆ) ಹೇಳಿದಳು. ನೀವು ಬಾಲದಲ್ಲಿ ಸೇರಿಕೊಂಡು ಕಪ್ಪಾಗುವಂತೆ ಮಾಡಿರೆಂದು ಹೇಳಿದಳು. ಆದರೆ ಅವು ಆ ರೀತಿ ಮಾಡಲಿಲ್ಲ. ಆಗ ಅವಳು ಜನಮೇಜಯನ ಸರ್ಪಯಾಗದಲ್ಲಿ ಅಗ್ನಿಯು ನಿಮ್ಮನ್ನು ಸುಡುವದು ಎಂದು ಶಾಪವಿತ್ತಳು. ಅದರ ಪ್ರಕಾರ ಇಲ್ಲಿ ಸರ್ಪಯಾಗ ನಡೆಯಿತು.

**ಸರ್ಪಸತ್ರೇ ಸಮಿದ್ಧೇಽಗ್ನೌ ದಹ್ಯಮಾನಾನ್ ಮಹೋರಗಾನ್ ।**
**ದೃಷ್ಟ್ವೇಂದ್ರಂ ಭಯಸಂವಿಗ್ನಸ್ತಕ್ಷಕಃ ಶರಣಂ ಯಯೌ ॥ ೧೭ ॥**

ಸರ್ಪಸತ್ರೇ=ಸರ್ಪಯಾಗದಲ್ಲಿ ಸಮಿದ್ಧೇ ಅಗ್ನೌ=ಪ್ರಜ್ವಲಿಸುವ ಅಗ್ನಿಯಲ್ಲಿ ದಹ್ಯಮಾನಾನ್=ಸುಡುತ್ತಿರುವ ಮಹೋರಗಾನ್=ದೊಡ್ಡ ಸರ್ಪಗಳನ್ನು ದೃಷ್ಟ್ವಾ=ನೋಡಿ ಸಂವಿಗ್ನಃ=ಹೆದರಿದ ತಕ್ಷಕಃ ಚ=ತಕ್ಷಕನು ಇಂದ್ರಂ=ದೇವೇಂದ್ರನನ್ನು ಶರಣಂ ಯಯೌ=ಮೊರೆ ಹೋದನು.(ಹಿಂದೆ ಇಂದ್ರನು ಉತ್ತಂಕನಿಗೆ ವಜ್ರಾಯುಧವಿತ್ತು ಸಹಾಯ ಮಾಡಿದ್ದನು. ತಕ್ಷಕನು ಕುಂಡಲ ತರಲು ಹೊರಟಾಗ ಇಂದ್ರನು ಈಗ ನನಗೆ ಸಹಾಯ ಮಾಡಬಹುದು ಎಂದು ಶರಣು ಹೋದನು.

**ನಾಪಶ್ಯತ್ ತಕ್ಷಕಂ ತತ್ರ ರಾಜಾ ಪಾರಿಕ್ಷಿತೋ ದ್ವಿಜಾನ್ ।**
**ಉವಾಚ ತಕ್ಷಕಃ ಕಸ್ಮಾನ್ನದಹ್ಯೇತೋರಗಾಧಮಃ ॥ ೧೮ ॥**

ಪಾರಿಕ್ಷಿತಃ ರಾಜಾ=ಪರೀಕ್ಷಿತನ ಮಗನಾದ ಜನಮೇಜಯನು ತತ್ರ=ಆ ಹೋಮದಲ್ಲಿ (ಯಜ್ಞಕುಂಡದಲ್ಲಿ) ತಕ್ಷಕಂ=ತಕ್ಷಕಸರ್ಪವನ್ನು ನ ಅಪಶ್ಯತ್=ಕಾಣಲಿಲ್ಲ. ಆಗ ದ್ವಿಜಾನ್=ಬ್ರಾಹ್ಮಣರನ್ನು ಕುರಿತು ಉರಗಾಧಮಃ ತಕ್ಷಕಃ ಕಸ್ಮಾತ್ ನ ದಹ್ಯೇತ=ಏಕೆ ಸುಡುತ್ತಿಲ್ಲ ಇತಿ ಉವಾಚ=ಎಂದು ಕೇಳಿದನು.

**ತಂ ಗೋಪಾಯತಿ ರಾಜೇಂದ್ರ ಇಂದ್ರಃ ಶರಣಮಾಗತಮ್ ।**
**ತೇನ ಸಂಸ್ತಂಭಿತಃ ಸರ್ಪಸ್ತಸ್ಮಾನ್ನಾಗ್ನೌ ಪತತ್ಯಸೌ ॥ ೧೯ ॥**

ಹೇರಾಜೇಂದ್ರ=ಜನಮೇಜಯನೇ ಶರಣಮಾಗತಂ=ತನ್ನನ್ನು ಶರಣು ಬಂದ ತಂ=ತಕ್ಷಕನನ್ನು ಇಂದ್ರಃ=ಇಂದ್ರನು ಗೋಪಾಯತಿ=ರಕ್ಷಿಸುತ್ತಿರುವನು ತೇನ=ಅವನ ರಕ್ಷಣೆಯಿಂದ ಸಂಸ್ತಂಭಿತಃ ಚ ತಡೆಯಲ್ಪಟ್ಟಿರುವನು ತಸ್ಮಾತ್=ಆದ್ದರಿಂದ ಅಸೌ=ತಕ್ಷಕನು ನ ಅಗ್ನೌ ಪತತಿ=ಅಗ್ನಿಯಲ್ಲಿ ಬೀಳುತ್ತಿಲ್ಲ ಎಂದು ಹೇಳಿದರು.

**ಪಾರಿಕ್ಷಿತ ಇತಿ ಶ್ರುತ್ವಾ ಪ್ರಾಹರ್ತ್ವಿಜ ಉದಾರಧೀಃ ।**
**ಸಹೇಂದ್ರಸ್ತಕ್ಷಕೋ ವಿಪ್ರಾ ನಾಗ್ನೌ ಕಿಮಿತಿ ಪಾತ್ಯತೇ ॥ ೨೦ ॥**

ಉದಾರಧೀಃ=ಬುದ್ಧಿಶಾಲಿಯಾದ ಪಾರೀಕ್ಷಿತಃ=ಜನಮೇಜಯನು ಇತಿ=ಈ ರೀತಿಯಾದ ಮಾತನ್ನು ಶ್ರುತ್ವಾ=ಕೇಳಿ ಋತ್ವಿಜಃ=ಋತ್ವಿಕರನ್ನು ಕುರಿತು ಹೇ ವಿಪ್ರಾಃ ಚ=ಬ್ರಾಹ್ಮಣರೇ ಸಹೇಂದ್ರಃ ತಕ್ಷಕಃ =ಇಂದ್ರಸಹಿತನಾದ ತಕ್ಷಕನು ಅಗ್ನೌ=ಅಗ್ನಿಯಲ್ಲಿ ಕಿಮಿತಿ ನ ಪಾತ್ಯತೇ=ನಿಮ್ಮಿಂದೇಕೆ ಬೀಳಿಸಲ್ಪಡುತ್ತಿಲ್ಲ. ಎಂದು ಪ್ರಾಹ=ಕೇಳಿದನು.

**ತಚ್ಛ್ರುತ್ವಾ ಜುಹುವುರ್ವಿಪ್ರಾಃ ಸಹೇಂದ್ರಂ ತಕ್ಷಕಂ ಮಖೇ ।**
**ತಕ್ಷಕಾಶು ಪತಸ್ವೇಹ ಸಹೇಂದ್ರೇಣ ಮರುತ್ವತಾ ॥ ೨೧ ॥**

ವಿಪ್ರಾಃ=ಬ್ರಾಹ್ಮಣರು ತತ್=ಜನಮೇಜಯನ ಮಾತನ್ನು ಶ್ರುತ್ವಾ=ಕೇಳಿ ಮಖೇ=ಯಜ್ಞದಲ್ಲಿ ಸಹೇಂದ್ರಂ ತಕ್ಷಕಂ=ಇಂದ್ರ ಸಹಿತನಾದ ತಕ್ಷಕನನ್ನು ಮರುತ್ವತಾ=ಮರುತ್ತುಗಳಿಗೆ ಜನಕನಾದ ಇಂದ್ರೇಣ ಸಹ=ಇಂದ್ರನಿಂದ ಸಹಿತನಾಗಿ ಹೇ ತಕ್ಷಕ=ತಕ್ಷಕನೇ ಇಹ= ಈ ಅಗ್ನಿ ಕುಂಡದಲ್ಲಿ ಪತಸ್ವ=ಬೀಳು ಎಂದು ಜುಹುವುಃ=ಆಹುತಿಯನ್ನು ಹಾಕಿದರು.

**ವಿಶೇಷ-** ಹೇ ಸ್ವೇಹ, ಪತ । ಹೀಗೂ ಪದಚ್ಛೇದಮಾಡಬಹುದು. ಸ್ವಸ್ಮಿನ್ ಈಹಾ ಯಸ್ಯ ಸಃ ಸ್ವೇಹಃ, ತತ್ಸಂಬುದ್ಧಿಃ ಹೇ ಸ್ವೇಹ. ಜೀವನೇಚ್ಛೆ ಉಳ್ಳವನೇ ಬೀಳು ಎಂದರ್ಥ.

**ಇತಿ ಬ್ರಹ್ಮೋದಿತಾಕ್ಷೇಪೈಃ ಸ್ಥಾನಾದಿಂದ್ರಃ ಪ್ರಚಾಲಿತಃ ।**
**ಬಭೂವ ಸಂಭ್ರಾಂತಮತಿಃ ಸವಿಮಾನಃ ಸತಕ್ಷಕಃ ॥ ೨೨ ॥**

ಇತಿ=ಈ ರೀತಿಯಾದ ಬ್ರಹ್ಮೋದಿತಾಕ್ಷೇಪೈಃ=ಬ್ರಾಹ್ಮಣರಿಂದ ಹೇಳಲ್ಪಟ್ಟ ಸೇಂದ್ರಾಯ ತಕ್ಷಕಾಯ ಸ್ವಾಹಾ ಎಂಬ(ಆಕ್ಷಿಪ್ಯಂತ ಇತಿ ಆಕ್ಷೇಪಾಃ)ಅಗ್ನಿಯಲ್ಲಿ ಬೀಳಿಸುವ ಮಂತ್ರಗಳಿಂದ ಸ್ಥಾನಾತ್=ತಾನು ಕುಳಿತ ಸ್ಥಳದಿಂದ ಇಂದ್ರಃ=ಇಂದ್ರನು ಪ್ರಚಾಲಿತಃ=ಚಲಿಸಿದನು. ಸವಿಮಾನಃ=ವಿಮಾನ ಸಹಿತನಾದ ಸತಕ್ಷಕಃ ಚ=ತಕ್ಷಕ ಸಹಿತನಾದ ಇಂದ್ರನು ಸಂಭ್ರಾಂತಮತಿಃ ಬಭೂವ=ಗಾಬರಿಯಾದನು.

**ತಂ ಪತಂತಂ ವಿಮಾನೇನ ಸಹ ತಕ್ಷಕಮಂಬರಾತ್ ।**
**ವಿಲೋಕ್ಯಾಂಗೀರಸಃ ಪ್ರಾಹ ರಾಜಾನಂ ತಂ ಬೃಹಸ್ಪತಿಃ ॥ ೨೩ ॥**

ಅಂಬರಾತ್=ಆಕಾಶದಿಂದ ಸಹ ತಕ್ಷಕಂ=ತಕ್ಷಕ ಸಹಿತನಾಗಿ ವಿಮಾನೇನ=ವಿಮಾನದಿಂದ ಪತಂತಂ=ಬೀಳುವ ತಂ=ಇಂದ್ರನನನ್ನು ವಿಲೋಕ್ಯ=ನೋಡಿ ಆಂಗಿರಸಃ=ಅಂಗೀರಸಗೋತ್ರದಲ್ಲಿ ಜನಿಸಿದ ಬೃಹಸ್ಪತಿಃ=ಬೃಹಸ್ಪತ್ಯಾಚಾರ್ಯರು ತಂ ರಾಜಾನಂ=ಜನಮೇಜಯನನ್ನು ಕುರಿತು ಪ್ರಾಹ=ಹೇಳಿದನು.

*ತಾ.ಅ -ಇಲ್ಲಿ ಒಂದು ಸಂದೇಹ ಜನಮೇಜಯನಿಂದಾಗಲಿ ಪುರೋಹಿತರಿಂದಾಗಲಿ ಇಂದ್ರನು ಹೆದರಿದನೆಂಬುದು ಹೇಗೆ ಅವನು ದೇವೋತ್ತಮನಲ್ಲವೇ ಎಂದರೆ ಹೇಳುವರು.*

**ತಾತ್ಪರ್ಯ-** 'ಸ್ವಸಂತಾನೋದ್ಭವಂ ಕೀರ್ತ್ಯಾ ಯೋಜಯನ್ ಜನಮೇಜಯಮ್ । ಶಕ್ತೋಪ್ಯಶಕ್ತವದ್ ಯಷ್ಟುರಿಂದ್ರ ಆಸೀದುಪೇಕ್ಷಕಃ'

ತನ್ನ ಅಂಶನಾದ ಅರ್ಜುನನ ಮೊಮ್ಮಗನಾದ ಜನಮೇಜಯನಿಗೆ ಇಂದ್ರನನ್ನೂ ಗೆದ್ದನೆಂಬ ಕೀರ್ತಿಯನ್ನು ಕೊಡುವದಕ್ಕಾಗಿ ಸಮರ್ಥನಾಗಿದ್ದರೂ ಅಸಮರ್ಥನಂತೆ ಇಂದ್ರನು ಯಜಮಾನನಾದ ಜನಮೇಜಯನನ್ನು ಉದಾಸೀನಮಾಡಿದನು. ಅಂದರೆ ತನ್ನ ಸಾಮರ್ಥ್ಯವನ್ನು ವ್ಯಕ್ತಮಾಡಲಿಲ್ಲ. ಜನಮೇಜಯ ತನ್ನ ಸಂತಾನವಾದ್ದರಿಂದ ಬಿಡಲಿ ಋಷಿಗಳ ಮಂತ್ರಕ್ಕೆ ಮಾತ್ರ ಹೆದರಿದ್ದೇಕೆ ಎನ್ನುವದಕ್ಕೆ ಕಾರಣ ಹೇಳುವರು.

**'ಏವಮೇವ ಋಷಿಣಾಂ ಚ ಕೀರ್ತಿಂ ಯೋಜತಾಮುನಾ । ಕೃತೋಪೇಕ್ಷಾ ಮಹೇಂದ್ರೇಣ ಕಿಮು ವಿಷ್ಣೋಃ ಪರಾತ್ಪರಃ । ತಸ್ಮಾದ್ ವಿಷ್ಣೋರಶಕ್ಯಂ ನ ಭೂತಭವ್ಯ ಭವತ್ಸ್ವಪಿ । ನ ಚಾನಿಷ್ಟಂ ಗುಣೈರೇವ ಪೂರ್ಣೋ ನಾರಾಯಣಃ ಸದಾ'**

ಇದೇ ರೀತಿಯಾಗಿ ಕರುಣೆಯಿಂದ ಚಂಡಭಾರ್ಗವ ಮುಂತಾದ ಋಷಿಗಳಿಗೆ ಕೀರ್ತಿಯನ್ನು ಕೊಡುವದಕ್ಕಾಗಿ ಮಹೇಂದ್ರನು ಉಪೇಕ್ಷಿಸಿದನು. ಹೀಗಿರುವಾಗ ಇಂದ್ರಾದಿಗಳಿಗೂ ಉತ್ತಮನಾದ ವಿಷ್ಣುವು ಸರ್ವಶಕ್ತನೆಂದೇನು ಹೇಳುವದು. ಕಾರಣ ಶ್ರೀಹರಿಗೆ ಭೂತ-ವರ್ತಮಾನ-ಭವಿಷ್ಯತ್‌ಕಾಲಗಳಲ್ಲಿ ವಿಷ್ಣುವಿಗೆ ಅಶಕ್ಯವಾದುದು ಅನಿಷ್ಟವಾದುದು ಇಲ್ಲವೇ ಇಲ್ಲ. ಈ ನಾರಾಯಣನು ಸರ್ವದಾ ಗುಣಪೂರ್ಣನೇ ಆಗಿರುವನು. ಮತ್ತು ಆಸ್ತೀಕನಿಗೆ ವರವನ್ನು ಕೊಟ್ಟಿದ್ದರಿಂದ ಅವನ ಪ್ರಾರ್ಥನೆಯಂತೆ ಯಾಗವನ್ನು ನಿಲ್ಲಿಸಿದನು ಎಂದು ತಿಳಿಯಬೇಕು.(ಬೃಹಸ್ಪತಿಃ ಪ್ರಾಹ=ಜನಮೇಜಯನಿಂದ ಕೊಲ್ಲಲು ಯೋಗ್ಯನಲ್ಲ ಎಂದು ಹೇಳಿದನು.

**ನೈಷ ತ್ವಯಾ ಮನುಷ್ಯೇಂದ್ರ ವಧಮರ್ಹತಿ ಸರ್ಪರಾಟ್ ।**
**ಅನೇನ ಪೀತಮಮೃತಮಥಾಯಮಜರಾಮರಃ ॥ ೨೪ ॥**

ಹೇ ಮನುಷ್ಯೇಂದ್ರ=ರಾಜನೇ ಏಷಃ ಸರ್ಪರಾಟ್=ಈ ತಕ್ಷಕನು ತ್ವಯಾ=ನಿನ್ನಿಂದ ನ ವಧಂ ಅರ್ಹತಿ=ಮರಣವನ್ನು ಹೊಂದಲಾರನು. ಅನೇನ ಇವನಿಂದ ಅಮೃತಂ= ಪೀತಂ=ಅಮೃತವು ಕುಡಿಯಲ್ಪಟ್ಟಿದೆ. ಅಥ=ಆದ್ದರಿಂದ ಅಯಂ=ಇವನು ಅಜರಾಮರಃ= ಮುಪ್ಪುಮರಣಗಳಿಂದ ರಹಿತನು.

**ವಿಶೇಷ-** ಅಮೃತಪಾನ ಮಾಡಿದ್ದರಿಂದ ವಾಸುಕಿ ಮುಂತಾದವರಿಗೂ ವಧೆ ಇಲ್ಲವೆಂದು ಸೂಚಿತವಾಯಿತು.

*ವೈರಾಗ್ಯದಿಂದ ಯಜ್ಞವನ್ನು ನಿಲ್ಲಿಸುವ ಬುದ್ಧಿಯನ್ನು ಹುಟ್ಟಿಸಲು ಉಪದೇಶಿಸುವರು ಬೃಹಸ್ಪತಿಗಳು*

**ಜೀವಿತಂ ಮರಣಂ ಜಂತೋರ್ಗತಿಃ ಸ್ವೇನೈವ ಕರ್ಮಣಾ ।**
**ರಾಜಂಸ್ತೇನ ವಿನಾ ನಾನ್ಯೋ ಪ್ರದಾತಾ ಸುಖದುಃಖಯೋಃ ॥ ೨೫ ॥**

ಜಂತೋಃ=ಪ್ರಾಣಿಗಳಿಗೆ ಜೀವಿತಂ=ಬದುಕು ಮರಣಂ=ಸಾವು ಗತಿಃ=ಶುಭಾಶುಭ ಸ್ಥಾನಪ್ರಾಪ್ತಿಯು ಸ್ವೇನ=ಸ್ವತಂತ್ರನಾದ ಶ್ರೀಹರಿಯಿಂದ ಪ್ರೇರಿತವಾದ ಕರ್ಮಣಾ= ಸತ್ಕರ್ಮ ಅಸತ್ಕರ್ಮಗಳಿಂದ ಆಗುವವು. ರಾಜನ್=ಜನಮೇಜಯನೇ ತೇನ ವಿನಾ= ಕರ್ಮಪ್ರೇರಕನಾದ ಶ್ರೀಹರಿಯ ಹೊರತು ಅನ್ಯಃ=ಬೇರೆಯವನು ಸುಖದುಃಖಯೋಃ ಪ್ರದಾತಾ=ಸುಖದುಃಖಗಳನ್ನು ಸ್ವತಂತ್ರವಾಗಿ ಕೊಡುವವನು ನ=ಇಲ್ಲ. 'ಅನನ್ಯಾಧೀನ ಶಕ್ತಿತ್ವಾದ್ಧರಿಃ ಸ್ವ ಇತಿ ಚೋಚ್ಯತೇ' ತೃತೀಯಾಧ್ಯಾಯತಾತ್ಪರ್ಯದಲ್ಲಿದೆ. 'ಪರಃ ಸ್ವೋ ಹರಿರುದ್ದಾಮಃ । 'ಸ್ವೇ ವಿಷ್ಣೌ ರಮತೇ ಯಸ್ಮಾತ್ ಸ್ವರೋ ವಾಯುಃ' ಎಂದು ಛಾಂದೋಗ್ಯದಲ್ಲಿ ಸ್ವೇ ವಿಷ್ಣೌ ಎಂದು ಬೃಹದ್ಭಾಷ್ಯದಲ್ಲಿಯೂ ಇದೆ.

*ಜನಮೇಜಯನೇ ನಿನ್ನ ತಂದೆಯ ಮರಣಕ್ಕೆ ಕಾರಣ ನೆನಿಸಿದ ಸರ್ಪ ಮೊದಲಾದವೂ ಸಹ ಶ್ರೀಹರಿಯ ಇಚ್ಛೆಯಿಂದಲೇ ಕಾರಣವಾಗುವವು. ಆವನು ಮಾಡಿದ ಕರ್ಮ ಸಹಕಾರಿಯಾಗುವದು ಇದು ಅನಿವಾರ್ಯವಾದುದು. ಕಾರಣ ದುಃಖಿಸಿ ಫಲವಿಲ್ಲವೆಂದು ಹೇಳುವರು.*

**ಸರ್ಪಚೋರಾರಿವಹ್ನ್ಯಂಬುಕ್ಷುತ್ತೃಡ್ವ್ಯಾಧ್ಯಾದಿಭಿರ್ನೃಪ ।**
**ಪಂಚತ್ವಮೃಚ್ಛತೇ ಜಂತುರ್ಭುಂಕ್ತೇ ಆರಬ್ಧಕರ್ಮ ಚ ॥ ೨೬ ॥**

ಸರ್ಪಚೋರಾರಿವಹ್ನ್ಯಂಬುಕ್ಷುತ್ತೃಟ್ವ್ಯಾಧ್ಯಾದಿಭಿಃ=ಹಾವು, ಕಳ್ಳರು, ಶತ್ರುಗಳು, ಬೆಂಕಿ, ನೀರು, ಹಸಿವೆ, ನೀರಡಕೆ, ರೋಗ ಆಧಿ ಮನೋವ್ಯಥೆ (ಆದಿ ಎಂಬ ಪಾಠದಲ್ಲಿ ಗಿಡದಿಂದ ಬೀಳುವದೇ ಮುಂತಾದವುಗಳಿಂದ) ಪಂಚತ್ವಂ=ಮರಣವನ್ನು ಋಚ್ಛತೇ=ಹೊಂದುವನು ಆರಬ್ಧಕರ್ಮ ಭುಂಕ್ತೇ=ಪ್ರಾರಬ್ಧಕರ್ಮದ ಫಲವನ್ನು ಅನುಭವಿಸುವನು. (ಆದಿನೋ ರಾಕ್ಷಸಾ ಪ್ರೋಕ್ತಾಃ ಎಂದು ತಾತ್ಪರ್ಯವಿದೆ.) ಯಾವ ಶ್ರೀಹರಿಯು ಗರ್ಭದಲ್ಲಿ ಮಕ್ಕಳನ್ನೂ ನಿನ್ನ ತಂದೆಯನ್ನೂ ರಕ್ಷಿಸಿದನೋ ಅಂತಹವನಿಗೆ ಈ ಒಂದು ಹಾವು ಕಚ್ಚಿದಾಗ ವಿಷಬಾಧೆಯಾಗದಂತೆ ಮಾಡುವದೇನು ದೊಡ್ಡದಲ್ಲ ಆದರೂ ಅವನ ಕರ್ಮಾನುಸಾರ ಹೀಗೆ ನಡೆಯುವದು ಎಂಬ ತನ್ನ ಸಂಕಲ್ಪವನ್ನು ಅಲ್ಪಗೊಳಿಸಲಿಲ್ಲ ಕಾರಣ 'ಜಾತಸ್ಯ ಹಿ ಧ್ರುವೋ ಮೃತ್ಯುಃ' ಎಂಬಂತೆ ಇದು ನಡೆಯಿತು. ಭೂಪನೇ ತಾಪವನ್ನು ಸಂಪಾದಿಸಬೇಡ ಎಂದು ಅಭಿಪ್ರಾಯ.

*ಇಷ್ಟು ನೀತಿಯನ್ನು ಉಪದೇಶಿಸಿದ ಉದ್ದೇಶವನ್ನು ತಿಳಿಸಿ ಉಪಸಂಹರಿಸುವರು.*

**ತಸ್ಮಾತ್ ಸತ್ರಮಿದಂ ರಾಜನ್ ಸಂಸ್ಥೀಯೇತಾಭಿಚಾರಿಕಮ್ ।**
**ಸರ್ಪಾ ಅನಾಗಸೋ ದಗ್ಧಾಃ ಜನೈರ್ದಿಷ್ಟಂ ಹಿ ಭುಜ್ಯತೇ ॥ ೨೭ ॥**

ತಸ್ಮಾತ್=ಆದ ಕಾರಣ ರಾಜನ್=ಜನಮೇಜಯನೇ ಆಭಿಚಾರಿಕಮ್=ನೀಲಿಯ ಬಟ್ಟೆಗಳನ್ನು ಧರಿಸಿ ಪ್ರಾಣಿ ಹಿಂಸೆಗಾಗಿ ಆರಂಭಿಸಿದ್ದರಿಂದ ಆಭಿಚಾರಿಕವೆನಿಸುವ ಇದಂ ಸತ್ರಂ=ಈ ಸರ್ಪಯಾಗವು ಸಂಸ್ಥೀಯೇತ=ಸಮಾಪ್ತಿಯಾಗಲಿ ಅನಾಗಸಾಃ ಸರ್ಪಾಃ ದಗ್ಧಾಃ=ನಿರಪರಾಧಿಗಳಾದ ಸರ್ಪಗಳೂ ಸುಡಲ್ಪಟ್ಟಿವೆ. ಜನೈಃ ದಿಷ್ಟಂ=ಜನರಿಂದ ಉಕ್ತವಾದದ್ದು ಭುಜ್ಯತೇ=ಅನುಭವಿಸಲ್ಪಡುವದು.

ವಿಶೇಷ-ಯದ್ಯಪಿ ತಾಯಿಯ ಶಾಪದಿಂದಲೂ ಈ ಸರ್ಪದಹನ ನಡೆದಿದೆ. ಆದರೂ ನಿನಗಂತೂ ತಕ್ಷಕನನ್ನು ಬಿಟ್ಟು ಉಳಿದ ಹಾವುಗಳು ಅಪಚಾರ ಮಾಡಿಲ್ಲ ಎಂಬ ಅಭಿಪ್ರಾಯದಿಂದ ಅನಾಗಸಾಃ ಎಂದಿದ್ದಾರೆ. ಸಾಮಾನ್ಯ ನಿಯಮ ಹೇಳುತ್ತಾ ಜನರು ತಮ್ಮ ದೈವದ ಪ್ರಕಾರ ಅನುಭವಿಸುವದರಿಂದ ತಕ್ಷಕನೂ ಸಹ ನಿನ್ನ ತಂದೆಯ ಮರಣಕ್ಕೆ ಕಾರಣನಲ್ಲ ದೈವವೇ ಅಂದಮೇಲೆ ಇತರ ಸರ್ಪಗಳು ನಿರಪರಾಧಿಗಳೆಂದೇನು ಹೇಳುವದು ಎಂದು ಭಾವ.

**ಇತ್ಯುಕ್ತಃ ಸ ತಥೇತ್ಯಾಹ ಮಹರ್ಷೇರ್ಮಾನಯನ್ ವಚಃ ।**
**ಸರ್ಪಸತ್ರಾದುಪರತಃ ಪೂಜಯಾಮಾಸ ವಾಕ್ಪತಿಮ್ ॥ ೨೮ ॥**

ಇತಿ ಉಕ್ತಃ=ಈ ರೀತಿಯಾಗಿ ಯುಕ್ತಿ ಯುಕ್ತವಾಗಿ ಹೇಳಿಸಿಕೊಳ್ಳಲ್ಪಟ್ಟ ಸಃ= ಜನಮೇಜಯನು ಮಹರ್ಷೇಃ=ಬೃಹಸ್ಪತ್ಯಾಚಾರ್ಯರ ವಚಃ=ಮಾತನ್ನು ಮಾನಯನ್= ಗೌರವಿಸುವವನಾಗಿ ತಥಾ ಇತಿ ಆಹ=ಹಾಗೆಯಾಗಲಿ ಎಂದನು. ಸರ್ಪಸತ್ರಾದುಪರತಃ =ಸರ್ಪಯಾಗದಿಂದ ನಿವೃತ್ತನಾಗಿ (ನಿಲ್ಲಿಸಿ)ವಾಕ್ಪತಿಂ=ಬೃಹಸ್ಪತ್ಯಾಚಾರ್ಯರನ್ನು ಪೂಜಯಾಮಾಸ=ಪೂಜಿಸಿದನು.

*ಅದೃಷ್ಟವೇ ಮುಖ್ಯಕಾರಣವೆಂಬುದು ತಮಗೆ ಸಮ್ಮತವಲ್ಲವೆಂದು ಹೇಳುವರು.*

**ಸೈಷಾ ವಿಷ್ಣೋಃ ಮಹಾಮಾಯಾ ಬಾಧ್ಯಬಾಧಕಲಕ್ಷಣಾ ।**
**ಯಯಾ ಹಿ ಮುಹ್ಯಂತ್ಯಸಾವಾತ್ಮಾ ಭೂತೇಷು ಗುಣವೃತ್ತಿಭಿಃ ॥ ೨೯ ॥**

ಯಯಾ=ಯಾರಿಂದ ಅಸೌ ಆತ್ಮಾ=ಈ ಜೀವನು ಅಭೂತೇಷು=ತನ್ನವಾಗ-ದಿರುವವನ್ನು (ದೃಷ್ಟಾಂತಗಳಿಂದ ತನ್ನವೆಂದು ಅನನುಭೂತವಾದ ಕಾರ್ಯಗಳಲ್ಲಿ) ಗುಣವೃತ್ತಿಭಿಃ=ರಜೋಗುಣ ತಮೋಗುಣಗಳಿಂದ) ಮುಹ್ಯಂತಿ=ನಾನೇ ಕರ್ತಾ ಎಂದು ತಿಳಿಯುವನೋ ಬಾಧ್ಯಬಾಧಕಲಕ್ಷಣಾ=ಇವನು ಬಾಧ್ಯನು ಇವನು ಬಾಧಕನು ಎಂದು. ನಾನೇ ಕರ್ತಾ ಎಂದು ಭ್ರಮಿಸುವನೋ ಸಾ ಏಷಾ=ಆ ಇದು ವಿಷ್ಣೋಃ=ಶ್ರೀಹರಿಯ ಮಹಾಮಾಯಾ=ಅದ್ಭುತವಾದ ಮಾಹಾತ್ಮ್ಯವು ಅಥವಾ ಇಚ್ಛೆಯು.

*ವಿಷ್ಣುವಿನ ಇಚ್ಛೆಯೇ ಮುಖ್ಯಕಾರಣವೆಂದು ಅದರ ಚಿಹ್ನವನ್ನು ಹೇಳುವರು.*

**ನ ಯತ್ರ ದುರ್ಭಾವತಯಾ ವಿರಾಜತೇ ಮಾಯಾತ್ಮವಾದೇ ಅಸಕೃದಾತ್ಮವಾದಿಭಿಃ ।**
**ನ ಯದ್ವಿವಾದೋ ವಿವಿಧಸ್ತದಾಶ್ರಯೋ ಮನಶ್ಚ ಸಂಕಲ್ಪವಿಕಲ್ಪವೃತ್ತಿ ಯತ್ ॥ ೩೦ ॥**

ಆತ್ಮವಾದಿಭಿಃ=ಸ್ವಾಮಿಯಾದ ಪರಮಾತ್ಮನಿದ್ದಾನೆಂದು ಹೇಳುವರಿಂದ ಅಥವಾ ಉಪನಿಷದ್ವಿಚಾರ ಚತುರರಾದವದರಿಂದ ಅಸಕೃತ್=ಅನೇಕ ಬಾರಿ ಆತ್ಮವಾದೇ= ಪರಮಾತ್ಮನ ವಿಚಾರವು ಮಾಡಲ್ಪಡುತ್ತಿರಲು ಮಾಯಾ=ಮೋಹನ ಶಕ್ತಿಯು (ಪ್ರಕೃತಿಯು) ಯತ್ರ=ಯಾವ ಶ್ರೀಹರಿಯ ವಿಷಯದಲ್ಲಿ ನ ವಿರಾಜತೇ=ಮೋಹಕವಾಗಿ ಪ್ರವರ್ತಿಸುವದಿಲ್ಲ. (ತನ್ನ ಕಾರ್ಯ ಮಾಡುವದಾಗಿ ಶೋಭಿಸುವುದಿಲ್ಲ.) ದುರ್ಭಾವ್ಯತಯಾ=ಅನ್ಯರಿಂದ ತರ್ಕಿಸಲು ಅಶಕ್ಯವಾದ ವಿವಿಧಃ=ಅನೇಕ ವಾದಿಗಳು ಮಾಡುವ ಅನೇಕ ರೀತಿಯ ವಿಚಾರವೇನುಂಟೋ ತದಾಶ್ರಯಃ=ಅದಕ್ಕೆ ವಿಷಯಃ ನ=ವಿಷಯನು ಅಲ್ಲ.(ಯದ್ವಾಚಾನಭ್ಯುದಿತಂ ಎಂದು ಶ್ರುತಿ ಇದೆ.)ಮನಶ್ಚ=ಮನಸ್ಸು ಕೂಡ ಯದ್=ಯಾವ ಬ್ರಹ್ಮನನ್ನು ನ=ವಿಷಯೀಕರಿಸುವದಿಲ್ಲ (ಸಂಕಲ್ಪವಿಕಲ್ಪ ವೃತ್ತಿ ಸಂಕಲ್ಪ ವಿಕಲ್ಪಗಳೆಂಬ ವೃತ್ತಿಗಳುಳ್ಳದ್ದು ಇದು ಮನಸ್ಸಿಗೆ ವಿಶೇಷಣ.'ಮನಸಾ ವಾ ಅಗ್ರೇ ಸಂಕಲ್ಪಯತಿ ಅಥವಾ ಚಾವ್ಯಾಹರತಿ' ಎಂದು ಶ್ರುತಿ ಇರುವದರಿಂದ ಮನಸ್ಸಿಗೆ ವಿಷಯವಲ್ಲ ಎಂದ ಮೇಲೆ ವಾಕ್ಯಕ್ಕೆ ವಿಷಯನಲ್ಲ ಎಂಬುದು ಕೈಮುತ್ಯಸಿದ್ಧ. ಅನೇಕ ವಾದಿಗಳು ಅನೇಕರೀತಿ ಹೇಳಿದರೂ ಉಪಕ್ರಮಾದಿಗಳಿಂದ ವಿಚಾರ ಮಾಡಿದಾಗ ಅವರು ಹೇಳುವದು ಸರಿಯಲ್ಲ. ಎಂದು ತಿಳಿಯುವದು ಉಪಕ್ರಮಾದಿಗಳಿಂದ ನಿರ್ಣೀತವಾದದ್ದೇ ಸಿದ್ಧಾಂತ. ಶ್ರೀಹರಿಯು ಕುಯುಕ್ತಿವಿಷಯನಲ್ಲ ಎಂದು ಭಾವ.

**ನ ಯತ್ರ ಸೃಜ್ಯಂ ಸೃಜತೋಭಯೋಃ ಪರಂ ಶ್ರೇಯಶ್ಚ ಜೀವಸ್ತ್ರಿಭಿರನ್ವಿತಃ ಸ್ವಯಮ್ ।**
**ತದ್ವೈತದುತ್ಪಾದಿತಬಾಧ್ಯಬಾಧಕಂ ನಿಷಿಧ್ಯ ಚೋರ್ಮಿನ್ ವಿರಮೇತ ತನ್ಮುನಿಃ ॥ ೩೧ ॥**

ಸೃಜ್ಯಂ=ಜನ್ಯವಾದ ಪ್ರಪಂಚವು ಯತ್ರ=ಯಾವನ ವಿಷಯದಲ್ಲಿ ನ=ಬಾಧಕವಾಗಿ ಇಲ್ಲ. ಉಭಯೋಃ=ದೇವಾಸುರರಿಗೆ ಪರಂ ಶ್ರೇಯಃ=ಸುಖದುಃಖಗಳೆಂಬ ಭಿನ್ನ ಭಿನ್ನ ಫಲವನ್ನು ಸೃಜತಃ=ಕೊಡುವ ನಾರಾಯಣನಿಗೆ ಯಾವಕಾರಣ ವೈಷಮ್ಯ ನೈರ್ಘೃಣ್ಯಗಳು ಬರುವದಿಲ್ಲವೋ ತ್ರಿಭಿಃ=ಸತ್ವಾದಿಗುಣಗಳಿಂದ, ಧರ್ಮಾರ್ಥಕಾಮಗಳಿಂದ ಅನ್ವಿತಃ= ಸಂಬದ್ಧನಾದ ಜೀವನು ಸ್ವಯಂ ಚ ನ=ತಾನು ಸಹ ಯಾವ ವಿಶೇಷವನ್ನೂ ತಂದುಕೊಡಲಾರನು. ಯಃ=ಯಾವನು ಉತ್ಪಾದಿತಬಾಧ್ಯಬಾಧಕಂ=ಬಾಧ್ಯಬಾಧಕಗಳನ್ನು ನಾಶಗೊಳಿಸಿದ ತದೇತತ್=ಬ್ರಹ್ಮನನ್ನು ಜಾನಾತಿ=ತಿಳಿಯುವನೋ ತನ್ಮುನಿಃ=ಆ ಜ್ಞಾನಿಯು ಊರ್ಮಿನ್=ಷಡೂರ್ಮಿಗಳನ್ನು ನಿಷಿಧ್ಯ=ಕಳೆದುಕೊಂಡು ವಿರಮೇತ=ತನ್ನ ಕೃತ್ಯಗಳಿಂದ ವಿರಮಿಸಬೇಕು.

**ವಿಶೇಷ-** ಉತ್ಪಾದಿತಬಾಧ್ಯಬಾಧಕಂ ಎಂಬುದು ಬ್ರಹ್ಮನಿಗೆ ವಿಶೇಷಣವು. ಅಂದರೆ ಬಾಧ್ಯತ್ವ ಬಾಧಕತ್ವಗಳು ತನ್ನ ಅಧೀನವಾಗಿವೆ. ಆದ್ದರಿಂದ ಅವುಗಳ ಉತ್ಪಾದಕನು ಅಥವಾ ಯಾವಾಗ ದೇವತೆಗಳು ಬಾಧ್ಯರಾಗುವರೋ ಆಗ ಬಾಧಕರಾದ ದೈತ್ಯರನ್ನು ನಾಶಗೊಳಿಸಿದ ಎಂದು ಅರ್ಥ.

ಸತ್ಯಧರ್ಮರ ಪ್ರಕಾರ ಸೃಜ್ಯಂ ಸೃಜತಾ ಯೇನ=ಜಗತ್ತನ್ನು ಸೃಷ್ಟಿಸುವ ಯಾವನಿಂದ ಯತ್ರ=ಯಾವ ಜೀವಸಂಘದಲ್ಲಿ ಉಭಯೋಃ=ಇಹ ಪರಗಳಲ್ಲಿ ಶ್ರೇಯಃ ಭವತಿ= ಶ್ರೇಯಸ್ಸಾಗುವದೋ ಸಃ=ಆ ಜೀವನು ತ್ರಿಭಿಃ ಅನ್ವಿತಃ=ಸತ್ವಾದಿಗಳಿಂದ ಸಂಬದ್ಧನು. ಸ್ವಯಂ ನ=ತಾನು (ಬ್ರಹ್ಮನು) ಅವುಗಳಿಂದ ಅನ್ವಿತನಲ್ಲ. ಯತ್=ಏಕೆಂದರೆ ಉತ್ಪಾದಿತಬಾಧ್ಯಬಾಧಕಂ=ಬಾಧ್ಯಬಾಧಕಗಳನ್ನು ಕಿತ್ತೆಸೆದವನು ಆದಕಾರಣ ಸತ್ವಾದಿಗಳ ಬಂಧನವಿಲ್ಲವೆಂದು ಭಾವ. ಇಂಥ ಬ್ರಹ್ಮಜ್ಞಾನಿಯು ಷಡುರ್ಮಿಗಳನ್ನು ತುಚ್ಛೀಕರಿಸಿ ಸಂಸಾರದಿಂದ ವಿರಮಿಸಬೇಕು.

'ವಿರಮೇ ತನ್ಮುನಿಃ' ಎಂಬಲ್ಲಿ ವಿರಮೇ(ವಿ ರಮಾ ಅಸ್ಮಿನ್ ಸಃ ವಿರಮಃ ತಸ್ಮಿನ್)ವಿಶೇಷವಾಗಿ ವಕ್ಷಾದಿಗಳಲ್ಲಿ ಆಶ್ರಿತಳಾದ ಲಕ್ಷ್ಮೀದೇವಿಯುಳ್ಳ ಭಗವಂತನಲ್ಲಿ ಮುನಿಃ=ಜ್ಞಾನಿಯೂ ರಮೇತ=ಸಂತೋಷಪಡಬೇಕು.(ಅತಶ್ಚಾಸೌ ಸ ಚ ಅತತ್ । ಸರ್ವತ್ರ ವ್ಯಾಪ್ತನಾದ ಪ್ರಸಿದ್ಧನಾದ ಶ್ರೀಹರಿಯು ಅವನ ಜ್ಞಾನಿಯು ಅತಸ್ತನ್ಮುನಿಃ ಎಂದು ಹೀಗೂ ಅರ್ಥ.)

**ಪರಂ ಪದಂ ವೈಷ್ಣವಮಾಮನಂತಿ**
**ಯನ್ನೇತಿ ನೇತಿ ತ್ಯತದುತ್ಸಿಸೃಕ್ಷವಃ ।**
**ವಿಸೃಜ್ಯ ದೌರಾತ್ಮ್ಯಮನನ್ಯಸೌಹೃದಾ**
**ಹೃದೋಪಗುಹ್ಯಾಪುರಮುಂ ಪದೇ ಪದೇ(ವಸಿತಂ ಸಮಾಹಿತೈಃ) ॥ ೩೨॥**

ಯತ್ ಮಾಯಾ=ಜಗನ್ಮೋಹಕವಾದ ಮಾಯೆಯು ನವೈಷ್ಣವಂ ಪದಂ=ವೈಷ್ಣವ ಪದವಲ್ಲ, ತತ್=ವ್ಯಾಪ್ತನಾದ ಭಗವಂತನಿಂದ ಭಿನ್ನವು ಸ ಆತ್ಮಾ ನೇತಿ ನೇತಿ=ಆ ಜೀವನಲ್ಲ ಇದಂ ಬ್ರಹ್ಮ=ಈ ಜಗತ್ತು ಬ್ರಹ್ಮನಲ್ಲ. ಉತ್ಸಿಸೃಕ್ಷವಃ=ಬಿಡಲು ಇಚ್ಛಿಸುವ('ಸ ವೈ ನ ದೇವಾಸುರಮರ್ತ್ಯರ್ತಿಯರ್ಗ್ ನ ಸ್ತ್ರೀ ನ ಷಂಡೋಜಯತಾದಶೇಷಃ'ಎಂದು ವಾಕ್ಯವಿದೆ.) ದೌರಾತ್ಮ್ಯಂ=ವಿಷಯಗಳಲ್ಲಿ ಆಸಕ್ತಿಯನ್ನು ವಿಸೃಜ್ಯ=ಬಿಟ್ಟು ಅನನ್ಯಸೌಹೃದಾ (ಭಗವದ್ಭಕ್ತರಲ್ಲದವರಲ್ಲಿ ಸ್ನೇಹವಿಲ್ಲದವರು.)ಇತರತ್ರಸ್ನೇಹರಹಿತರಾದವರು ಏಕತ್ರ= ಒಟ್ಟುಗೂಡಿಸಲ್ಪಟ್ಟ ಇಂದ್ರಿಯಗಳಿಂದ ಹೃದಾ=ಮನಸ್ಸಿನಿಂದ ಉಪಗುಹ್ಯ=ವಿಚಾರ ಮಾಡಿ ಪದೇ ಪದೇ=ಪುನಃ ಪುನಃ ಅಮುಂ ಆಪುಃ=ಇದನ್ನು (ವೈಷ್ಣವಪದವನ್ನು) ಹೊಂದಿದರು ನೇತಿ ಎಂದು ನಿಷೇಧಮಾಡಿ ಉಳಿದದ್ದನ್ನು ಪರಂ ಪದಂ ಆಮನಂತಿ=ಪರಮಾತ್ಮ ಸ್ವರೂಪವೆಂದು ಹೇಳುವರು.

**ತದೇತದಧಿಗಚ್ಛಂತಿ ವಿಷ್ಣೋರ್ಯತ್ ಪರಮಂ ಪದಮ್ ।**
**ಅಹಂ ಮಮೇತಿ ದೌರ್ಜನ್ಯಂ ನ ಯೇಷಾಂ ದೇಹಗೇಹಜಮ್ ॥ ೩೩ ॥**

ಯೇಷಾಂ=ಯಾರಿಗೆ ದೇಹಗೇಹಜಂ ಅಹಂ ಮಮ ಇತಿ ದೌರ್ಜನ್ಯಂ=ದೇಹದಲ್ಲಿ ನಾನೆಂದು, ಮನೆಯಲ್ಲಿ ನನ್ನದು ಎಂದು ಕತೃತ್ವ ಮತ್ತು ಸ್ವಾತಂತ್ರ್ಯ ಭ್ರಮವು ನ=ಇಲ್ಲವೋ ತೇ=ಅವರು ಯತ್ ಅಧಿಗಚ್ಛಂತಿ=ಯಾವುದನ್ನು ಹೊಂದುವರೋ ತದೇತತ್=ಅದು ವಿಷ್ಣೋಃ ಪರಮಂ ಪದಂ=ಪರಮಾತ್ಮನ ಸ್ವರೂಪವು.

**ಅತಿವಾದಾಂಸ್ತಿತಿಕ್ಷೇತ ನಾವಮನ್ಯೇತ ಕಂಚನ ।**
**ನಚೇಮಂ ದೇಹಮಾಶ್ರಿತ್ಯ ವೈರಂ ಕುರ್ವೀತ ಕೇನಚಿತ್ ॥ ೩೪ ॥**

ಅತಿವಾದಾನ್=ದುಷ್ಟ ಮಾತುಗಳನ್ನು ತಿತಿಕ್ಷೇತ=ಸಹಿಸಬೇಕು ಕಂಚನ=ಯಾರನ್ನೂ ನ ಅವಮನ್ಯೇತ್=ಅಪಮಾನಮಾಡಕೂಡದು. ಇಮಂ ದೇಹಂ ಆಶ್ರಿತ್ಯ=ನಶ್ವರವೆಂದು ಸಾಕ್ಷಿಸಿದ್ಧವಾದ ಈ ದೇಹವನ್ನಾಶ್ರಯಿಸಿ ಕೇನಚಿತ್=ಯಾರಿಂದಲೂ ವೈರಂ ನ ಕುರ್ವೀತ=ದ್ವೇಷ ಮಾಡಬಾರದು. ದ್ವೇಷವನ್ನು ಸಂಪೂರ್ಣ ಸಾಧಿಸಲಾಗದೆ ನಿನಗೆ ಮರಣ ಬರುವಾಗ ವೈರವನ್ನು ಮಾಡಬಾರದು.

**ನಮೋ ಭಗವತೇ ತಸ್ಮೈ ಕೃಷ್ಣಾಯಾಕುಂಠಮೇಧಸೇ ।**
**ಯತ್ಪಾದಾಂಬುರುಹಧ್ಯಾನಾತ್ ಸಂಹಿತಾ ಮಧ್ಯಗಾಮಿಮಾಮ್ ॥ ೩೫ ॥**

ಯತ್ ಪಾದಾಂಬುರುಹಧ್ಯಾನಾತ್=ಯಾರ ಪಾದಕಮಲಗಳ ಸ್ಮರಣದಿಂದ ಇಮಾಂ ಸಂಹಿತಾಂ=ಈ ಭಾಗವತ ಸಂಹಿತೆಯನ್ನು ಅಧ್ಯಗಾಂ=ಅಧ್ಯಯನ ಮಾಡಿದೇನೋ ತಸ್ಮೈ=ಆ ಅಕುಂಠಮೇಧಸೇ=ಅಪ್ರತಿಹತ ಜ್ಞಾನಿಯಾದ ಭಗವತೇ ಕೃಷ್ಣಾಯ ನಮಃ=ಷಡ್ಗುಣ್ಯೈಶ್ವರ್ಯಸಂಪನ್ನನಾದ ಶ್ರೀಕೃಷ್ಣನಿಗೆ ನಮಸ್ಕಾರವು.

॥ ಇಲ್ಲಿಗೆ ಐದನೇ ಅಧ್ಯಾಯವು ಸಮಾಪ್ತವಾಯಿತು ॥



# ಅಥ ಷಷ್ಠೋಽಧ್ಯಾಯಃ

**ಸಾರಾಂಶ**

ಶ್ರೀ ವೇದವ್ಯಾಸರ ಶಿಷ್ಯರಾದ ವೇದಪ್ರವರ್ತಕರಾದ ಪೈಲ-ಸುಮಂತು-ವೈಶಂಪಾಯನಾದಿಗಳಿಂದ ವೇದಗಳು ವಿಭಜಿತವಾದವು.

ಇದರ ಇತಿಹಾಸವನ್ನು ಹೀಗೆ ನಿರೂಪಿಸುತ್ತಾರೆ.

ಬ್ರಹ್ಮದೇವರು ಭಗವಂತನನ್ನು ಧ್ಯಾನಿಸುತ್ತಿರುವಾಗ ಅವರ ಹೃದಯಾಕಾಶದಿಂದ ಒಂದು ವಿಲಕ್ಷಣವಾದ ನಾದವು ಹೊರಹೊಮ್ಮಿತು. ಜ್ಞಾನಿಗಳು ಅದನ್ನು ಉಪಾಸಿಸಿ ದ್ರವ್ಯ-ಕ್ರಿಯಾ-ಕಾರಕಗಳೆಂಬ ಮೂರು ರೀತಿಯ ಮಲಗಳನ್ನು ತೊಳೆದು ಕೊಂಡು ಜನ್ಮ-ಮರಣಗಳಿಂದ ಬಿಡುಗಡೆ ಹೊಂದಿ ಪುನರಾವೃತ್ತಿ ರಹಿತವಾದ ಮೋಕ್ಷವನ್ನು ಹೊಂದಿದರು. ಆ ನಾದವು ಅಕಾರ-ಉಕಾರ-ಮಕಾರವೆಂಬ ಮೂರು ವರ್ಣಗಳಿಂದ ಸಹಿತವಾದ ಓಂಕಾರರೂಪದಿಂದ ಅಭಿವ್ಯಕವಾಯಿತು. ಇಂತಹ ಓಂಕಾರವು ಭಗವಂತನಿಂದ ಹೃದಯಾಕಾಶದಲ್ಲಿ ಅಭಿವ್ಯಕ್ತವಾಗುತ್ತದೆ. ಇದೇ ಓಂಕಾರದಿಂದ ಸಮಗ್ರವಾದ ವೇದಗಳು ಅಭಿವ್ಯಕ್ತಿಯನ್ನು ಹೊಂದುತ್ತವೆ. ಈ ಓಂಕಾರವು ಪರಮಮುಖ್ಯವೃತ್ತಿಯಿಂದ ಭಗವಂತನನ್ನೇ ಹೇಳಿಕೊಡುತ್ತದೆ. ತ್ರಿಮಾತ್ರೆಯುಳ್ಳ ಓಂಕಾರ ಮಾತ್ರೋಚ್ಚಾರಣೆಯಿಂದ ಸರ್ವವೇದ ಪಾರಾಯಣದಿಂದ ಬರಬಹುದಾದ ಪುಣ್ಯವನ್ನು ಪಡೆಯಬಹುದಾಗಿದೆ.

ಓಂಕಾರದಿಂದ ಭೂಃ-ಭುವಃ-ಸ್ವಃ ಎಂಬ ಮೂರು ವ್ಯಾಹೃತಿಗಳು ಅಭಿವ್ಯಕ್ತವಾದವು. ಆ ಮೂರು ವ್ಯಾಹೃತಿಗಳಿಂದ ಅಕಾರಾದಿ ಹಕಾರದ ವರೆಗಿನ ಐವತ್ತು ಅಕ್ಷರಗಳು ಪ್ರಕಟವಾದವು. ನಂತರ ಬ್ರಹ್ಮದೇವರು ತಮ್ಮ ನಾಲ್ಕು ಮುಖಗಳಿಂದ ಋಗ್ವೇದ-ಯಜುರ್ವೇದ-ಸಾಮವೇದ-ಅಥರ್ವವೇದಗಳನ್ನು ಪ್ರಕಟಗೊಳಿಸಿದರು.

ಪ್ರಕಟಗೊಂಡ ನಾಲ್ಕು ವೇದಗಳನ್ನು ತಮ್ಮ ಪುತ್ರರಾದ ಮರೀಚಾದಿಗಳಿಗೆ ಉಪದೇಶ ಮಾಡಿದರು.

ಈ ವೈವಸ್ವತ ಮನ್ವಂತರದಲ್ಲಿ ದೇವತೋತ್ತಮರಾದ ಬ್ರಹ್ಮದೇವರ ಪ್ರಾರ್ಥನೆಯಂತೆ ಲೋಕಸೃಷ್ಟಿಕರ್ತೃವಾದ ಭಗವಂತನು ಧರ್ಮಸಂರಕ್ಷಣೆಗಾಗಿ ಪರಾಶರರಿಂದ ಸತ್ಯವತೀದೇವಿಯಲ್ಲಿ ವೇದವ್ಯಾಸರೂಪದಿಂದ ಅವತರಿಸಿ ಋಕ್-ನಿಗದ-ಸಾಮ-ಅಥರ್ವವೆಂಬ ನಾಲ್ಕು ವೇದಗಳಿಂದ ಮಣಿಗಳ ಗುಂಪಿನಿಂದ ಬೇರೆ ಬೇರೆ ಮಣಿಗಳನ್ನು ಆರಿಸಿ ಒಗ್ಗೂಡಿಸುವಂತೆ ಮೂಲ ವೇಧರಾಶಿಯಿಂದ ಋಗ್ವೇದ-ಯಜುರ್ವೇದ-ಸಾಮವೇದ-ಅಥರ್ವವೇದ ಎಂಬ ನಾಲ್ಕು ಸಂಹಿತೆಗಳನ್ನು ಉದ್ಧೃತಗೊಳಿಸಿದನು.

ಕಾಲಪ್ರಭಾವದಿಂದ ಕ್ಷೀಣಮತಿಗಳಾದ ಜನರನ್ನು ಮಹರ್ಷಿಗಳು ತಮ್ಮ ದಿವ್ಯದೃಷ್ಟಿಯಿಂದ ಗಮನಿಸಿದರು. ಅದಕ್ಕೆ ತಕ್ಕ ಉಪಾಯವಾಗಿ ಶ್ರೀ ವೇದವ್ಯಾಸರ ಶಿಷ್ಯರಾದ ವೇದಪ್ರವರ್ತಕರಾದ ಪೈಲ-ಸುಮಂತು-ವೈಶಂಪಾಯನಾದಿಗಳು ವೇದಗಳನ್ನು ವಿಭಜಿಸಿದರು. ಮುಂದೆ ಅನೇಕ ಶ್ಲೋಕಗಳಿಂದ ವೇದಪರಂಪರೆಯಲ್ಲಿ ಅನೇಕ ಋಷಿಗಳು ಹಾಗು ಅವರ ಶಿಷ್ಯವರ್ಗವನ್ನು ವಿಸ್ತಾರವಾಗಿ ಹೇಳಿರುತ್ತಾರೆ. ಮಧ್ಯದಲ್ಲಿ ಯಾಜ್ಞವಲ್ಕ್ಯರ ವತ್ತಾಂತವನ್ನು ಭಾಗವತ ಹೀಗೆ ನಿರೂಪಿಸುತ್ತದೆ.

ಒಮ್ಮೆ ವೈಶಂಪಾಯನರು ತಮಗೆ ಬಂದೊದಗಿದ ಬ್ರಹ್ಮಹತ್ಯೆಯನ್ನು ಪರಿಹರಿಸಲು ಅಧ್ವರ್ಯುಗಳಿಗೆ ಆದೇಶಿಸಿದರು. ಆ ಜ್ಞಾನಿಗಳ ಮಧ್ಯದಲ್ಲಿ ವೈಶಂಪಾಯನರ ಶಿಷ್ಯನಾದ ಯಾಜ್ಞ್ಯವಲ್ಕ ಎಂಬುವವನು ಗುರುಗಳಿಗೆ ಹೀಗೆ ಉತ್ತರಿಸಿದನು. ಇಲ್ಲಿರುವವರು ಸಾಮಾನ್ಯ ಋಷಿಗಳು. ಇವರು ಮಾಡಿದ ವ್ರತಗಳು ಯಾವ ಪ್ರಯೋಜನಕ್ಕೂ ಬರುವುದಿಲ್ಲ. ನಾನು ಇವರೆಲ್ಲರಿಗಿಂತಲೂ ಕಠಿಣವಾದ ವ್ರತವನ್ನು ಆಚರಿಸಿ ಬ್ರಹ್ಮಹತ್ಯೆಯನ್ನು ಪರಿಹರಿಸುವೆ ಎಂದ. ಇದಕ್ಕೆ ಕೋಪಗೊಂಡ ವೈಶಂಪಾಯನರು ಯಾಜ್ಞ್ಯವಲ್ಕ್ಯನೇ ಇವರೆಲ್ಲರೂ ಅಜ್ಞಾನಿಗಳೆಂದು ಅವಹೇಳನೆ ಮಾಡುತ್ತಿರುವ ನೀನು ಬ್ರಾಹ್ಮಣದ್ರೋಹ ಮಾಡಿರುವೆ. ಆದ್ದರಿಂದ ಇನ್ನು ಮುಂದೆ ನಾನು ನಿನಗೆ ಪಾಠವನ್ನು ಹೇಳುವುದಿಲ್ಲ. ನೀನು ನಮ್ಮ ಗುರುಕುಲವನ್ನು ಬಿಟ್ಟು ಹೊರಡಬಹುದು. ಹೋಗುವ ಮೊದಲು ನನ್ನಿಂದ ಕಲಿತ ವೇದಶಾಖೆಗಳನ್ನು ಇಲ್ಲಿಯೇ ಬಿಟ್ಟು ಹೋಗು ಎಂದರು. ಆಗ ಯಾಜ್ಞವಲ್ಕ್ಯರು ತಾವು ಕಲಿತ ಕೃಷ್ಣಯಜುರ್ವೇದವನ್ನು ಅಲ್ಲಿಯೇ ವಮನಮಾಡಿ ಹೊರಟರು.

ಕೊನೆಯಲ್ಲಿ ಪೌರಾಣಿಕರನ್ನು ಹೇಳುವಾಗ ಪ್ರಾಸಂಗಿಕವಾಗಿ ಪುರಾಣ ಲಕ್ಷಣವನ್ನು ಹೇಳಿ ಪುರಾಣ ಸ್ವರೂಪವನ್ನು ತಿಳಿಸುತ್ತಾರೆ.

ಶೌನಕರೇ ಬ್ರಹ್ಮರ್ಷಿಗಳಿಂದ ವೇದಶಾಸ್ತ್ರಗಳಿಗೆ ಅನುಸಾರವಾಗಿ ಹೇಳಲ್ಪಟ್ಟ ಪುರಾಣಗಳ ಲಕ್ಷಣವನ್ನು ಏಕಾಗ್ರತೆಯಿಂದ ಕೇಳಿರಿ.

ಸರ್ಗ, ವಿಸರ್ಗ, ಸ್ಥಾನ, ಪೋಷಣ, ಊತಿಗಳು, ಮನ್ವಂತರಗಳು, ವಂಶವು, ವಂಶವೃತ್ತಾಂತಗಳು, ನಿರೋಧ, ಮುಕ್ತಿ, (ಆಶ್ರಯ) ಈ ಹತ್ತು ಲಕ್ಷಣಗಳಿಂದ ಕೂಡಿದ್ದನ್ನು ಪುರಾಣಜ್ಞರು ಪುರಾಣವೆಂದು ತಿಳಿಯುವರು. ಕೆಲವೆಡೆ ಕೆಲವರು ಐದು ಲಕ್ಷಣಗಳಿಂದ ಕೂಡಿದ್ದೆಂದು ತಿಳಿದಿರುವರು. ಹಾಗಾದರೆ ವಿರೋಧ ಬಂತಲ್ಲ ಎಂದರೆ ಮಹಾಪುರಾಣಕ್ಕೆ ಹತ್ತು, ಅಲ್ಪ ಪುರಾಣಕ್ಕೆ ಐದು ಲಕ್ಷಣಗಳಾದ್ದರಿಂದ ವಿರೋಧವಿಲ್ಲ. ಈ ರೀತಿ ಲಕ್ಷಣಗಳಿಗೆ ಆಶ್ರಯವಾದ ಪುರಾಣಗಳನ್ನು ಪ್ರಾಚೀನ ಜ್ಞಾನಿಗಳು ಶ್ಲೋಕ ಸಂಖ್ಯೆ ಹಾಗು ಅರ್ಥದಿಂದ ಫಲದಿಂದ ದೊಡ್ಡಪ್ರಮಾಣದಲ್ಲಿ ಇದ್ದದ್ದು ಈ ಹದಿನೆಂಟು ಪುರಾಣಗಳು ಎಂದು ಹೇಳಿರುವರು.

*ಭಗವಂತನು ವೇದವೇದ್ಯನೆಂದು ನಿರೂಪಿಸಿದಾಗ ಆ ವೇದವು ಎಷ್ಟು ವಿಭಾಗವಾಯಿತು? ಯಾರಿಂದ ವ್ಯಕ್ತವಾಯಿತು ? ಪ್ರವರ್ತಕರಾದ ವ್ಯಾಸರು ಹೇಗೆ ವಿಭಾಗಗೈದರು ? ಪ್ರಸ್ತುತವಾದ ಪುರಾಣಸಂಹಿತೆಯು ಹೇಗೆ ಹಿಂದೆ ಉತ್ಪನ್ನವಾಯಿತು? ಎಂದು ಶೌನಕರಿಂದ ಪ್ರಶ್ನಿಸಲ್ಪಟ್ಟ ಸೂತರು ಅದೆಲ್ಲವನ್ನೂ ಹೇಳುವರು.*

*ಭಗವನ್ಮಾಹಾತ್ಮ್ಯವನ್ನು ಪ್ರಕಟಿಸಲು ಶ್ರೀ ಹರಿಯಿಂದ ಪ್ರೇರಿತನಾದ ಚತುರ್ಮುಖನು ನಾದವನ್ನಾರಂಭಿಸಿ ವೇದಪರ್ಯಂತ ಇರುವ ಶಬ್ದರಾಶಿಯನ್ನು ಉದ್ಧರಿಸಿ ಮಕ್ಕಳಿಗೆ ಉಪದೇಶಿಸುವುದು. ಅವರ ಶಿಷ್ಯರಿಗೆ ವೇದಗಳನ್ನು ವಿಭಜಿಸಿ ಕೊಡುವುದು. ಪ್ರತಿಯುಗದಲ್ಲಿಯೂ ವೇದ ವಿಭಾಗಮಾಡುವುದು. ಪುರಾಣಪ್ರವಚನ ಮಾಡುವುದು ಇವುಗಳನ್ನು ಈ ಅಧ್ಯಾಯದಲ್ಲಿ ಹೇಳುವರು.*

ಶೌನಕ ಉವಾಚ -

**ಪೈಲಾದಿಭಿರ್ವ್ಯಾಸಶಿಷ್ಯೈರ್ವೇದಾಚಾರ್ಯೈರ್ಮಹಾತ್ಮಭಿಃ ।**
**ವೇದಾ ವೈ ಕತಿಧಾ ವ್ಯಸ್ತಾ ಏತತ್ ಸೌಮ್ಯಾಭಿದೇಹಿ ನಃ ॥ ೧ ॥**

ಹೇ ಸೌಮ್ಯ=ಸೂತರೇ,(ಕಥಾ ಹೇಳುವದರಿಂದ ಆನಂದಾನುಭವ ಉಳ್ಳವನೇ ಎಂದರ್ಥ.) ವ್ಯಾಸಶಿಷ್ಯೈಃ=ವೇದವ್ಯಾಸದೇವರ ಶಿಷ್ಯರಾದ ವೇದಾಚಾರ್ಯೈಃ=

ವೇದೋಕ್ತಾಚಾರವುಳ್ಳ (ಆಚಿನೋತಿ ಹಿ ಶಾಸ್ತ್ರಾಣಿ ಸ್ವಯಮಾಚರತೇ ತು ಯಃ ತಮಾಚಾರ್ಯಂ ಪ್ರಚಕ್ಷತೇ)ಮಹಾತ್ಮಭಿಃ=ವೇದವಿಚಾರ ಚತುರರಾದ ಪೈಲಾದಿಭಿಃ= ಪೈಲರೇ ಮೊದಲಾದವರಿಂದ ವೇದಾಃ=ವೇದಗಳು ಕತಿಧಾ ವ್ಯಸ್ತಾಃ=ಎಷ್ಟು ರೀತಿ ವಿಭಾಗ ಮಾಡಲ್ಪಟ್ಟಿತು ಏತತ್=ಎಂಬುದನ್ನು ನಃ=ನಮ್ಮನ್ನು ಕುರಿತು ಅಭಿದೇಹಿ=ಹೇಳಿರಿ ಎಂದು ಪ್ರಶ್ನಿಸಿದರು.

**ವಿಶೇಷ-** ಏನಿದು ಪುನಃ ಪುನಃ ನಿಮ್ಮ ಉಪದ್ರವ ಎಂದು ಸಿಟ್ಟಿಗೇಳದಿರಲಿ ಎಂಬ ಭಾವನೆಯಿಂದ ಸೌಮ್ಯ ಎಂದು ಸಂಬೋಧಿಸಿರುವರು. ಹೇ ಸೌಮ್ಯ=ಕಥಾ ಹೇಳುವದರಿಂದ ಆನಂದಾನುಭವ ಉಳ್ಳವನೇ ಎಂದರ್ಥ. ೧೧ ನೇ ಸ್ಕಂಧ ೬ ನೇ ಅಧ್ಯಾಯ ೧೦ ನೇ ಶ್ಲೋಕದ ತಾತ್ಪರ್ಯ 'ಆನಂದಾನುಭವಸ್ತೂಮಃ ಉತ್ಕೃಷ್ಟಾನುಭವಾತ್ ಸ್ಮೃತಃ । ತದ್ಯುಕ್ತತ್ವಂ ಯಥಾ ಸೌಮ್ಯಂ ಗುಣಾನಾಮಧಿಕಂ ಹಿ ತತ್' ಎಂದಿದೆ. ಅಂದರೆ ಶ್ರೀಹರಿಯು ಉತ್ಕೃಷ್ಟಾನಂದವುಳ್ಳವನೆಂದು ತಿಳಿಯುವುದೇ ಸೌಮ್ಯಗುಣವೆಂದು ಭಾವ.

*ಸೂತರು ಪೂರ್ವರಂಗವನ್ನು ಹೇಳುವರು.*

**ಸೂತ ಉವಾಚ -**

**ಸಮಾಹಿತಾತ್ಮನೋ ಬ್ರಹ್ಮನ್ ಬ್ರಹ್ಮಣಃ ಪರಮೇಷ್ಠಿನಃ ।**
**ಹೃದಾಕಾಶಾದಭೂನ್ನಾದೋ ವೃತ್ತಿರೋಧಾದ್ವಿಭಾವ್ಯತೇ ॥ ೨ ॥**

ಹೇ ಬ್ರಹ್ಮನ್=ಶೌನಕರೇ ಸಮಾಹಿತಾತ್ಮನಃ=ಸಮೇ ಲಕ್ಷ್ಮೀಸಮೇತನಾದ ಹರಿಯಲ್ಲಿ ಇಡಲ್ಪಟ್ಟ ಮನಸ್ಸುಳ್ಳ ಅಥವಾ ಬ್ರಹ್ಮನ್=ಶೌನಕರೇ ಸಮಾಹಿತಾತ್ಮನಃ=ಪರಬ್ರಹ್ಮನಲ್ಲಿ ಸಮಾಹಿತ ಸಮ್ಯಕ್ ಸ್ಥಾಪಿತವಾದ ಆತ್ಮಾ=ಮನಸ್ಸುಳ್ಳ ಪರಮೇಷ್ಠಿನಃ ಬ್ರಹ್ಮಣಃ= ಚತುರ್ಮುಖಬ್ರಹ್ಮದೇವರ ಹೃದಾಕಾಶಾತ್=ಹೃದಯದಲ್ಲಿರುವ ಆಕಾಶದಿಂದ ನಾದಃ=ಮಂತ್ರ ಶಾಸ್ತ್ರಗಳಲ್ಲಿ ಪ್ರಸಿದ್ಧವಾದ ನಾದ ಎಂಬ ವರ್ಣವು ಅಭೂತ್= ವ್ಯಕ್ತವಾಯಿತು.('ಯತ್ರೈತತ್ ಕರ್ಣಾವಪಿಗೃಹ್ಯ ನಿನದ ಇವ ನ ದಧುರಿವ ಅಗ್ನೇರಿವ ಜ್ವಲತಃ ಉಪಸ್ರುಣೋತಿ' ಇತಿ ಛಾಂದೋಗ್ಯೇ ಎಲ್ಲ ಇಂದ್ರಿಯಗಳನ್ನು ನಿರೋಧಿಸಿ ಕೈಗಳಿಂದ ಕಿವಿಗಳನ್ನು ಮುಚ್ಚಿದಾಗ ಕೇಳಿಬರುವುದೇ ನಾದವೆಂದು ಹೇಳುವದುಂಟು.) ಅದು ವೃತ್ತಿರೋಧಾತ್ ವಿಬಾಧ್ಯತೇ=ಎಲ್ಲ ಇಂದ್ರಿಯಗಳ ವೃತ್ತಿಯನ್ನು ತಡೆದಾಗ ವಾಯುವೃತ್ತಿಯನ್ನೂ ನಿಲ್ಲಿಸಿದಾಗ ಯೋಗಿಗಳಿಂದ ತಿಳಿಯುವದು.

*ಈ ನಾದದಿಂದ ಏನು ಪ್ರಯೋಜನವೆಂದು ಹೇಳುವರು*

**ಯದುಪಾಸನಯಾ ಬ್ರಹ್ಮನ್ ಯೋಗಿನೋ ಮಲಮಾತ್ಮನಃ ।**
**ದ್ರವ್ಯಕ್ರಿಯಾಕಾರಕಾಖ್ಯಂ ಧೂತ್ವಾಯಾಂತ್ಯಪುನರ್ಭವಮ್ ॥ ೩ ॥**

ಬ್ರಹ್ಮನ್=ಶೌನಕರೇ ಯದುಪಾಸನಯಾ=ಯಾವ ನಾದಾಂತರ್ಗತ ಭಗವದುಪಾಸನೆಯಿಂದ ಯೋಗಿನಃ ಚ=ಯೋಗಿಗಳ ಆತ್ಮನಃ ಚ=ತಮ್ಮ ದ್ರವ್ಯಕ್ರಿಯಾ-ಕಾರಕಾಖ್ಯಂ=ದ್ರವ್ಯಂ-ಪಾಂಚಭೌತಿಕವಾದ ಶರೀರ, ಕ್ರಿಯಾ-ಕರ್ಮೇಂದ್ರಿಯಗಳು ಕಾರಕಂ-ಜ್ಞಾನೇಂದ್ರಿಯಗಳು ಇವುಗಳಿಂದ ಆಖ್ಯಾ-ಪ್ರಕಾಶವುಳ್ಳ ಅಂದರೆ ಇವುಗಳಿಂದ ಉಂಟಾದ ಮಲಂ=ದೋಷವನ್ನು ಧೂತ್ವಾ=(ನಿರಾಸಮಾಡಿ)ಕಳೆದುಕೊಂಡು ಅಪುನರ್ಭವಂ=ಮೋಕ್ಷವನ್ನು ಯಾಂತಿ=ಹೊಂದುವರು.(ಸ್ತ್ರೀಪುನ್ನಪುಸಂಕಾತ್ಮಾಯಂ ನಾದೋ ಬ್ರಹ್ಮ ವಿನಿರ್ಮಿತಃ । ಘಂಟಾದಿನಾದಸದೃಶಃ ಮುಕ್ತಿಸ್ವರ್ಗಾದಿದೋ ವಿಭುಃ । ಎಂದಿರುವದರಿಂದ ಅವರವರ ಇಚ್ಛೆಯಂತೆ ಆ ಆ ಫಲವನ್ನಿಯುವದು ಎಂದು ಭಾವ.)

**ತತೋಽಭೂತ್ ತ್ರಿವೃದೋಂಕಾರೋ ಯೋ ವ್ಯಕ್ತ ಪ್ರಭವಃ ಸ್ವರಾಟ್ ।**
**ಯತ್ತಲ್ಲಿಂಗಂ ಭಗವತೋ ಬ್ರಹ್ಮಣಃ ಪರಮಾತ್ಮನಃ ॥ ೪ ॥**

ತತಃ=ಆ ನಾದದಿಂದ ವ್ಯಕ್ತಪ್ರಭವಃ=ಪ್ರಪಂಚ ಜನಕವಾದ('ಭೂತಂ ಭವತ್ ಭವಿಷ್ಯತ್ ಸರ್ವಂ ಓಕಾರಮೇವ' ಎಂದು ಶ್ರುತಿ ಇದೆ.) ಸ್ವರಾಟ್=ಸ್ವಯಂ ಪ್ರಕಾಶಮಾನವಾದ ಅಥವಾ ಪರಮಾತ್ಮನಿಂದ ಪ್ರಕಾಶಿತವಾದ ಅಥವಾ ಸ್ವರಃ-ವಾಯುಃ ತಸ್ಮಾತ್ ಅಟತೀತಿ ಸ್ವರಾಟ್, ಅಥವಾ ಸ್ವರಾನ್ ಅಜಾದಿಅಕ್ಷಾರಾನ್ ಅಟತಿ ಸ್ವ ಅವಯವತಯಾ ಗಚ್ಛತೀತಿ ಯಾವತ್=ವಾಯುವಿನಿಂದ ಜಪಸಲ್ಪಡುವ ಅಕಾರಾದಿ ಅನಂತ ಮಾತ್ರಾಗಳುಳ್ಳ ತ್ರಿವೃತ್=ಅಕಾರ ಉಕಾರ ಮಕಾರಗಳನ್ನು ತನ್ನ ಅವಯವಗಳೆಂದು ಸ್ವೀಕರಿಸಿದ ಬ್ರಹ್ಮಣಃ ಪರಮಾತ್ಮನಃ=ಶ್ರೀಹರಿಯ ಲಿಂಗಂ= ಗುಣಪೂರ್ಣತಾ ಬೋಧಕವಾದುದರಿಂದ ಜ್ಞಾಪಕವಾದ ಮತ್ತು ಭಗವಂತನ ನಾಮವಾದುದರಿಂದಲೂ ಜ್ಞಾಪಕವಾದ 'ಓತತ್ತ್ವಾಚೀ ಹ್ಯೋಂಕಾರೋ ವ್ಯಕ್ತಸೌ ತದ್ಗುಣೋತತಾಂ' 'ಓಂ ನಾಮಾ ಭಗವಾನ್ ವಿಷ್ಣು' ಎಂದೂ ಪ್ರಮಾಣಗಳಿವೆ. ಓಂಕಾರಃ=ಓಂಕಾರವು ಅಭೂತ್=ವ್ಯಕ್ತವಾಯಿತು.

**ಶೃಣೋತಿ ಯ ಇಮಂ ಸ್ಫೋಟಂ ಸುಪ್ತಃ ಸ್ರೋತೇವ ಶೂನ್ಯದೃಕ್ ।**
**ಯೇನ ವಾಗ್ ವ್ಯಜ್ಯತೇ ಯಸ್ಯ ವ್ಯಕ್ತಿರಾಕಾಶ ಆತ್ಮನಃ ॥ ೫ ॥**

ಶೂನ್ಯದೃಕ್=ಭಗವದಪರೋಕ್ಷಜ್ಞಾನಿಯು ಸುಪ್ತಃ=ಭಗವಂತನನ್ನು ಹೊಂದಿದ ಮುಕ್ತನು ವಾಕ್=ವೇದವು ಯೇನ=ಯಾವ ಓಂಕಾರದಿಂದ ವ್ಯಜ್ಯತೇ=ವ್ಯಕ್ತವಾಗುವದು ಯಸ್ಯ=ಯಾವುದಕ್ಕೆ ಆತ್ಮನಃ=ಪರಮಾತ್ಮನಿಂದ ಜನಿಸಿದ ಆಕಾಶಃ=ಆಕಾಶವು ವ್ಯಕ್ತಿಃ= ಸ್ಥಾನವು ಅಂತಹ ಇಮಂ=ಈ ಸ್ಫೋಟಂ=ಪ್ರಕಾಶಿಸುವ ಅಥವಾ ಭಗವತ್ಪ್ರಕಾಶಕವಾದ ಓಂಕಾರವನ್ನು ಶ್ರೋತಾ ಇವ=ಸ್ವತಂತ್ರ ಶ್ರೋತೃವಾದ ಭಗವಂತನಂತೆ ಶ್ರುಣೋತಿ= ಕೇಳುವನು. ಇದರಿಂದ ಪ್ರಣವವಿದೆ ಎನ್ನಲು ಪ್ರಮಾಣ ಹೇಳಿದಂತಾಯಿತು.('ಶ್ರೋತಾ ಮಂತಾ' ಎಂದು ಶ್ರುತಿ ಇರುವದರಿಂದ ಸ್ವತಂತ್ರಶ್ರೋತಾ ಅವನೇ)

**ವಿಶೇಷ-** ಶೂನ್ಯದೃಕ್=ಶೂನ್ಯ-ಭಗವಂತ. ಯಾವಾಗಲೂ ತನ್ನ ಆನಂದಕ್ಕಿಂತ ಇತರರ ಆನಂದವನ್ನು ಕಡಿಮೆ ಮಾಡುವದರಿಂದ ಭಗವಂತ ಶೂನ್ಯನೆನಿಸುತ್ತಾನೆ. ಶಂ=ದೈತ್ಯರ ಆನಂದವನ್ನು ಊನಂ ಯಾಪಯತಿ=ಇಲ್ಲದಂತೆ ಮಾಡುವನು ಮಧ್ಯಮರಿಗೆ ದುಃಖ ಮಿಶ್ರಮಾಡುವನು ಎಂದೂ ಅರ್ಥ. 'ಸ್ವಿತ್ಯಾನಂದಃ ಪರೋ ವಿಷ್ಣುಃ ತಮಾಪ್ತಸುಪ್ತ ಉಚ್ಯತೇ' ಎಂದು ಬೃಹದ್ಭಾಷ್ಯದಲ್ಲಿದೆ.

*ಹಿಂದೆ ಓಂಕಾರವು ಭಗವಂತನ ಲಿಂಗವೆಂದು ಹೇಳಿದರು ಈಗ ಮುಖ್ಯವಾಚಕವೂ ಆಗಿದೆ ಎಂದು ಹೇಳುವರು.*

**ಸ್ವಧಾಮ್ನೋ ಬ್ರಹ್ಮಣಃ ಸಾಕ್ಷಾದ್ ವಾಚಕಃ ಪರಮಾತ್ಮನಃ ।**
**ಸರ್ವಮಂತ್ರೋಪನಿಷದ್ವೇದಬೀಜಂ ಸನಾತನಮ್ ॥ ೬ ॥**

ಸ್ವಧಾಮ್ನಃ=ಸ್ವಪ್ರಕಾಶನಾದ ಪರಮಾತ್ಮನಃ ಬ್ರಹ್ಮಣಃ=ಶ್ರೀಹರಿಗೆ ಸಾಕ್ಷಾದ್ವಾಚಕಃ= ಪರಮಮುಖ್ಯವೃತ್ತಿಯಿಂದ ವಾಚಕವು ಸರ್ವಮಂತ್ರೋಪನಿಷದ್‌ವೇದಬೀಜಂ=ಎಲ್ಲ ಉಪನಿಷತ್ ಮಂತ್ರಗಳಿಂದ ಸಹಿತವಾದ ವೇದಗಳಿಗೆ ಮೂಲವಾದ ಸನಾತನಂ= ನಿತ್ಯವಾದ ಅಥವಾ ಉಚ್ಚಾರಣದಿಂದ ಸಹಿತವಾದುದು.

'ಯಥಾ ಶಂಕುನಾ ಸರ್ವಾಣಿ ಪರ್ಣಾನಿ ಸಂತೃಣ್ಣಾನಿ ಏವಮೇವ ಓಂಕಾರೇಣ ಸರ್ವಾ ವಾಕ್ ಸಂತೃಣ್ಣಾ'' ಎಂದು ಶ್ರುತಿ ಇದೆ. ಓಂಕಾರ ಉಚ್ಚಾರಣದಿಂದ ಎಲ್ಲ ವೇದಗಳ ಪಾರಾಯಣ ಪುಣ್ಯ ಬರುವದು ಮತ್ತು ಆದ್ಯಂತೋಂಕಾರ ಉಚ್ಚಾರಣದಿಂದ ಸ್ರವಣ-ವಿಶರಣಗಳು ಆಗುವುದಿಲ್ಲವೆಂದು ಭಾವ. 'ಸ್ರವತ್ಯನೋಂ ಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ'ಎಂದಿದೆ.

**ತಸ್ಯಹಾ ಸಂಸ್ತ್ರಯೋ ವರ್ಣಾ ಅಕಾರಾದ್ಯಾ ಭೃಗೂದ್ವಹ ।**
**ಧಾರ್ಯಂತೇ ಯೈಸ್ತ್ರಯೋ ಭಾವಾ ಗುಣಾನಾಮರ್ಥವೃತ್ತಯಃ ॥ ೭ ॥**

ತಸ್ಯ=ಆ ಓಂಕಾರಕ್ಕೆ ಅಕಾರಾದ್ಯಾಃ=ಅಕಾರ, ಉಕಾರ, ಮಕಾರವೆಂಬ ತ್ರಯಃ ವರ್ಣಾಃ ಆಸನ್=ಮೂರು ವರ್ಣಗಳು ಅವಯವಗಳಾಗಿವೆಯೋ ('ಸೋಽಯ-ಮಾತ್ಮಾಧ್ಯಕ್ಷರ ಓಂಕಾರೋ ಧೀಮಾತ್ರಂ ಪಾದಾ ಮಾತ್ರಾ ಅಕಾರೋಕಾರಮಕಾರಾ' ಎಂಬ ಪ್ರಸಿದ್ಧಿಯು.) ಯೈಃ ಯೈಃ=ಯಾವ ಅಕಾರಾದಿಗಳಿಂದ ತ್ರಯೋ ಭಾವಾಃ=ಭೂಃ ಭುವಃ ಸ್ವಃ ಎಂಬ ಮೂರು ವ್ಯಾಹೃತಿಗಳು ಧಾರ್ಯತೇ=ಧರಿಸಲ್ಪಟ್ಟಿವೆ. ಗುಣಾನಾಂ ಅರ್ಥವೃತ್ತಯಃ(ಭಾವಾಃ ಎಂಬುದಕ್ಕೆ ವಿಶೇಷಣ) ಗುಣಾಃ-ಸತ್ವಾದಿಗಳು ನಾಮಾನಿ-ಋಗಾದಿಗಳು ಅರ್ಥಾಃ-ಶಬ್ದಾದಿವಿಷಯಗಳು ವೃತ್ತಯಃ-ಜಾಗ್ರದಾದ್ಯವಸ್ಥೆಗಳು ಭವಂತಿ=ಉಂಟಾಗುವವು.(ಗುಣೈ ಸಹಿತಾಃ ನಾಮಾರ್ಥವೃತ್ತಯಃ ಯೈಸ್ತೇ ಎಂದು. ವಿಗ್ರಹ) ನಾಮ್ನಾಂ ಅರ್ಥವೃತ್ತಯಃ=ಪ್ರವೃತ್ತಿನಿಮಿತ್ತಗಳು ಎಂದು ಅರ್ಥ.

**ವಿಶೇಷ-** 'ಗುಣಾನಾಮರ್ಥವೃತ್ತಯಃ' ಎಂಬ ಪಾಠ ಸರಳವಲ್ಲ ವಿರಲಾರ್ಥವೂ ಆಗಿದೆ.(ಸ) ವಿಜಯಧ್ವಜರು-ವ್ಯಾಹೃತಿಗಳಿಂದ ಅಕ್ಷರಸಮಾಮ್ನಾಯ ವ್ಯಕ್ತವಾಗುವದು. ಜ್ಞಾನಾದಿಗಳಿಗೆ ವಿಷಯನಾದ ಶ್ರೀಹರಿಯಲ್ಲಿ ವೃತ್ತಿಯುಳ್ಳ ಎಂದು ಅರ್ಥಮಾಡಿರುವರು. ಸರ್ವವೇದೋಕ್ತಗುಣಾರ್ಣವನಾದ 'ನಾರಾಯಣಲೀಲಾ ವ್ಯಾಹರಣಾತ್' ಎಂದು ಹೇಳಿರುವದರಿಂದ ವ್ಯಾಹೃತಿಗಳು ಅಥವಾ ಭೂರಾದಿಲೋಕದಲ್ಲಿ ಶಬ್ದಾದಿಗುಣಗಳ ಭೋಗಪ್ರವರ್ತಕನು ಎಂದರ್ಥ ಮಾಡಿರುವರು.

**ತತೋಽಕ್ಷರ ಸಮಾಮ್ನಾಯಮಸೃಜದ್ ಭಗವಾನಜಃ ।**
**ಅಂತಸ್ಥೋಷ್ಮಸ್ವರಸ್ಪರ್ಶಹ್ರಸ್ವದೀರ್ಘಾದಿಲಕ್ಷಣಮ್ ॥ ೮ ॥**

ತತಃ=ವ್ಯಾಹೃತಿಗಳಿಂದ ಭಗವಾನ್ ಅಜಃ=ಬ್ರಹ್ಮದೇವರು ಅಕ್ಷರಸಮಾಮ್ನಾಯಂ=ಅಕಾರಾದಿ ಹಕಾರಾಂತ ಅಕ್ಷರಗಳ ಸಮೂಹವನ್ನು ಅಸೃಜತ್=ಹುಟ್ಟಿಸಿದನು.(ಸಮೀಚೀನ ಸಂಪ್ರದಾಯ ಗುರುಪಾರಂಪರ್ಯಕ್ರಮವನ್ನು ಎಂದರ್ಥ ವಿಜಯಧ್ವಜರು.) ಅಂತಸ್ಥೋಷ್ಮಸ್ವರಸ್ಪರ್ಶಹ್ರಸ್ವದೀರ್ಘಾದಿಲಕ್ಷಣಮ್=ಅಂತಸ್ಥ-ಯರಲವಗಳು, ಉಷ್ಮಾಣಃ-ಶಷಸಹಗಳು, ಸ್ವರಃ-ಅಜ್ವರ್ಣಗಳು ಸ್ಪರ್ಶ-ಕಕಾರದಿಂದ ಮಕಾರದವರೆಗೆ ಇವುಗಳನ್ನು ಹ್ರಸ್ವ=ಏಕಮಾತ್ರಾ, ದೀರ್ಘ-ದ್ವಿಮಾತ್ರಾ, ಆದಿ-ತ್ರಿಮಾತ್ರೆ, ಪ್ಲುತ-ಅರ್ಧಮಾತ್ರಕವಾದ ವ್ಯಂಜನಗಳು ಇವುಗಳನ್ನು ವರ್ಣಸಮಾಮ್ನಾಯವೆಂದು ತಿಳಿಯಬೇಕು.

**ತೇನಾಸೌ ಚತುರೋ ವೇದಾಂಶ್ಚತುರ್ಭಿರ್ವದನೈರ್ವಿಭುಃ ।**
**ಸವ್ಯಾಹೃತಿಕಾನ್ ಸೋಂಕಾರಾಂಶ್ಚಾತುರ್ಹೋತ್ರವಿವಕ್ಷಯಾ ॥ ೯ ॥**

ಅಸೌ ವಿಭುಃ=ಈ ಸಮರ್ಥನಾದ ಬ್ರಹ್ಮದೇವನು ಚಾತುರ್ಹೋತ್ರವಿವಕ್ಷಯಾ =ನಾಲ್ಕು ಜನ ಹೋತೃಗಳು ಮಾಡುವ ಕ್ರಿಯೆಗಳನ್ನು ಹೇಳುವ ಉದ್ದೇಶದಿಂದ ಚತುರಃ ವೇದಾನ್=ನಾಲ್ಕು ವೇದಗಳನ್ನು ತೇನ=ಆ ಅಕ್ಷರ ಸಮಾಮ್ನಾಯದಿಂದ ಸವ್ಯಾಹೃತಿಕಾನ್ =ವ್ಯಾಹೃತಿಗಳಿಂದ ಸಹಿತವಾದವನ್ನು ಸೋಂಕಾರಾನ್=ಓಂಕಾರ ಸಹಿತವಾದವನ್ನು ಅಧ್ಯಾಪಯತ್=ಉಪದೇಶಿಸಿದನು.

**ಪುತ್ರಾನಧ್ಯಾಪಯತ್‌ತಾಂಸ್ತು ಮಹರ್ಷೀನ್ ಬ್ರಹ್ಮಕೋವಿದಾನ್ ।**
**ತೇ ತು ಧರ್ಮೋಪದೇಷ್ಟಾರಃ ಸ್ವಪುತ್ರೇಭ್ಯ ಸಮಾದಿಶನ್ ॥ ೧೦ ॥**

ಬ್ರಹ್ಮಕೋವಿದಾನ್=ವೇದವಿಚಾರ ಚತುರರಾದ ಮಹರ್ಷೀನ್=ದೊಡ್ಡ ಜ್ಞಾನಿಗಳಾದ ಪುತ್ರಾನ್=ಮಕ್ಕಳಿಗೆ ತಾನ್=ವೇದಗಳನ್ನು ಅಧ್ಯಾಪಯತ್=ಕಲಿಸಿದನು. ಧರ್ಮೋಪ-ದೇಷ್ಟಾರಃ=ಧರ್ಮೋಪದೇಶಕರಾದ ತೇ ತು=ಅವರಾದರೂ ಸ್ವಪುತ್ರೇಭ್ಯಃ=ತಮ್ಮ ಮಕ್ಕಳಿಗೆ(ಬ್ರಹ್ಮಪುತ್ರರು)ಸಮಾದಿಶನ್=ವೇದವನ್ನು ಉಪದೇಶಿಸಿದರು. ಇದರಿಂದ ಇವರು ಸನಕಾದಿಗಳಿಂದ ಭಿನ್ನರಾದ ಪುತ್ರರೆಂದು ತಿಳಿಯುವದು.

**ತೇ ಪರಂಪರಯಾ ಪ್ರಾಪ್ತಾಸ್ತತ್ತಚ್ಛಿಷ್ಯೈರ್ಧೃತವ್ರತೈಃ ।**
**ಚತುರ್ಯುಗೇಷ್ವಥ ವ್ಯಸ್ತಾ ದ್ವಾಪರಾದೌ ಮಹರ್ಷಿಭಿಃ ॥ ೧೧ ॥**

ತೇ=ಆ ವೇದಗಳು ಚತುರ್ಯುಗೇಷು=ನಾಲ್ಕು ಯುಗಗಳಲ್ಲಿ ಧೃತವ್ರತೈಃ=ನಿಯಮ ನಿಷ್ಠರಾದ ತತ್ತತ್‌ಶಿಷ್ಯೈಃ=ಅವರವರ ಶಿಷ್ಯರಿಂದ ಪರಂಪರಯಾ ಪ್ರಾಪ್ತಾಃ= ಚತುರ್ಮುಖನಿಂದ ಹೇಗೆ ಅಧ್ಯಾಪಿಸಲ್ಪಟ್ಟವೋ ಹಾಗೆ ಅಧ್ಯಯನ ಮಾಡಲ್ಪಟ್ಟವು. ಇದಕ್ಕೆ ಅಪವಾದ ಅಥ=ತ್ರೇತಾಯುಗದ ನಂತರ ದ್ವಾಪರಾದೌ=ದ್ವಾಪರಯುಗದಲ್ಲಿ (ಕೃಷ್ಣಾವತಾರಕ್ಕೆ ಮುಂಚೆ)ಮಹರ್ಷಿಭಿಃ=ಋಷಿಗಳಿಂದ ವ್ಯಸ್ತಾಃ=ವಿಭಾಗವನ್ನು ಪಡೆದವು.

*ಋಷಿಗಳು ವೇದವಿಭಾಗಮಾಡಿದ ಬಗೆಯನ್ನು ಹೇಳುವರು.*

**ಕ್ಷೀಣಾಯುಷಃ ಕ್ಷೀಣಸತ್ವಾನ್ ದುರ್ಮೇಧಾನ್ ವೀಕ್ಷ್ಯ ಕಾಲತಃ ।**
**ವೇದಾನ್ ಬ್ರಹ್ಮರ್ಷಯೋ ವ್ಯಸ್ಯನ್ ಹೃದಿಸ್ಥಾಚ್ಯುತನೋದಿತಾಃ ॥ ೧೨ ॥**

ಕಾಲತಃ=ಕಾಲದ ಪ್ರಭಾವದಿಂದ ಕ್ಷೀಣಾಯುಷಃ=ಅಲ್ಪಾಯುಷಗಳಾದ ಕ್ಷೀಣ ಸತ್ವಾನ್=ದುರ್ಬಲರಾದ ದುರ್ಮೇಧಾನ್=ಅಲ್ಪಮತಿಗಳಾದ ಜನರನ್ನು ವೀಕ್ಷ್ಯ=ನೋಡಿ

ಹೃದಿಸ್ಥಾಚ್ಯುತನೋದಿತಃ=ಹೃದಯದಲ್ಲಿರುವ ಪರಮಾತ್ಮನಿಂದ ಪ್ರೇರಿತರಾಗಿ ಬ್ರಹ್ಮರ್ಷಯಃ=ಋಷಿಗಳು ವೇದಾನ್ ವ್ಯಸ್ಯನ್=ವೇದ ವಿಭಾಗ ಮಾಡಿದರು. (ಅಚ್ಯುತನೋದಿತಾಃ ಎಂದು ಹೇಳಿದ್ದರಿಂದ ಚತುರ್ಮುಖನು ಪರಬ್ರಹ್ಮನ ಅಧೀನನೆಂದು ತಿಳಿಯುವರು.)

**ಅಸ್ಮಿನ್ನಪ್ಯಂತರೇ ಬ್ರಹ್ಮನ್ ಭಗವಾನ್ ಲೋಕಭಾವನಃ ।**
**ಬ್ರಹ್ಮೇಶಾದ್ಯೈರ್ಲೋಕಪಾಲೈರ್ಯಾಚಿತೋ ಧರ್ಮಗುಪ್ತಯೇ ॥ ೧೩ ॥**

**ಪರಾಶರಾತ್ ಸತ್ಯವತ್ಯಾಮಂಶಾಂಶಕಲಯಾ ವಿಭುಃ ।**
**ಅವತೀರ್ಣೋ ಮಹಾಭಾಗ ವೇದಂ ಚಕ್ರೇ ಚತುರ್ವಿಧಮ್ ॥ ೧೪ ॥**

ಹೇ ಬ್ರಹ್ಮನ್=ಶೌನಕರೇ ಅಸ್ಮಿನ್ ಅಪಿ ಅಂತರೇ=ಈ ಶ್ರಾದ್ಧ ದೇವ ಮನ್ವಂತರದಲ್ಲಿ (ಸ್ವಾಯಂಭುವ ಮನ್ವಂತರದಲ್ಲಿ) ಲೋಕಭಾವನಃ=ಜಗದುತ್ಪಾದಕನಾದ ಭಗವಾನ್= ಶ್ರೀಮನ್ನಾರಾಯಣನು ಬ್ರಹ್ಮೇಶಾದ್ಯೈಃ=ಚತುರ್ಮುಖ-ರುದ್ರ ಮೊದಲಾದ ಲೋಕಪಾಲೈಃ=ಲೋಕಪಾಲಕರಿಂದ ಧರ್ಮಗುಪ್ತಯೇ=ಧರ್ಮದ ರಕ್ಷಣೆಗಾಗಿ ಯಾಚಿತಃ=ಪ್ರಾರ್ಥಿತನಾಗಿ ಪರಾಶರಾತ್=ಪರಾಶರ ಋಷಿಗಳಿಂದ ಸತ್ಯವತ್ಯಾಂ= ಸತ್ಯವತಿಯಲ್ಲಿ ಅಂಶಾಂಶಕಲಯಾ=ಪದ್ಮನಾಭನ ಅಭಿನ್ನಾಂಶ ಕಲೆಯಿಂದ ಅವತೀರ್ಣಃ =ಅವತರಿಸಿ ವಿಭುಃ=ಸಮರ್ಥನಾದ ಭಗವಂತನು ವೇದಂ=ರಾಶೀಭೂತ ವೇದಗಳನ್ನು ಚತುರ್ವಿಧಂ ಚಕ್ರೇ=ನಾಲ್ಕು ವಿಧವಾಗಿ ಮಾಡಿದನು.

*ಹಿಂದೆ ಹೇಳಿದ ವಿಷಯವನ್ನೇ ವಿವರಿಸುವರು*

**ಋಗಥರ್ವಯಜುಸ್ಸಾಮ್ನಾಂ ರಾಶೀನುದ್ಧೃತ್ಯ ವರ್ಗಶಃ ।**
**ಚತಸ್ರಃ ಸಂಹಿತಾಶ್ಚಕ್ರೇ ಸೂತ್ರೈರ್ಮಣಿಗಣಾನಿವ ॥ ೧೫ ॥**

ಋಗಥರ್ವಯಜುಸ್ಸಾಮ್ನಾಂ=ಋಗ್ವೇದ-ಅಥರ್ವಣವೇದ-ಯಜುರ್ವೇದ-ಸಾಮವೇದ ಇವುಗಳ ರಾಶೀನ್=ರಾಶಿಯನ್ನು ವರ್ಗಶಃ=ವರ್ಗವರ್ಗಗಳನ್ನಾಗಿ ಸೂತ್ರೈಃ=ದಾರದಲ್ಲಿ ಪೋಣಿಸಿದ ಮಣಿಗಣಾನಿವ=ರತ್ನಗಳಂತೆ ಉದ್ಧೃತ್ಯ=ತೆಗೆದು ಚತಸ್ರಃ ಸಂಹಿತಾಃ ಚಕ್ರೇ=ನಾಲ್ಕು ಸಂಹಿತೆಗಳನ್ನು ಮಾಡಿದನು.

**ವಿಶೇಷ**-ಇಲ್ಲಿ 'ಋಗ್‌ಯಜುಸಾಮಾರ್ಥವಾಣಾಂ' ಎಂದು ಹೇಳಬೇಕಾದಲ್ಲಿ ಈ ರೀತಿ ಹೇಳಿದ್ದರಿಂದ ವೇದಗಳಲ್ಲಿ ಭೇದಕಗಳು ನಾಶವಾದುದರಿಂದ ಪಾರಾವರ್ಯ- ವಿರಳಿಲ್ಲವೆಂದು ಸೂಚಿಸುವರು. ಇದನ್ನೇ ಅಥರ್ವಣಭಾಷ್ಯದಲ್ಲಿ 'ತಸ್ಮಾದ್ವೇದೇ ನ

ಕಿಂಚನ ಪಾರಾವರ್ಯಂ' ಎಂದಿದ್ದಾರೆ. ಅಂದರೆ ಎಲ್ಲ ವೇದದಿಂದಲೂ ಕೃತಯುಗದಲ್ಲಿ ಶ್ರೀಹರಿಯನ್ನೇ ಪೂಜಿಸುತ್ತಿದ್ದುದರಿಂದ ಯಾವುದೂ ಹೆಚ್ಚು ಕಡಿಮೆ ಎಂಬುದಿರಲಿಲ್ಲ ಎಂದರ್ಥ. ಗೀತಾತಾತ್ಪರ್ಯ ೧೦ನೇ ಅಧ್ಯಾಯದಲ್ಲಿ 'ವೇದೇಷು ಋಗ್ವೇದ ಏವ ಚ' ಎಂದು ವಿಭೂತಿತ್ವ ಹೇಳಿರುವದರಿಂದ ಪರಾವರತೆ ಇಲ್ಲವೇಕೆ ಎಂದರೆ ಅಲ್ಲಿ ಟೀಕೆಯಲ್ಲಿಯೇ 'ಋಗ್ವೇದ ಏವ' ಎಂಬುದಕ್ಕೆ ಸ್ವರೂಪತಃ ಉತ್ತಮತ್ವ ಹೇಳುವ (ವಿವಕ್ಷೆಯಿಂದ)ಇಚ್ಛೆಯಿಂದ ಹೊರಟಿದೆ ಎಂದು ಹೇಳಿದ್ದರಿಂದ ಇಲ್ಲಿ(ಅಥರ್ವಣದಲ್ಲಿ) ಹೇಳಿದ ಪ್ರತಿಪಾದ್ಯಾದಿಭೇದ ಪ್ರಯುಕ್ತ ಪಾರಾವರ್ಯವಿಲ್ಲವೆಂಬುದಕ್ಕೆ ತೊಂದರೆ ಏನಿಲ್ಲ. ಹಾಗಿದ್ದರೆ 'ವೇದಾನಾಂ ಸಾಮ ವೇದೋಽಸ್ಮಿ' ಎಂದು ಗೀತೆಯಲ್ಲಿ ಹೇಳಿದೆಯಲ್ಲ ಎಂದರೆ ಅದಕ್ಕೆ ಸಜಾತೀಯ ಏಕದೇಶಾಪೇಕ್ಷಯಾ ಆಧಿಕ್ಯ ಹೇಳುವಲ್ಲಿ ತಾತ್ಪರ್ಯ ಹೊರತು ಋಗ್ವೇದಾದಿ ಮೂರರಕ್ಕಿಂತ ಉತ್ತಮವೆಂದಲ್ಲ. 'ಕ್ವಚಿತ್ ಸಾಮ್ನಃ ಆಧಿಕ್ಯವಚನಂ ತು ಅಭಿಮಾನ್ಯಪೇಕ್ಷಯಾ' ಎಂದು ಅದರ ತಾತ್ಪರ್ಯದಲ್ಲಿಯೇ ಹೇಳಿದೆ. ಇನ್ನು 'ಋಚಃ ಶ್ರೀರ್ಗಿರುಮಾದ್ಯಾಶ್ಚ' ಎಂದು ಹೇಳಿರುವುದರಿಂದ ಋಗ್ವೇದವು ರಮಾಭಿಮನ್ಯಮಾನವಾಗಿದೆ. ಸಾಮವೇದಕ್ಕಾದರೂ 'ಸಾಮ್ನಃ ಪ್ರಾಣಶಿವಾದಯಃ' ಎಂದು ಹೇಳಿದ ಪ್ರಕಾರ ಪ್ರಾಣದೇವರು ಅಭಿಮಾನಿಗಳು. ಕಾರಣ ಅಭಿಮಾನಿ ಅಪೇಕ್ಷಯಾ ಉತ್ತಮತ್ವ ಹೇಗೆ ಬಂದೀತು ಎಂದರೆ ಗೀತಾತಾತ್ಪರ್ಯ ಮತ್ತು ಟೀಕೆಗಳಲ್ಲಿ 'ತದಪಿ ಯೋಗ್ಯಂ' ಎಂದು ಹೇಳಿದ್ದರಿಂದ ಲಕ್ಷ್ಮೀದೇವಿಯನ್ನು ಬಿಟ್ಟು ಭಾರತಿ ಮೊದಲಾದ ಋಗಭಿಮಾನಿಗಳಿಗಿಂತ ಸ್ವಾಹಾಭಿಮಾನಿ ಪ್ರಾಣನಿಗೆ ಆಧಿಕ್ಯವಿದೆ ಎಂಬ ಅಭಿಪ್ರಾಯದಿಂದ ಅಭಿಮಾನಿವಿವಕ್ಷಾದಿಂದ ಸಾಮವೇದಕ್ಕೆ ಆಧಿಕ್ಯವನ್ನು ಸ್ಪಷ್ಟವಾಗಿ ಹೇಳಲಾಗಿದೆ ಎಂದು ಭಾವ.

**ತಾಸಾಂ ಸ ಚತುರಃ ಶಿಷ್ಯಾನುಪಹೂಯ ಮಹಾಮತಿಃ ।**
**ಏಕೈಕಾಂ ಸಂಹಿತಾಂ ಬ್ರಹ್ಮನ್ನೇಕೈಕಸ್ಮೈ ದದೌ ವಿಭುಃ ॥ ೧೬ ॥**

ಹೇ ಬ್ರಹ್ಮನ್=ವೈಶಂಪಾಯನರೇ ಮಹಾಮತಿಃ=ಸರ್ವಜ್ಞರಾದ ವೇದವ್ಯಾಸದೇವರು ಚತುರಃ=ನಾಲ್ಕು ಶಿಷ್ಯಾನ್=ಶಿಷ್ಯರನ್ನು ಉಪಹೂಯ=ಕರೆದು ತಾಸಾಂ=ಅವುಗಳಲ್ಲಿ ಏಕೈಕಾಂ ಸಂಹಿತಾಂ=ಒಂದೊಂದನ್ನು ಏಕೈಕಸ್ಮೈ=ಒಬ್ಬೊಬ್ಬರಿಗೆ ದದೌ=ಕೊಟ್ಟರು **ವಿಶೇಷ-** ವಿಭುಃ=ವಿಭಾಜಕನಾದ್ದರಿಂದ ವಿಭುವೆನಿಸಿದ ಚತುರಃ=(ಎಂಬುದು ಪ್ರಥಮಾಂತವಾಗಿ ವ್ಯಾಸರಿಗೆ ವಿಶೇಷಣವೂ ಆಗಿದೆ.)ಕುಶಲನಾದ ಎಂದರ್ಥ. ಸೂತರು ಇಲ್ಲಿ ಶುಕಾಚಾರ್ಯರನ್ನು ಹೇಳಲಿಲ್ಲ ಎಂದರೆ ಅವರಿಗೆ ಸಾಕ್ಷಾತ್

ಸಂಪೂರ್ಣ ವೇದವನ್ನು ದಾನ ಮಾಡಿದ್ದರಿಂದ ಅವರನ್ನೂ ಇಟ್ಟುಕೊಳ್ಳಬೇಕು. ಭಾರತದಲ್ಲಿ ಹೀಗೆ ಹೇಳಿದೆ.

'ಸುಮಂತುಂ ಚ ಮಹಾಭಾಗಂ ವೈಶಂಪಾಯನಮೇವ ಚ । ಜೈಮಿನಿಂ ಚ ಮಹಾಪ್ರಾಜ್ಞ ಪೈಲಂ ಚಾಪಿ ತಪಸ್ವಿನಮ್ । ಯಸ್ಯ ಶಿಷ್ಯೈಃ' ಎಂದಾರಂಭಿಸಿ

ಶಿಷ್ಯಾ ಊಚುಃ- 'ಮಹತಾ ತೇಜಸಾ ಯುಕ್ತಾ ಯಶಸಾ ಸ್ಮ ವಿವರ್ಧಿತಾಃ ಎಂದು ಮಧ್ಯದಲ್ಲಿ ಹೇಳಿ 'ಪುನಃ ಪ್ರಾಂಜಲಯೋ ಭೂತ್ವಾ ಪ್ರಣಮ್ಯ ಶಿರಸಾ ಗುರುಮ್ । ಊಚುಸ್ತೇ ಸಂಹಿತಾಂ ರಾಜನ್ನಿದಂ ವಚನಮುತ್ತಮಮ್ । ಯದಿ ಪ್ರೀತ ಉಪಾಧ್ಯಾಯೋ ಧನ್ಯೋಽಸ್ಮಿ ಮುನಿಸತ್ತಮ । ಕಾಂಕ್ಷಾಮಸ್ತು ವಯಂ ಸರ್ವೇ ವರದಾ ತು ಮಹರ್ಷಿಣಾ । ಷಷ್ಠ ಶಿಷ್ಯೋನ ತತ್ ಖ್ಯಾತಿಂ ಗಚ್ಛೇದತ್ರ ಪ್ರಸೀದ ನಃ । ಚತ್ವಾರಸ್ತೇ ವಯಂ ಶಿಷ್ಯಾ ಗುರುಪುತ್ರಸ್ತು ಪಂಚಮಃ । ಇಹ ವೇದಾನ್ ಪ್ರತಿಷ್ಠೇರನ್ನೇಷ ನಃ ಕಾಂಕ್ಷಿತೋ ವರಃ ।' ಇತಿ

ಸಾರಾಂಶ- ಸುಮಂತು, ವೈಶಂಪಾಯನ, ಜೈಮಿನಿ, ಪೈಲ, ಈ ನಾಲ್ವರು ಹಾಗು ಗುರುಪುತ್ರರಾದ ಶುಕಾಚಾರ್ಯರು ವೇದವ್ಯಾಸರಲ್ಲಿ ಅಧ್ಯಯನ ಮಾಡಿ ಅವರೆಲ್ಲರೂ ಸೇರಿ ಗುರುಗಳು ಪ್ರೀತರಾದರೇ ನಾವು ಧನ್ಯರು ಆರನೆಯ ಶಿಷ್ಯನು ಪ್ರಸಿದ್ಧನಾಗುವದು ಬೇಡ ಎಂದು ವರವನ್ನು ಬೇಡಿಕೊಳ್ಳೋಣ ಎಂಬುದಾಗಿ ಚಿಂತಿಸಿ ಗುರುಗಳನ್ನು ಪ್ರಾರ್ಥಿಸಿದರು. ನಿಮ್ಮ ಶಿಷ್ಯರು ನಾವು ನಾಲ್ವರು, ಗುರುಪುತ್ರ ಶುಕರು ಐದನೇಯವರು ಹೊರತು ಆರನೇಯವರು ವೇದಾಚಾರ್ಯರು ಎಂಬ ಪ್ರಸಿದ್ಧಿಯನ್ನು ಹೊಂದುವದು ಬೇಡ ಎಂದು. ಗುರುಗಳ ಅನುಗ್ರಹದಿಂದ ಇವರೇ ವೇದಗಳನ್ನು ಸ್ಥಾಪಿಸುವಂತಾಯಿತು. ಈ ವೃತ್ತಾಂತವನ್ನು ಹೇಳುವಾಗ ಶುಕಾಚಾರ್ಯರನ್ನೂ ಸೇರಿಸಿಕೊಳ್ಳಬೇಕು ಎಂದು ಹೇಳುವ ಮೂಲಕ ಶುಕಾಚಾರ್ಯರು ವೇದವ್ಯಾಸರಿಂದ ವೇದೋಪದೇಶವನ್ನು ಪಡೆದಿದ್ದಾರೆ ಎಂದು ತಿಳಿಸಿದಂತಾಗಿರುತ್ತದೆ. ಇನ್ನು ಕಾಶಕೃತ್ಸ್ನ ಔಡಲೋಮಿ ಮುಂತಾದವರು ಬ್ರಹ್ಮಸೂತ್ರದಲ್ಲಿ ಹೇಳಿರುವದರಿಂದ ಪ್ರಸಿದ್ಧರಾಗಿರುವರು. ಆರನೇಯವರು ಬೇಡ, ಇಲ್ಲವೆಂದು ಹೇಳಿದುದು ಎಂದರೆ ವೇದಾಚಾರ್ಯರೆಂಬ ಪ್ರಸಿದ್ಧಿ ಆರನೇಯವರಿಗೆ ಬೇಡವೆಂದು ವರ ನೀಡಿದ್ದು ಹೊರತು ಶಿಷ್ಯರೇ ಬೇಡವೆಂದಲ್ಲ. ಆದ್ದರಿಂದ ವಿರೋಧವಿಲ್ಲ.

*ಯಾರಿಗೆ ಯಾವುದು ಎಂಬುದನ್ನು ವಿವರಿಸುವರು.*

**ಪೈಲಾಯ ಸಂಹಿತಾಂ ಆದ್ಯಾಂ ಬಹ್ವೃಚಾಖ್ಯಾಮುವಾಚ ಹ ।**
**ವೈಶಂಪಾಯನಸಂಜ್ಞಾಯ ನಿಗದಾಖ್ಯಂ ಯಜುರ್ಗಣಮ್** ॥ ೧೭ ॥

**ಸಾಮ್ನಾಂ ಜೈಮಿನಯೇ ಪ್ರಾಹ ತಥಾ ಛಂದೋಗಸಂಹಿತಾಮ್ ।**
**ಅಥರ್ವಾಂಗಿರಸಾಂ ನಾಮ ಸ್ವಶಿಷ್ಯಾಯ ಸುಮಂತವೇ ॥ ೧೮ ॥**

ಬಹ್ವೃಚಾಖ್ಯಾಂ=ಬಹ್ವೃಚ ಎಂಬ ಆದ್ಯಾಂ ಸಂಹಿತಾಂ=ಮೊದಲನೆಯ ಋಕ್ ಸಂಹಿತೆಯನ್ನು ಪೈಲಾಯ=ಪೈಲರಿಗೆ ಉವಾಚ=ಹೇಳಿದರು. 'ಋಚಾಂ ಪ್ರವರ್ತಕಂ ಪೈಲಂ' ಎಂದಿದೆ. ವೈಶಂಪಾಯನಸಂಜ್ಞಾಯ=ವೈಶಂಪಾಯನ ಎಂಬ ಹೆಸರಿನ ಶಿಷ್ಯನಿಗೆ ನಿಗದಾಖ್ಯಂ=(ಕೂಡಿಸಿ ಹೇಳುವದರಿಂದ) (ಸಂಶ್ಲಿಷ್ಟತಯಾ ನಿಗದ್ಯತೇ ಇತಿ ನಿಗದಃ) ನಿಗದವೆಂಬ ಯಜುರ್ಗಣಂ=ಯಜುರ್ವೇದವನ್ನು ಉವಾಚ=ಹೇಳಿದರು. 'ಯಜುಷಾಂ ಚ ಪ್ರವರ್ತಕಂ, ವೈಶಂಪಾಯನಮೇವೈಕಂ ತೃತೀಯಂ ಸೂರ್ಯಮೇವ ಚ' ಎಂದಿದೆ. ಜೈಮಿನಯೇ=ಜೈಮಿನಿಗಳಿಗೆ ಛಂದೋಗಸಂಹಿತಾಂ ಸಾಮ್ನಾಂ ಸಂಹಿತಾಂ=ಛಂದೋಗ-ಸಂಹಿತೆಯೆಂದು ಮತ್ತು ಸಾಮಸಂಹಿತೆ ಎಂದು ಪ್ರಸಿದ್ಧವಾದ ಸಾಮವೇದವನ್ನು ಉವಾಚ=ಹೇಳಿದರು. 'ಜೈಮಿನಿಸ್ತಥಾ ಛಂದೋಗಸಂಹಿತಾಂ ಚ ಪ್ರಾಹ । ಚಕ್ರೇಽಥ ಜೈಮಿನಿಃ ಸಾಮ್ನಾಂ' ಎಂದು ಹೇಳಿದೆ. (ಅಥವಾ ಸಾಮ್ನಾಂ=ಸಾಮವೇದದಿಂದ ಉದ್ಧೃತವಾದ=ಛಂದೋಗಸಂಹಿತೆಯನ್ನು ಉಪದೇಶಿಸಿದನು. ಎಂದೂ ಅನ್ವಯ ಮಾಡಬಹುದು.) ಸ್ವಶಿಷ್ಯಾಯ=ತಮ್ಮ ಶಿಷ್ಯನಾದ ಸುಮಂತವೇ= ಸುಮಂತನಿಗೆ ಅಂಗಿರಸಾಂ ನಾಮ=ಅಂಗೀರಸವೆಂದು ಪ್ರಸಿದ್ಧವಾದ ಅಥರ್ವಾ= ಅಥರ್ವಣವೇದವನ್ನು ಪ್ರಾಹ=ಹೇಳಿದರು. 'ಅಥರ್ವಾಂಗಿರಸಾಮಪಿ ಸುಮಂತಂ ಭಾರತಸ್ಯಾಪಿ ವೈಶಂಪಾಯನಮಾದಿಶತ್' ಎಂದು ನಿರ್ಣಯದಲ್ಲಿದೆ.

**ಪೈಲಃ ಸ್ವಸಂಹಿತಾಮೂಚೇ ಇಂದ್ರಪ್ರಮತಯೇ ಮುನಿಃ ।**
**ಬಾಷ್ಕಲಾಯ ಚ ಸೋಽಪ್ಯಾಹ ಶಿಷ್ಯೇಭ್ಯಃ ಸಂಹಿತಾಂ ಸ್ವಕಾಮ್ ॥ ೧೯ ॥**

ಪೈಲಃ ಮುನಿಃ=ಪೈಲ ಋಷಿಯು ಸ್ವಸಂಹಿತಾಂ=ತಾನು ಅಧ್ಯಯನ ಮಾಡಿದ ಋಕ್ ಸಂಹಿತೆಯನ್ನು ಇಂದ್ರಪ್ರಮತಯೇ ಊಚೇ=ಇಂದ್ರಪ್ರಮತಿ ಎಂಬ ಶಿಷ್ಯನಿಗೆ ಹೇಳಿದನು. ಸಃ=ಇಂದ್ರಪ್ರಮತಿಯು ಬಾಷ್ಕಲಾಯ=ಬಾಷ್ಕಲನಿಗೆ ಸಃ ಅಪಿ=ಬಾಷ್ಕಲರೂ ಸ್ವಶಿಷ್ಯೇಭ್ಯಃ=ತನ್ನ ಶಿಷ್ಯರಿಗೆ ಸ್ವಕಾಂ=ತನ್ನ ಸಂಹಿತಾಂ(ತನ್ನಿಂದ ಅಧೀತವಾದ ಎಂದರ್ಥ.) ಸಂಹಿತೆಯನ್ನು ಆಹ=ಹೇಳಿದನು.

*ಶಿಷ್ಯರ ಹೆಸರನ್ನು ಹೇಳುವರು.*

**ಚತುರ್ಧಾ ವ್ಯಸ್ಯ ಬೋಧ್ಯಾಯ ಯಾಜ್ಞವಲ್ಕ್ಯಾಯ ಭಾರ್ಗವ ।**
**ಪರಾಶರಾಯಾಗ್ನಿಮಿತ್ರೇ ಇಂದ್ರಪ್ರಮತಿರಾತ್ಮವಾನ್ ॥ ೨೦ ॥**

ಹೇ ಭಾರ್ಗವ=ಶೌನಕರೇ ಆತ್ಮವಾನ್=ಪರಮಾತ್ಮಜ್ಞಾನಿಯು ಮನಸ್ವಿಯು ಆದ ಇಂದ್ರಪ್ರಮತಿಃ=ಇಂದ್ರಪ್ರಮತಿಯು ಚತುರ್ಧಾ ವ್ಯಸ್ಯ=ಋಕ್‌ಸಂಹಿತೆಯನ್ನು ನಾಲ್ಕುರೀತಿ ವಿಭಾಗ ಮಾಡಿ ಬೋಧ್ಯಾಯ=ಶಿಷ್ಯನಾದ ಯಾಜ್ಞವಲ್ಕ್ಯಾಯ=ಯಾಜ್ಞವಲ್ಕ್ಯರಿಗೆ ಪರಾಶರಾಯ=ಪರಾಶರರಿಗೆ ಅಗ್ನಿಮಿತ್ರೇ=ಅಗ್ನಿಮಿತ್ರನಿಗೆ ಊಚಿವಾನ್=ಹೇಳಿದನು.

**ಅಧ್ಯಾಪಯತ್ ಸಂಹಿತಾಂ ಸ್ವಾಂ ಮಾಂಡೂಕೇಯಮೃಷಿಂ ಕವಿಮ್।**
**ತಸ್ಯಶಿಷ್ಯೋ ವೇದಮಿತ್ರ ಸೌಭರ್ಯಾದಿಭ್ಯ ಊಚಿವಾನ್ ॥ ೨೦ ॥**

ಅಗ್ನಿಮಿತ್ರನು ಸ್ವಾಂ ಸಂಹಿತಾಂ=ತಾನು ಅಧ್ಯಯನ ಮಾಡಿದ ಸಂಹಿತೆಯನ್ನು ಕವಿಂ ಅಧ್ಯಾಪಯತ್=ಕವಿ ಎಂಬುವನಿಗೆ ಕಲಿಸಿದನು. ಕವಿಃ=(ಸತ್ಯಧರ್ಮರ ಪಾಠ) ಕವಿಯು ಮಾಂಡೂಕೇಯಂ ಋಷಿಂ=ಮಾಂಡೂಕೇಯ ಎಂಬ ಶಿಷ್ಯನಿಗೆ ಅಧ್ಯಾಪಯತ್=ಕಲಿಸಿದನು ತಸ್ಯ=ಮಾಂಡೂಕೇಯನ ಶಿಷ್ಯಃ=ಶಿಷ್ಯನಾದ ವೇದಮಿತ್ರಃ=ವೇದಮಿತ್ರನು ಸೌಭರ್ಯಾದಿಭ್ಯಃ=ಸೌಭರಿ ಮೊದಲಾದವರಿಗೆ ಊಚಿವಾನ್=ಹೇಳಿದನು.

**ಶಾಕಲ್ಯಸ್ತತ್ಸುತಸ್ವಾಂತು ಪಂಚಧಾ ವ್ಯಸ್ಯ ಸಂಹಿತಾಮ್।**
**ವಾತ್ಸ್ಯ ಮೌದ್ಗಲ್ಯ ಶಾಲೀಯ ಗೋಸತ್ಯಶಿಶಿರೇಷ್ವಧಾತ್ ॥ ೨೧ ॥**

ತತ್ಸುತಃ=ವೇದಮಿತ್ರನ ಮಗನಾದ ಶಾಕಲ್ಯಃ=ಶಾಕಲ್ಯನು ತಾಂ ಸಂಹಿತಾಂ=ಆ ಸಂಹಿತೆಯನ್ನು ಪಂಚಧಾ ವ್ಯಸ್ಯ=ಐದಾಗಿ ವಿಭಜಿಸಿ ವಾತ್ಸ್ಯ , ಮೌದ್ಗಲ್ಯ, ಶಾಲೀಯ, ಗೋಸತ್ಯ, ಶಿಶಿರ ಹೀಗೆ ಐವರಲ್ಲಿ ಅಧಾತ್=ಇರಿಸಿದನು (ಉಪದೇಶಿಸಿದನು).

**ಜಾತೂಕರ್ಣ್ಯಶ್ಚ ತಚ್ಛಿಷ್ಯಃ ಸನಿರುಕ್ತಾಂ ಸ್ವಸಂಹಿತಾಮ್ ।**
**ವ್ಯಲೀಕಪೈಂಗಿಪೈಲಾಲವಿರಜೇಭ್ಯೋ ದದೌ ಮುನಿಃ ॥ ೨೨ ॥**

ತಚ್ಛಿಷ್ಯಃ=ಶಾಕಲ್ಯನ ಶಿಷ್ಯನಾದ ಜಾತೂಕರ್ಣ್ಯಃ=ಈ ಹೆಸರಿನ ಪರಾಶರಪುತ್ರನು ಸನಿರುಕ್ತಾಂ=ನಿರುಕ್ತ ಸಹಿತನಾದ ಸ್ವಸಂಹಿತಾಂ=ತಾನು ಓದಿದ ಸಂಹಿತೆಯನ್ನು ವ್ಯಲೀಕಪೈಂಗಿಪೈಲಾಲವಿರಜೇಭ್ಯಃ=ವ್ಯಲೀಕ ಪೈಂಗಿ ಪೈಲಾಲ ವಿರಜರೆಂಬ ನಾಲ್ಕು ಜನರಿಗೆ ದದೌ=ಉಪದೇಶಿಸಿದನು.

**ವಿಶೇಷ-** 'ಪಾರಾಶರ್ಯೋ ಜಾತೂಕರ್ಣ್ಯಃ ಪರಾಶರಸುತಾ ಉಭೌ । ವಿಪ್ರಾಯಾಮೇವ ಭಾರ್ಯಾಯಾಂ ತೃತೀಯಃ ಕೃಷ್ಣ ಏವ ಚ ।' ಎಂದು ಬೃಹದಾರಣ್ಯಭಾಷ್ಯದಲ್ಲಿದೆ.

**ಬಾಷ್ಕಲಿಃ ಪ್ರತಿಶಾಖಾಭ್ಯೋ ವಾಲಖಿಲ್ಯಾಖ್ಯಸಂಹಿತಾಮ್ ।**
**ಚಕ್ರೇ ಬಾಲಾಯನಿಗಾರ್ಗ್ಯಕಾಸಾರಾಶ್ಚೈವ ತಾಂ ದಧುಃ ॥ ೨೪ ॥**

ಬಾಷ್ಕಲಿಃ=ಹಿಂದೆ ಹೇಳಿದ ಬಾಷ್ಕಲ ಪುತ್ರನು ಪ್ರತಿಶಾಖಾಭ್ಯಃ=ಹಿಂದೆ ಹೇಳಿದ ಪ್ರತಿಯೊಂದು ಶಾಖೆಯಿಂದಲೂ, ಅಥವಾ ಪ್ರದತ್ತವಾದ ಶಾಖೆಗಳಿಂದ (ಉಪಸರ್ಗಗಳು ಕ್ರಿಯಾಯೋಗವಿಲ್ಲದಿರುವಾಗ ಸಸಾಧನ ಕ್ರಿಯಾವಾಚಿಗಳಾಗಿವೆ) ಕಾರಣ ಪ್ರತಿ ಎಂದರೆ ಪ್ರದತ್ತ ಎಂದರ್ಥ. ಸತ್ಯಧರ್ಮತೀರ್ಥರು) ವಾಲಖಿಲ್ಯಾಖ್ಯ-ಸಂಹಿತಾಂ=ವಾಲಖಿಲ್ಯಾಖ್ಯಸಂಹಿತೆಯನ್ನು ಬಾಲಾಯನಿ ಗಾರ್ಗ್ಯಕಾಸಾರಾಃ= ಬಾಲಾಯನಿ ಗಾರ್ಗ್ಯ ಕಾಸರ ಎಂಬುವವರು ದಧುಃ=ಧರಿಸಿದರು.

**ಬಹ್ವೃಚಾ ಸಂಹಿತಾ ಹ್ಯೇತಾ ಏಭಿರ್ಬ್ರಹ್ಮರ್ಷಿಭಿರ್ಧೃತಾಃ ।**
**ಶ್ರುತ್ವೈ ತಚ್ಛಂದಸಾಂ ವ್ಯಾಸಂ ಸರ್ವಪಾಪೈಃ ಪ್ರಮುಚ್ಯತೇ ॥ ೨೫ ॥**

ಏತಾಃ=ಈ ಬಹ್ವೃಚಾಃ ಸಂಹಿತಾಃ=ಋಗ್ವೇದ ಸಂಬಂಧಿ ಸಂಹಿತೆಗಳು ಏಭಿಃ ಬ್ರಹ್ಮರ್ಷಿಭಿಃ=ಈ ಬ್ರಹ್ಮ ಋಷಿಗಳಿಂದ ಧೃತಾಃ=ಧರಿಸಲ್ಪಟ್ಟವು. ಏತತ್=ಈ ಛಂದಸಾಂ ವ್ಯಾಸಂ=ವೇದ ವಿಭಾಗವನ್ನು ಶ್ರುತ್ವಾ =ಕೇಳಿ ಸರ್ವಪಾಪೈಃ ಪ್ರಮುಚ್ಯತೇ=ಎಲ್ಲ ಪಾಪಗಳಿಂದ ಮುಕ್ತನಾಗುವನು.

**ವೈಶಂಪಾಯನಶಿಷ್ಯಾ ವೈ ಚರಕಾದ್ವರ್ಯವೋಽಭವನ್ ।**
**ಯಚ್ಚೇರುರ್ಬ್ರಹ್ಮಹತ್ಯಾಂಹಃ ಕ್ಷಪಣಾಯ ಗುರೋರ್ವ್ರತಮ್ ॥ ೨೬ ॥**

ವೈಶಂಪಾಯನಶಿಷ್ಯಾಃ=ವೈಶಂಪಾಯನರ ಶಿಷ್ಯರು ಚರಕಾಧ್ವರ್ಯವಃ=ತೀರ್ಥ ಸಂಚಾರ ಮಾಡುವಲ್ಲಿ, ಅಥವಾ ಯಜ್ಞದಲ್ಲಿ ಯಜುರ್ವೇದಗಳಿಂದ ಕಾರ್ಯ ಮಾಡುವಲ್ಲಿ ನಿಪುಣರು ಅಭವನ್=ಆದರು. ಇವರಿಗೆ ಚರಕ ಎಂದು ಕರೆಯಲು ನಿಮಿತ್ತ ಹೇಳುವರು. ಯತ್=ಯಾವ ಕಾರಣ ಗುರೋಃ=ಗುರುಗಳ ಬ್ರಹ್ಮಹತ್ಯಾಂಹಃ ಕ್ಷಪಣಾಯ=ಬ್ರಹ್ಮಹತ್ಯೆಯಿಂದ ಬಂದ ಪಾಪಪರಿಹಾರಕ್ಕಾಗಿ ವ್ರತಂ ಚೇರುಃ= ತೀರ್ಥಯಾತ್ರಾ ರೂಪವಾದ ವ್ರತವನ್ನು ಆಚರಿಸಿದರು. ಆದ್ದರಿಂದ ಇವರನ್ನು ಚರಕ ಎಂದು ಕರೆದರು.

**ಯಾಜ್ಞವಲ್ಕ್ಯಸ್ತು ತಚ್ಛಿಷ್ಯ ಆಹಾಂಹೋ ಭಗವನ್ ಕಿಯತ್ ।**
**ಚರಿತೇನಾಲ್ಪಸಾರಾಣಾಂ ಚರಿಷ್ಯೇಽಹಂ ಸುದುಷ್ಕರಮ್ ॥ ೨೭ ॥**

ತಚ್ಛಿಷ್ಯಃ=ವೈಶಂಪಾಯನರ ಶಿಷ್ಯನಾದ ಯಾಜ್ಞವಲ್ಕ್ಯಃ=ಯಾಜ್ಞವಲ್ಕ್ಯನಾದರೂ ಹೇ ಭಗವನ್=ಪೂಜ್ಯರಾದ ವೈಶಂಪಾಯನರೇ ಅಲ್ಪಸಾರಾಣಾಂ=ಸ್ವಲ್ಪ ಸಾಮರ್ಥ್ಯವುಳ್ಳವರ ಚರಿತೇನ=ತೀರ್ಥ ಸಂಚಾರದಿಂದ ಕಿಯತ್=ಏನು ಪ್ರಯೋಜನವಾದೀತು ? ಕಾರಣ ಅಹಂ=ನಾನು ಸುದುಷ್ಕರಂ ಚರಿಷ್ಯೇ=ಕಠಿಣವಾದ ವ್ರತವನ್ನು ಮಾಡುವೆನು ಎಂದು ಆಹ=ಹೇಳಿದನು.

**ವಿಶೇಷ-** ಅಲ್ಪಸಾರರು ಎಂದದ್ದರಿಂದ ಪಾಪಮಹತ್ತರವಾದುದು ಎಂದು, ಅವರು ಪರಿಹಾರಕ್ಕೆ ಮಾಡುವ ವ್ರತ ಅಲ್ಪವಾದುದು ಎಂದು ಧ್ವನಿತವಾಗುವದು.)

**ಇತ್ಯುಕ್ತೋ ಗುರುರಪ್ಯಾಹ ಕುಪಿತೋ ಯಾಹ್ಯಲಂ ತ್ವಯಾ ।**
**ವಿಪ್ರಾವಮಂತ್ರಾ ಶಿಷ್ಯೇಣ ಮದಧೀತಂ ತ್ಯಜಾಶ್ವಿತಿ ॥ ೨೮ ॥**

ಇತ್ಯುಕ್ತಃ=ಈ ರೀತಿ ಹೇಳಿಸಿ ಕೊಳ್ಳಲ್ಪಟ್ಟ ಗುರುರಪಿ=ವೈಶಂಪಾಯನರೂ ಸಹ ಅಲಂ ಕುಪಿತಃ=ಬಹಳ ಸಿಟ್ಟಾಗಿ ವಿಪ್ರಾವಮಂತ್ರಾ=ಬ್ರಾಹ್ಮಣರನ್ನು ಅವಮಾನ ಮಾಡುವ ಶಿಷ್ಯೇಣ=ಶಿಷ್ಯನಾದ ತ್ವಯಾ ಅಲಂ=ನಿನ್ನಿಂದ ಸಾಕು (ಅಂದರೆ ನಿನ್ನ ಸಹವಾಸ ಸಾಕು ಎಂದರ್ಥ) ಯಾಹಿ=ಹೋಗು ಆಶು ಮದಧೀತಂ ತ್ಯಜ=ನನ್ನಿಂದ ಕಲಿತವಿದ್ಯೆಯನ್ನು ಬಿಡು. (ಮದಧಿಃ ತಯಾ ಇತಂ=ಅಹಂಕಾರದಿಂದ ಕೂಡಿದವನು ಇವರು ಅಶಕ್ತರು ನಾನು ಶಕ್ತನು ಎಂಬ ಅಹಂಕಾರ ಯಾವ ವಿದ್ಯೆಯಿಂದ ಬಂದಿದೆಯೋ ಆವಿದ್ಯೆಯನ್ನು ಬಿಡು ಎಂದು ಭಾವ.) ಈ ವಿಷಯ ವಿಷ್ಣುಪುರಾಣದ ಮೂರನೆಯ ಅಂಶದಲ್ಲಿ ಬ್ರಹ್ಮಹತ್ಯೆ ಬಂದ ಬಗೆಯು ಮುಂದಿನಂತೆ ಇದೆ.

"ಋಷಿರ್ಯೋಽದ್ಯ ಮಹಾಮೇರೌ ಸಮಾಜೇ ನಾಗಮಿಷ್ಯತಿ ।
ತಸ್ಯೈವ ಸಪ್ತರಾತ್ರಾಂತೇ ಬ್ರಹ್ಮಹತ್ಯಾ ಭವಿಷ್ಯತಿ ॥
ಪೂರ್ವಮೇವಂ ಮುನಿಗಣೈಃ ಸಮಯೋಽಯಂ ಕೃತೋ ದ್ವಿಜ ।
ವೈಶಂಪಾಯನ ಏಕಸ್ತು ತಂ ವ್ಯತಿಕ್ರಾಂತವಾಂಸ್ತದಾ ॥
ಸ್ವಸ್ರೀಯಬಾಲಕಂ ಸೋಽಥ ಪದಾ ಸ್ಪೃಷ್ಟಮಘಾತಯತ್ ।
ಸ್ಪೃಷ್ಟಮಾತ್ರಂ ಪದಾ ತೇನ ಸ ಮಮಾರ ಕಿಲಾರ್ಭಕಃ ॥
ಶಿಷ್ಯಾನಾಹ ಚ ಭೋಃ ಶಿಷ್ಯಾ ಬ್ರಹ್ಮಹತ್ಯಾಪಹವ್ರತಮ್ ।
ಚರಧ್ವಾಸ್ಮತ್ಕೃತೇ ಸರ್ವೇ ನ ವಿಚಾರ್ಯಮಿದಂ ತಥಾ ॥
ಅಥಾಹ ಯಾಜ್ಞವಲ್ಕ್ಯಸ್ತಂ ಕಿಮೇಭಿರ್ಭಗವನ್ ದ್ವಿಜೈಃ ।
ಕ್ಲೇಶಿತೈರಲ್ಪತೇಜೋಭಿಶ್ಚರಿಷ್ಯೇಽಹಮಿದಂ ವ್ರತಮ್ ॥
ತತಃ ಕ್ರುದ್ಧೋ ಗುರುಃ ಪ್ರಾಹ ಯಾಜ್ಞವಲ್ಕ್ಯಂ ಮಹಾಮತಿಃ ।

ಮುಚ್ಯತಾಂ ಯತ್ತ್ವಯಾऽಧೀತಂ ಮತ್ತೋ ವಿಪ್ರಾವಮಾನಕ ॥
ನಿಸ್ತೇಜಸೋऽವದಸ್ಯೇತಾನ್ ಯಸ್ತ್ವಂ ಬ್ರಾಹ್ಮಣಪುಂಗವಾನ್ ।
ತೇನ ಶಿಷ್ಯೇಣ ನಾಥೋऽಸ್ತಿ ಮಮಾಜ್ಞಾಭಂಗಕಾರಿಣಾ ॥
ಯಾಜ್ಞವಲ್ಕ್ಯಸ್ತತಃ ಪ್ರಾಹ ಭಕ್ತ್ಯೈ ತತ್ತೇ ಮಯೋದಿತಮ್ ।
ಮಮಾ(ಯಾ)ಪ್ಯಲಂ ತ್ವಯಾಧೀತಂ ಯನ್ಮಯಾತ್ವದಿದಂ ದ್ವಿಜ ॥
ಪರಾಶರ ಇತ್ಯುಕ್ತ್ವಾ ರುಧಿರಾದ್ರಾಣಿ ಸರೂಪಾಣ ಯಜುಂಷಿ ಸಃ ।
ಛರ್ದಯಿತ್ವಾದದೌ ತಸ್ಮೈ ಯಯೌ ಚ ಸ್ವೇಚ್ಛಯಾ ಮುನೇ ॥

ಒಂದು ಸಲ ಎಲ್ಲ ಋಷಿಗಳು ಒಂದು ನಿಯಮವನ್ನು ಈ ರೀತಿ ಮಾಡಿ ಕೊಂಡು ಈ ದಿನ ಯಾರು ಮೇರು ಪರ್ವತಕ್ಕೆ ಸಭೆಗೆ ಬರುವದಿಲ್ಲವೋ ಅವರಿಗೆ ಏಳು ದಿವಸದ ನಂತರ ಬ್ರಹ್ಮಹತ್ಯೆ ಬರುವದು ಎಂದು. ವೈಶಂಪಾಯನರೊಬ್ಬರು ಈ ನಿಯಮವನ್ನು ಉಲ್ಲಂಘಿಸಿದರು. ನಂತರ ತಂಗಿಯ ಮಗುವನ್ನೇ ಕಾಲಿನಿಂದ ಒದ್ದರು ಕಾಲಿನಿಂದ ಮುಟ್ಟಿದ ಕಾರಣ ಮಗು ಮರಣ ಹೊಂದಿತು. ಆಗ ಶಿಷ್ಯರಿಗೆ ಈ ನನ್ನ ಬ್ರಹ್ಮಹತ್ಯಾ ಪರಿಹಾರಕ್ಕಾಗಿ ವ್ರತವನ್ನು ಆಚರಿಸಿರಿ ಎಂದು ಹೇಳಿದರು. ಆಗ ಅವರ ಶಿಷ್ಯರಲ್ಲಿ ಒಬ್ಬನಾದ ಯಾಜ್ಞವಲ್ಕ್ಯನು ಗುರುಗಳು ಅಸಮರ್ಥರಾದ ಈ ಶಿಷ್ಯರಿಗೆ ತೊಂದರೆ ಕೊಡುವದರಿಂದ ಏನುಪ್ರಯೋಜನ ವಾದೀತು ನನಗೆ ಹೇಳಿರಿ ಎಷ್ಟೇ ದುಷ್ಕರವಾದರೂ ವ್ರತವನ್ನಾಚರಿಸುವೆನು ಎಂದನು. ಆಗ ಕುಪಿತರಾದ ವೈಶಂಪಾಯನರು ಬ್ರಾಹ್ಮಣಶ್ರೇಷ್ಠರನ್ನೆಲ್ಲ ಅಸಮರ್ಥರೆಂದು ಹೇಳಿ ಅವಮಾನಗೊಳಿಸಿರುವಿ ಎಂದರು.

**ದೇವರಾತಸುತಃ ಸೋऽಪಿ(ಥ)ಚ್ಛರ್ದಿತ್ವಾ ಯಜುಷಾಂ ಗಣಮ್ ।**
**ತತೋ ಗತೋऽಥ ಮುನಯೋ ದದೃಶುಸ್ತಾನ್ ಯಜುರ್ಗಣಾನ್ ॥ ೨೯ ॥**

ದೇವರಾತಸುತಃ=ಶುನಃಶೇಪನ ಮಗನಾದ ಸಃ ಅಪಿ=ಆ ಯಾಜ್ಞವಲ್ಕ್ಯನಾದರೂ ಯಜುಷಾಂ ಗಣಂ=ಯಜುರ್ವೇದಸಮೂಹವನ್ನು ಛರ್ದಿತ್ವಾ=ವಾಂತಿ ಮಾಡಿಕೊಂಡು ತತಃ=ಅಲ್ಲಿಂದ ಗತಃ=ಹೋದನು. ಅಥ=ನಂತರ ಮುನಯಃ=ಮುನಿಗಳು ತಾನ್ ಯಜುರ್ಗಣಾನ್=ವಮನ ಮಾಡಿದ ಯಜುರ್ವೇದಗಳನ್ನು ದದೃಶುಃ=ನೋಡಿದರು.

**ವಿಶೇಷ-** 'ಪುತ್ರಂ ಕೃತ್ವಾ ಶುನಃಶೇಪಂ ದೇವರಾತಂ ಚ ಭಾರ್ಗವಂ' ಎಂದು ನವಮ ಸ್ಕಂಧದಲ್ಲಿಯೂ, ಋಗ್ವೇದಬ್ರಾಹ್ಮಣದಲ್ಲಿ 'ದೇವಾ ಆರಾಸತ'ಎಂದು ಹೇಳಿರುವುದರಿಂದ ದೇವೈಃ ರಾತಃ ದೇವರಾತಃ ಎಂದು ನಿರುಕ್ತಿಯನ್ನು ತಿಳಿಯಬೇಕು. 'ಯೋ ರಾತೋ ದೇವಯಜನ್ನೈರ್ದೇವೈರ್ಗಾಧಿಸುತಾಯ ಸಃ' ಎಂದೂ ಇದೆ.

**ಭೂತ್ವಾ ತಿತ್ತಿರಯೋ ಬ್ರಹ್ಮನ್(ಭೂತ್ವಾ) ತಲ್ಲೋಲುಪತಯಾಽಽದದುಃ ।**
**ತೈತ್ತಿರೀಯಾ ಇತಿ ಯಜುಃಶಾಖಾ ಆಸನ್ ಸುಪೇಶಲಾಃ ॥ ೩೦ ॥**

ಬ್ರಹ್ಮನ್=ಶೌನಕರೇ ತಲ್ಲೋಲುಪತಯಾ=ಮಂತ್ರಗಳಲ್ಲಿ ಆಸಕ್ತಿಯಿಂದ ತಿತ್ತಿರಯಃ ಭೂತ್ವಾ=ತಿತ್ತಿರಿ ಎಂಬ ಪಕ್ಷಿಗಳಾಗಿ ಆದದುಃ=ಸ್ವೀಕಾರಮಾಡಿದರು. ಇತಿ=ಆದಕಾರಣ ಯಜುಶಾಖಾಃ ಸುಪೇಶಲಾಃ=ಯಜುಶ್ಶಾಖೆಯನ್ನು ಅಧ್ಯಯನಮಾಡಿದ ತೇಜಸ್ವಿಗಳಾದ ತೈತ್ತಿರೀಯಾಃ=ತೈತ್ತಿರೀಯಾ ಎಂದು ಆಸನ್=ಪ್ರಸಿದ್ಧವಾದವು.

ಒಮ್ಮೆ ವೈಶಂಪಾಯನರು ತಮಗೆ ಒಂದೊದಗಿದ ಬ್ರಹ್ಮಹತ್ಯೆಯನ್ನು ಪರಿಹರಿಸಲು ಅಧ್ವರ್ಯಗಳಿಗೆ ಆದೇಶಿಸಿದರು. ಆ ಜ್ಞಾನಿಗಳ ಮಧ್ಯದಲ್ಲಿ ವೈಶಂಪಾಯನರ ಶಿಷ್ಯನಾದ ಯಾಜ್ಞ್ಯವಲ್ಕ ಎಂಬುವವನು ಗುರುಗಳಿಗೆ ಹೀಗೆ ಉತ್ತರಿಸಿದರು. ಇಲ್ಲಿರುವವರೆಲ್ಲ ಸಾಮಾನ್ಯ ಋಷಿಗಳು ಇವರು ಮಾಡಿದ ವ್ರತಗಳು ಯಾವ ಪ್ರಯೋಜನಕ್ಕೂ ಬರುವದಿಲ್ಲ. ನಾನು ಇವರೆಲ್ಲರಿಗಿಂತಲೂ ಕಠಿಣವಾದ ವ್ರತವನ್ನು ಆಚರಿಸಿ ಬ್ರಹ್ಮಹತ್ಯೆಯನ್ನು ಪರಿಹರಿಸುವೆ ಎಂದ. ಇದಕ್ಕೆ ಕೋಪಗೊಂಡ ವೈಶಂಪಾಯನರು ಯಾಜ್ಞ್ಯವಲ್ಕ್ಯನೇ ಇವರೆಲ್ಲರೂ ಅಜ್ಞಾನಿಗಳೆಂದು ಅವಹೇಳನೆ ಮಾಡುತ್ತಿರುವ ನೀನು ಬ್ರಾಹ್ಮಣದ್ರೋಹ ಮಾಡಿರುವೆ. ಆದ್ದರಿಂದ ಇನ್ನು ಮುಂದೆ ನಾನು ನಿನಗೆ ಪಾಠವನ್ನು ಹೇಳುವದಿಲ್ಲ. ನೀನು ನಮ್ಮ ಗುರುಕುಲವನ್ನು ಬಿಟ್ಟು ಹೊರಡಬಹುದು. ಹೋಗುವ ಮೊದಲು ನನ್ನಿಂದ ಕಲಿತ ವೇದಶಾಖೆಗಳನ್ನು ಇಲ್ಲಿಯೇ ಬಿಟ್ಟು ಹೋಗು ಎಂದರು. ಆಗ ಯಾಜ್ಞವಲ್ಕ್ಯರು ತಾವು ಕಲಿತ ಕೃಷ್ಣಯಜುರ್ವೇದವನ್ನು ಅಲ್ಲಿಯೇ ವಮನಮಾಡಿ ಹೊರಟರು.

**ವಿಶೇಷ-** ಯಾಜ್ಞವಲ್ಕ್ಯರು ತಾವು ಗುರುಗಳಿಂದ ಪಡೆದ ವೇದಮಂತ್ರಗಳನ್ನು ವಮನಮಾಡಿ ಹೊರಟರು ಎಂದರೆ ವೇದಮಂತ್ರಗಳನ್ನು ವಮನ ಮಾಡಲು ಹೇಗೆ ಸಾಧ್ಯ ?ಇತ್ಯಾದಿ ಪ್ರಶ್ನೆಗಳೆಲ್ಲ ಉದ್ಭವಿಸುತ್ತವೆ. ಅದಕ್ಕೆ ಹೀಗೆ ಸಮಾಧಾನವನ್ನು ತಿಳಿಯಬಹುದು. ನನ್ನಿಂದ ಕಲಿತ ವಿದ್ಯೆಯನ್ನು ನನ್ನಲ್ಲಿ ಒಪ್ಪಿಸಬೇಕು. ಮತ್ತೆ ಇನ್ನೆಂದೂ ಇವುಗಳನ್ನು ಹೇಳಬಾರದು ಎಂದರ್ಥ. ಯಾಜ್ಞವಲ್ಕ್ಯರು ಗುರುಗಳಿಗೆ ಮಂತ್ರಗಳನ್ನು ಒಪ್ಪಿಸುವಾಗ ಇತರ ಮುನಿಗಳು ಪಕ್ಷಿಗಳಾಗಿ ಅದನ್ನು ಕೇಳಿ ತಿಳಿದು ಕೃಷ್ಣಯಜುರ್ವೇದ ಬಲ್ಲವರು ಎಂಬ ಹೆಗ್ಗಳಿಕೆಗೆ ಪಾತ್ರರಾದರು ಎಂದು ಅರ್ಥ. ವಾಂತಿ ಮಾಡಿಕೊಂಡ ಮಂತ್ರಗಳು ಹೇಗೆ ಮಂಗಳಕರಗಳಾದವು ಎಂಬ ಶಂಕೆಯನ್ನು ಮಧುರವಾದ

ಮಧುವಿನ ದೃಷ್ಟಾಂತದಿಂದ ಪರಿಹರಿಸಬಹುದು. ಜೇನುತುಪ್ಪ ನೊಣದ ವಾಂತಿಯಲ್ಲವೇ ಗುರ್ವಾಜ್ಞೆಗೆ ಅಸಾಧ್ಯವಾವುದು.

**ಯಾಜ್ಞವಲ್ಕ್ಯಸ್ತತೋ ಬ್ರಹ್ಮನ್ ಛಂದಾಂಸ್ಯಧಿಗವೇಷಯನ್ ।**
**ಗುರೋೀರವಿದ್ಯಮಾನಾನಿ ಸೂಪತಸ್ಥೇಽರ್ಕಮೀಶ್ವರಮ್ ॥ ೩೧ ॥**

ತತಃ=ಅನಂತರ ಬ್ರಹ್ಮನ್=ಶೌನಕರೇ ಯಾಜ್ಞವಲ್ಕ್ಯಃ=ಯಾಜ್ಞವಲ್ಕ್ಯನು ಗುರೋಃ ಅವಿದ್ಯಮಾನಾನಿ=ಹಿಂದಿನ ಗುರುಗಳಲ್ಲಿ ಇಲ್ಲದಿರುವ ಛಂದಾಂಸಿ=ವೇದಗಳನ್ನು ಅಧಿ ಗವೇಷಯನ್=ಅಧ್ಯಯನ ಮಾಡುವದಕ್ಕಾಗಿ ಗುರುವನ್ನು ಹುಡುಕುತ್ತ ಅರ್ಕಂ= (ಅಲಂ,ಕಂ) (ರಲಯೋರಭೇದಃ) ಸುಖಾತ್ಮಕನಾದ ಈಶ್ವರಂ= ಸೂರ್ಯಾಂತರ್ಗತ ಭಗವಂತನನ್ನು ಸೂಪತಸ್ಥೇ=ಚೆನ್ನಾಗಿ ಸ್ತುತಿಸಿದನು.

*ನನ್ನ ರಹಸ್ಯವನ್ನು ನೀನು ತಿಳಿದಿರುವಿ ಎಂದು ಸ್ತುತಿಸುವನು.*

ಯಾಜ್ಞ್ಯವಲ್ಕ್ಯ ಉವಾಚ –

**ಓಂ ನಮೋ ಭಗವತೇ ಆದಿತ್ಯಾಯಾಖಿಲಜಗದಾತ್ಮಸ್ವರೂಪೇಣ ಕಾಲರೂಪೇಣ ಚ ಚತುರ್ವಿಧಭೂತನಿಕಾಯಾನಾಂ ಬ್ರಹ್ಮಾದಿಸ್ತಂಬಪರ್ಯಂತಾನಾಮಂತರ್ಹೃದಯೇಷು ಬಹಿರಪ್ಯಾಕಾಶ ಇವೋಪಾಧಿನಾ ವ್ಯವಧೀಯಮಾನೋ ಭಗವಾನೇಕ ಏವ ಕ್ಷಣಲವ-ನಿಮೇಷಾದ್ಯವಯವೋಪಚಿತಸಂವತ್ಸರಗಣೇನ ತೋಯಾದಾನವಿಸರ್ಗಾಭ್ಯಾಮಿಮಾಂ ಲೋಕಯಾತ್ರಾಮನುವಹತಿ ॥ ೩೨ ॥**

ಭಗವತೇ=ಷಡ್ಗುಣಪೂರ್ಣನಾದ ಆದಿತ್ಯಾಯ=ಆದಿವಾಸಿಯಾದ,(ಪುರಾತನನಾದ) ಅಥವಾ ಅದಿತಿಪುತ್ರನಾದ ಸೂರ್ಯನಿಗೆ, ಅಥವಾ ಉಪೇಂದ್ರನಾಗಿ ಅದಿತಿಯಲ್ಲಿ ಅವತರಿಸಿದ ಶ್ರೀಹರಿಗೆ ಬ್ರಹ್ಮಾದಿಸ್ತಂಭಪರ್ಯಂತಾನಾಂ=ಬ್ರಹ್ಮದೇವರನ್ನಾರಂಭಿಸಿ ತೃಣಜೀವಪರ್ಯಂತರಾದ ಚತುರ್ವಿಧಭೂತನಿಕಾಯಾನಾಂ=ಅಂಡಜ-ಸ್ವೇದಜ-ಉದ್ಭಿಜ್ಜ-ಜರಾಯುಜ ಎಂದು ನಾಲ್ಕು ವಿಧವಾದ ಪ್ರಾಣಿಗಳ ಸಮೂಹಗಳ ಅಂತರ್ಹೃದಯೇಷು=ಹೃದಯದೊಳಗೆ ಬಹಿರಪಿ=ಹೊರಗೂ ಕೂಡ ಹೀಗೆ ಎಲ್ಲ ಜಗತ್ತಿನಲ್ಲಿ ಅಂತರ್ಯಾಮಿ ರೂಪದಿಂದ ಇದ್ದು (ಕಾಲರೂಪೇಣ ಕಾಲರೂಪದಿಂದಲೂ ಇದ್ದು) ಆಕಾಶ ಇವ=ಆಕಾಶದಂತೆ ಉಪಾಧಿನಾ=ಘಟಾಕಾಶ ಮಠಾಕಾಶ ಎಂಬ ಉಪಾಧಿಯಿಂದ ವ್ಯವಧೀಯಮಾನಃ=ಪರಿಚ್ಛಿನ್ನವಾಗುವಂತೆ ಭಗವಾನ್=ಶ್ರೀಹರಿಯು ಏಕ ಏವ=ಒಬ್ಬನೇ ಕ್ಷಣಲವನಿಮೇಷಾದ್ಯವಯವೋಪಚಿತಸಂವತ್ಸರಗಣೇನ=

ಕ್ಷಣಲವಾದಿ ಅವಯವಗಳಿಂದ ಕೂಡಿದ (ಬೆಳೆದುನಿಂತ) ವರ್ಷಗಳ ಸಮೂಹದಿಂದ ವ್ಯವಧೀಯಮಾನಃ=ಉದಯಾಸ್ತಮಾನ ಮುಂತಾದ ವ್ಯವಹಾರವಿಷಯನಾಗಿ ತೋಯಾದಾನವಿಸರ್ಗಾಭ್ಯಾಂ=ನೀರನ್ನು ಕಿರಣಗಳಿಂದ ಸ್ವೀಕರಿಸಿ, (ವಣಗಿಸಿ) ಮತ್ತೆ ಮಳೆಗರೆದು ಲೋಕಯಾತ್ರಾಂ=ಲೋಕಪ್ರವೃತ್ತಿಯನ್ನು ಅನುವಹತಿ=ನಿರ್ವಹಿಸುವನು ಇಂತಹ ಓಂ=ಗುಣಪೂರ್ಣನಾದ ಪರಮಾತ್ಮನಿಗೆ ನಮಃ=ನಮಸ್ಕಾರವು.

**ವಿಶೇಷ-** ಸೂರ್ಯನಲ್ಲಿ ಅಸಂಭಾವಿತವಾದ ವಿಶೇಷಣಗಳು ಭಗವಂತನಲ್ಲಿ ಸಂಭಾವಿತವಾಗಿವೆ. ಭಗವಂತನಲ್ಲಿ ಸಂಭಾವಿತವಾದವು ಸೂರ್ಯನಲ್ಲಿ ಇವೆ ಎಂದು ತಿಳಿಯಬೇಕು.

**ಯದಿಹ ವಾವ ವಿಬುಧರ್ಷಭ ಸವಿತರದಸ್ತಪತ್ಯನುಸವನಮಹರಹರಾಮ್ನಾಯ ವಿಧಿನೋ ಪತಿಷ್ಠಮಾನಾನಾಮಖಿಲದುರಿತವೃಜಿನಬೀಜಾವಭರ್ಜನಂ ಭಗವತಃ ಸಮಭಿಧೀಮಹಿ ತಪನಮಂಡಲಮ್ ॥ ೩೩ ॥**

ಹೇ ವಿಬುಧರ್ಷಭ=ಎಲೋ ದೇವತಾಶ್ರೇಷ್ಠನೇ ಸವಿತಃ=ಜಗತ್ಸೃಷ್ಟಿಕರ್ತನೇ ತವ=ನಿನ್ನ ಯತ್=ಯಾವ ಅದಃ=ಈ ಮಂಡಲಂ=ಮಂಡಲವು ಅನುಸವನಂ=ಪ್ರತಿಕಾಲ-ದಲ್ಲಿಯೂ ತಪತಿ=ಪ್ರಕಾಶಿಸುವುದು ಹೇ ತಪನ=ಪ್ರಕಾಶ ಸ್ವಭಾವನೇ ತತ್=ಅಂತಹ ಅಹರಹಃ=ಪ್ರತಿದಿನವೂ ಆಮ್ನಾಯವಿಧಿನಾ=ವೇದೋಕ್ತವಾದ ರೀತಿಯಿಂದ ಉಪತಿಷ್ಠಮಾನಾನಾಂ=ಉಪಾಸನೆ ಮಾಡುವವರ ಅಖಿಲದುರಿತವೃಜಿನಬೀಜಾವ-ಭರ್ಜನಂ=ಎಲ್ಲ ಪಾಪ ಮತ್ತು ದುಃಖಗಳಿಗೆ ಕಾರಣವಾದ ದುಷ್ಟಕರ್ಮಗಳನ್ನು ಹುರಿಯುವ (ಸುಟ್ಟು ಬಿಡುವ ಎಂದರ್ಥ) ಭಗವತಃ=ಷಡ್ಗುಣೈಶ್ವರ್ಯಸಂಪನ್ನನಾದ ನಿನ್ನ ಮಂಡಲಂ=ಮಂಡಲವನ್ನು ಸಮಭಿಧೀಮಹಿ=ಭಕ್ತಿಯಿಂದ ಚಿಂತಿಸುವೆನು.

**ಯ ಇಹ ವಾವ ಸ್ಥಿರಚರನಿಕರಾಣಾಂ ಸ್ವನಿಕೇತನಾನಾಂ ಮನ ಇಂದ್ರಿಯಾಸು ಗಣಾನನಾತ್ಮನಸ್ತತ್ವಂ ಸ್ವಯಮಾತ್ಮಾಂತರ್ಯಾಮೀ ಪ್ರಚೋದಯತಿ ॥ ೩೪ ॥**

ಇಹ=ಭೂಮಿಯಲ್ಲಿ ಯಃ ವಾವ=ಯಾರು ಸ್ವನಿಕೇತನಾನಾಂ=ತಾನೇ ಆಶ್ರಯವಾಗಿವುಳ್ಳ ಸ್ಥಿರಚರನಿಕರಾಣಾಂ=ಸ್ಥಾವರಜಂಗಮಗಳ ಸಮೂಹಕ್ಕೆ ಆತ್ಮಾ=ಸ್ವಾಮಿಯು ಒಳಗಿದ್ದು ಸುಖಪ್ರೇರಕನು ಮನಇಂದ್ರಿಯಾಸು ಗಣಾನ್=ಮನಸ್ಸು ಇಂದ್ರಿಯಗಳು ಪ್ರಾಣಗಳ ಸಮೂಹವನ್ನು ಅನಾತ್ಮನಃ=ಸ್ವತಃ ಪ್ರಯತ್ನರಹಿತವಾದದ್ದನ್ನು ಸ್ವಯಂ ಆತ್ಮಾ=ಸ್ವತಂತ್ರವಾಗಿ ಅಂತರ್ಯಾಮಿಯಾದವನು ಪ್ರಚೋದಯತಿ=

ಪ್ರೇರಿಸುವನು ತತ್ವಂ=ರಹಸ್ಯ ಧ್ಯೇಯನೆಂದರ್ಥ. (ಅಸಾತ್ಮನಃ ತತ್ವಂ=ಪರತಂತ್ರಸ್ವರೂಪವನ್ನು ಎಂದರ್ಥ.)

*ಗಾಯತ್ರೀ ಮಂತ್ರವನ್ನು ವ್ಯಾಖ್ಯಾನಿಸುತ್ತಾರೆ.*

**ವಿಶೇಷ**-ಸ್ಥಿರಚರನಿಕರಾಣಾಂ ಆತ್ಮಾ, ಅನಾತ್ಮನಃ ಆತ್ಮಾ ಈ ಎರಡು ವಿಶೇಷಣಗಳಿಂದ ತತ್ ಸವಿತುಃ ವರೇಣ್ಯಂ ಭರ್ಗೋ ದೇವಸ್ಯ ಧೀಮಹಿ ಧಿಯೋ ಯೋ ನಃ ಪ್ರಚೋದಯಾತ್ ಎಂಬುದರ ಅರ್ಥ ಹೇಳಿದಂತಾಯಿತು. ಯಃ=ಯಾರು ನಃ=ನಮ್ಮ ಧಿಯಃ=ಜ್ಞಾನ ಸಾಧನವಾದ ಇಂದ್ರಿಯಗಳನ್ನು ಪ್ರಚೋದಯಾತ್=ಪ್ರೇರಿಸುವನೋ ತಸ್ಯ ಸವಿತುಃ=ಆ ಜಗತ್ತಷ್ಟ್ರುವಿನ ಭರ್ಗಃ=ಸಕಲದುಃಖಭರ್ಜಕವಾದ ವರೇಣ್ಯಂ= ರಮಣೀಯವಾದ ತತ್=ಮಂಡಲವನ್ನು ಧೀಮಹಿ=ಧ್ಯಾನಮಾಡುತ್ತೇನೆ. ಆಪ್ರಾದ್ಯಾವಾಪೃಥಿವಿಅಂತರಿಕ್ಷಸೂರ್ಯಆತ್ಮಾಜಗತಃತಸ್ಥುಷಶ್ಚ=ಸ್ಥಾವರಜಂಗಮ-ಸರ್ಗಭೂಮಿ ಅಂತರಿಕ್ಷ ಎಲ್ಲದಕ್ಕೂ ಸೂರ್ಯನೇ ಸ್ವಾಮಿ ಎಂದು ಭಾವ.

**ಯ ಏವೇಮಂ ಲೋಕಮತಿಕರಾಲವದನಾಂಧಕಾರಸಂಜ್ಞಾಜಗರಗ್ರಹೀತಂ ಮೃತಕಮಿವ ವಿಚೇತನಮವಲೋಕ್ಯಾನುಕಂಪಯಾ ಪರಮಕಾರುಣಿಕ ಈಕ್ಷಯೈವೋತ್ಥಾಪ್ಯಾ-ಹರಹರನುಸವನಂ ಶ್ರೇಯಸಿ ಸ್ವಧರ್ಮಾಖ್ಯ ಆತ್ಮಾವಸ್ಥಾನೇ ಪ್ರವರ್ತಯತ್ಯನಿಮಿಷಾಧಿ ಪತಿರಸಾಧೂನಾಂ ಭಯಮುದೀರಯನ್ನಟತಿ ಪರಿತ ಆಶಾಪಾಲೈಸ್ತತ್ರ ತತ್ರ ಕಮಲ-ಕೋಶಾಂಜಲಿಭಿರುಪಹೃತಾರ್ಹಣಃ ॥ ೩೫ ॥**

ಯಃ ಏವ=ಯಾವ ಸೂರ್ಯದೇವನು ಅತಿಕರಾಲವದನಾಂಧಕಾರಸಂಜ್ಞಾಜಾಗರ-ಗೃಹೀತಂ=ಅತ್ಯಂತಕ್ರೂರವಾದಮುಖವುಳ್ಳ ಕತ್ತಲೆಯೆಂಬ ಅಜಗರ(ಹೆಬ್ಬಾವು)ದಿಂದ ರಾತ್ರಿಯಲ್ಲಿ ನುಂಗಲ್ಪಟ್ಟ ಮೃತಕಂ ಇವ=ಶವದಂತೆ ವಿಚೇತನಂ=ಜ್ಞಾನಚೇಷ್ಟೆ-ಗಳಿಲ್ಲದಿರುವ ಇಮಂ ಲೋಕಂ=ಈ ಜನರನ್ನು ಅವಲೋಕ್ಯ=ನೋಡಿ ಅನುಕಂಪಯಾ=ದಯೆಯಿಂದ ಪರಮಕಾರುಣಿಕಃ=ಅತ್ಯಂತ ದಯಾಳುವಾದ ಸೂರ್ಯದೇವನು ಈಕ್ಷಯೈವ=ನೋಟದಿಂದಲೇ ಉತ್ಥಾಪ್ಯ=ಎಚ್ಚರಿಸಿ ಅಹರಹಃ=ಪ್ರತಿದಿನವೂ ಅನುಸವನಂ=ತ್ರಿಕಾಲದಲ್ಲಿಯೂ ಆತ್ಮಾವಸ್ಥಾನೇ=ಪರಮಾತ್ಮ ಪ್ರಾಪ್ತಿಗೆ ಸಾಧನವಾದ ಸ್ವಧರ್ಮಾಖ್ಯೇ ಶ್ರೇಯಸಿ=ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಶ್ರೇಯಃಸಾಧನದಲ್ಲಿ ಪ್ರವರ್ತಯತಿ=ಪ್ರೇರಿಸುತ್ತಾನೆ. ಅನಿಮಿಷಾಧಿಪತಿಃ=ದೇವತೆಗಳಿಗೆ ನಿಯಾಮಕನು ಅಸಾಧೂನಾಂ=ಕಳ್ಳರೇ ಮೊದಲಾದವರಿಗೆ ಭಯಂ ಉದೀರಯನ್=

ಭಯವನ್ನುಂಟು ಮಾಡುತ್ತ ಪರಿತಃ ಅಟತಿ=ಸುತ್ತಲೂ ಸಂಚರಿಸುವನು. ಆಶಾಪಾಲೈಃ= ದಿಕ್ಪಾಲಕರಾದ ಇಂದ್ರಾದಿಗಳಿಂದ ತತ್ರ ತತ್ರ=ಆ ದಿಕ್ಕಿನಲ್ಲಿ ಕಮಲಕುಡ್ಮಲಾಂಜಲಿಭಿಃ= ಕಮಲದ ಮೊಗ್ಗುಗಳಿಂದ ಕೂಡಿದ ಕರಗಳಿಂದ ಉಪಹೃತಾರ್ಹಣಃ=(ತರಲ್ಪಟ್ಟ ಪೂಜಾ ಸಾಮಗ್ರಿಯುಳ್ಳವನಾಗಿ) ಪೂಜಿತನಾಗಿ ಸಂಚರಿಸುವನೋ (ಅಂಥವನಿಗೆ ನಮಸ್ಕಾರವು)

**ಅಥ ಹ ಭಗವಂಸ್ತವ ಚರಣನಲಿನಯುಗಲಂ ತ್ರಿಭುವನಗುರುಭಿರಭಿವಂದಿತ ಮಯಾತಯಾಮಯಜುಃಕಾಮ ಉಪಸರಾಮೀತಿ ॥ ೩೬ ॥**

ಹೇ ಭಗವನ್=ಸೂರ್ಯನೇ ತ್ರಿಭುವನಗುರುಭಿಃ=ಮೂರುಲೋಕಗಳಿಗೆ ಗುರುಗಳಾದ ಬ್ರಹ್ಮಾದಿಸಕಲರಿಂದ ವಂದಿತಂ=ನಮಸ್ಕರಿಸಲ್ಪಟ್ಟ ಚರಣನಲಿನಯುಗಲಂ=ಪಾದಕಮಲ-ದ್ವಂದ್ವವನ್ನು ಅಯಾತಯಾಮಯಜುಃಕಾಮಃ=ಸಾರಯುತಗಳಾದ ಯಜುರ್ವೇದವನ್ನು ಪಡೆಯುವ ಇಚ್ಛೆಯುಳ್ಳವನಾಗಿದ್ದೇನೆ. ಅಥ=ಆದ ಕಾರಣ ಅಹಂ=ನಾನು ಉಪಸರಾಮಿ=ಶರಣು ಬಂದಿರುವೆನು ಎಂದು ಸ್ತುತಿಸಿದನು.

*ಈ ರೀತಿ ಸೇವಿಸಲ್ಪಟ್ಟ ಸೂರ್ಯನು ಏನಾದರೂ ಕೊಟ್ಟನೋ ಇಲ್ಲವೆಂದು ಹೇಳಿದನೋ ಕೊಡಬೇಕಾದುದನ್ನು ಕೊಟ್ಟನೋ ಎಂದರೆ ಸೂತರು ಹೇಳುತ್ತಾರೆ. -*

**ಸೂತ ಉವಾಚ -**

**ಏವಂ ಸ್ತುತಃ ಸ ಭಗವಾನ್ ವಾಜಿರೂಪಧರೋ ರವಿಃ ।**
**ಯಜೂಂಷ್ಯಯಾತಯಾಮಾನಿ ಮುನಯೇಽದಾತ್ ಪ್ರಸಾದತಃ(ಪ್ರಸಾದಿತಃ) ॥ ೩೭ ॥**

ಏವಂ=ಈ ರೀತಿಯಾಗಿ ಸ್ತುತಃ=ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಭಗವಾನ್=ಪೂಜ್ಯನಾದ ರವಿಃ=ಸೂರ್ಯನು ವಾಜಿರೂಪಧರಃ=ಕುದುರೆಯ ರೂಪಧರಿಸಿದವನಾಗಿ ಮುನಯೇ= ಯಾಜ್ಞ ವಲ್ಕ್ಯನಿಗೆ ಪ್ರಸಾದತಃ=ಅನುಗ್ರಹಪೂರ್ವಕವಾಗಿ (ಪ್ರಸಾದಿತಃ ಎಂಬ ಪಾಠದಲ್ಲಿ ಪ್ರಸನ್ನೀ ಕರಿಸಲ್ಪಟ್ಟ ಎಂದರ್ಥ) ಅಯಾತಯಾಮಾನಿ=ನಿಸ್ಸಾರವಾಗದಿರುವ ಅಂದರೆ ವೀರ್ಯವತ್ತಾದ ಯಜೂಂಷಿ=ಯಜುರ್ವೇದಗಳನ್ನು ಅದಾತ್=ಕೊಟ್ಟನು.

**ಯಜುರ್ಭಿರಕರೋಚ್ಛಾಖಾ ದಶ ಪಂಚ ಚ ತೈರ್ವಿಭುಃ ।**
**ಜಗೃಹುರ್ವಾಜಸನ್ಯಸ್ತಾ ಕಾಣ್ವಮಾಧ್ಯಂದಿನಾದಯಃ ॥ ೩೮ ॥**

ವಿಭುಃ=ಸಮರ್ಥನಾದ ಯಾಜ್ಞ್ಯವಲ್ಕ್ಯನು ತೈಃ ಯಜುರ್ಭಿಃ=ಆ ಯಜುರ್ವೇದ-ಗಳಿಂದ ದಶ ಪಂಚ=ಹದಿನೈದು ಶಾಖಾಃ=ವಿಭಾಗಗಳನ್ನು ಅಕರೋತ್=ಮಾಡಿದನು.

ವಾಜಸನ್ಯಸ್ತಾಃ=ಕುದುರೆಯ ರೂಪದಿಂದ ಸೂರ್ಯನು ಹೇಳಿದ್ದರಿಂದ ವಾಜಸಿನಿಯನಿಸಿಕೊಂಡ ತಾಃ=ಆ ಶಾಖಾಗಳನ್ನು ಕಾಣ್ವಮಾಧ್ಯಂದಿನಾಃ=ಕಾಣ್ವರು ಮಾಧ್ಯಂದಿನರು ಜಗೃಹುಃ=ಸ್ವೀಕರಿಸಿದರು.

**ವಿಶೇಷ**-ಸೂರ್ಯನಾರಾಯಣನು ಕುದುರೆಯ ರೂಪದಿಂದ ಉಪದೇಶಿಸಿದ ವೇದವು ವಾಜಸನೇಯ ಸಂಹಿತೆ ಎಂದು ಪ್ರಸಿದ್ಧವಾಗಿದೆ.

ಯಜುರ್ವೇದದಲ್ಲಿ ಒಟ್ಟು ೮೬ ಶಾಖೆಗಳು ಪ್ರಸಿದ್ಧವಾಗಿವೆ.

**ವೈಶಂಪಾಯನಗೋತ್ರೋऽಸೌ ಯಜುರ್ವೇದಂ ಪ್ರಕಲ್ಪಯತ್।**
**ಷಡಶೀತಿಸ್ತು ಯೇನೋಕ್ತಾಃ ಸಂಹಿತಾ ಯಜುಷಾಂ ಶುಭಾಃ ॥ ವಾಯು-೬೧-೬-೧೦**

ಚರಕ, ಆಲಂಬಿ, ಪಾಲಂಗಿ, ಕಮಲ, ಆರ್ಚನಭಿ, ಆರುಣಿನ, ತಾಂಡ್ಯ, ಶ್ಯಾಮಾಯನ, ಕಾಠಕ, ಕಾಲಾಪ, ಹಾರಿದ್ರವೀಯ, ಭಾಗತೇಯ, ತುಂಬುರು, ಉಲಪ, ಅಹ್ವರ, ಪ್ರಾಚ್ಯಕಠ, ಕಪಿತ್ಥ, ಚೌರಾಣಯ,ವಾರಾಯಣೀ, ವಾರ್ತಾಂಡವೀಯ, ಶ್ವೇತಾಶ್ವತರ, ಔಪಮನ್ಯು,ಪಾತಾಂಡ, ಮೈತ್ರಾಯಣೀಯ,ಮಾನವ, ವಾರಾಹ, ದುಂದುಭಿ, ಐತರೇಯ, ಔಖೇಯ, ಆತ್ರೇಯ, ವೈಖಾನಸ, ಖಾಂಡಕೀಯ, ಆಪಸ್ತಂಬ, ಬೋಧಾಯನ, ಸತ್ಯಾಷಾಢ, ಹಿರಣ್ಯಕೇಶೀಯ ಔಥೇಯ, ಕೌಂಡಿನ್ಯ ಅಗ್ನಿವೇಶ, ಹಾರೀತ

ಶುಕ್ಲಯಜುರ್ವೇದದಲ್ಲಿಯ ೧೫ಶಾಖೆಗಳು ಹೀಗಿವೆ-

ಕಾಣ್ವ, ಮಾಧ್ಯಂದಿನ, ಶಾಪೇಯಿ, ತಾಮ್ರಾಯಣ, ವಾತ್ಸ್ಯ, ಆಟವೀ, ಪರಾಯಣ, ವೀರಣ, ವೈಧೇಯ, ಶಾಲಿನ, ವಿದಗ್ಧ, ಉದ್ಗಲ, ಗಾಲವ, ಶೈಶರಿ, ಪರ್ಣಿ (ವಾಯು-೬೧-೬-೧೦)

**ಜೈಮಿನಿಃ(ಜೈಮಿನೇಃ)ಸಾಮಗಸ್ಯಾಸೀತ್ ಸುಮಂತುಸ್ತನಯೋ ಮುನಿಃ (ಮುನೇಃ) ।**
**ಸುಮನ್ವಾಂಸ್ತಸುತಸ್ತಾಭ್ಯಾಮೇಕೈಕಾಂ ಪ್ರಾಹ ಸಂಹಿತಾಮ್ ॥ ೩೯ ॥**

ಸಾಮಗಸ್ಯ=ಸಾಮವೇದವನ್ನು ತಿಳಿದಿರುವ ಜೈಮಿನೇಃ ಮುನೇಃ=ಜೈಮಿನಿಋಷಿಗಳಿಗೆ ಸುಮಂತುಃ=ಸುಮಂತು ಎಂಬ ತನಯಃ=ಮಗನು ಆಸೀತ್=ಇದ್ದನು. (ತಸ್ಯ=ಆ ಸುಮಂತುವಿಗೆ ಸುಮನ್ವಾನ್=ಸುಮನ್ವಾನ್‌ಎಂಬ ಮಗನು ಆಸೀತ್=ಇದ್ದನು.) ತಾಭ್ಯಾಂ=ಸುಮಂತು ಸುಮನ್ವಾನ್ ಎಂಬ ತಮ್ಮ ಪುತ್ರಪೌತ್ರರಿಂದ ಏಕೈಕಾಂ ಸಂಹಿತಾಂ=ಒಂದೊಂದು ಸಂಹಿತೆಯನ್ನು ಪ್ರಾಹ=ಹೇಳಿದನು.

**ಸುಕರ್ಮಾ ಚಾಪಿ ತಚ್ಛಿಷ್ಯಃ ಸಾಮವೇದತರೋರ್ಮಹಾನ್ ।**
**ಸಹಸ್ರಂ ಸಂಹಿತಾಭೇದಂ ಚಕ್ರೇ ಸಾಮ್ನಾಂ ತತೋ ದ್ವಿಜ ॥ ೪೦ ॥**

ಸುಕರ್ಮಾ ದ್ವಿಜಃ ಅಪಿ=ಸುಕರ್ಮನೆಂಬ ಬ್ರಾಹ್ಮಣನೂ ಕೂಡ ತಚ್ಛಿಷ್ಯಃ=ಜೈಮಿನಿಯ ಶಿಷ್ಯನು (ಸುಮಂತು ಸುಮನ್ವಾನರ ಶಿಷ್ಯ) ಮಹಾನ್=ಮಹಾಬುದ್ಧಿವಂತನು. ಸಾಮವೇದತರೋಃ=ಸಾಮವೇದವೆಂಬ ವೃಕ್ಷದ ಸಹಸ್ರಂ ಸಂಹಿತಾಭೇದಂ=ಸಾವಿರ ಸಂಹಿತೆಗಳನ್ನು ತತಃ=ಅದರಿಂದ ಉದ್ಧರಿಸಿ ಚಕ್ರೇ=ಸ್ವೀಕಾರ ಮಾಡಿದನು.

**ಹಿರಣ್ಯನಾಭಃ ಕೌಸಲ್ಯ: ಪೌಷ್ಯಂಜಿಶ್ಚ (ಪೌಷ್ಯಿಂಜಿಶ್ಚ)ಸುಕರ್ಮಣಃ ।**
**ಶಿಷ್ಯೌ ಜಗೃಹತುಶ್ಚಾನ್ಯಃ ಆವಂತ್ಯೋ ಬ್ರಹ್ಮವಿತ್ತಮಃ ॥ ೪೧ ॥**

ಸುಕರ್ಮಣಃ=ಸುಕರ್ಮನ ಶಿಷ್ಯೌ=ಶಿಷ್ಯರಾದ ಕೌಸಲ್ಯಃ=ಕೋಸಲನ ಮಗನಾದ ಹಿರಣ್ಯನಾಭಃ=ಹಿರಣ್ಯನಾಭ ಎಂಬುವನು ಚ=ಮತ್ತು ಪೌಷ್ಯಂಜಃ=ಪೌಷ್ಯಂಜನು ಜಗೃಹತುಃ=ಸಾಮಶಾಖಾವನ್ನು ಸ್ವೀಕರಿಸಿದರು ಬ್ರಹ್ಮವಿತ್ತಮಃ=ಬ್ರಹ್ಮಜ್ಞಾನಿಯಾದ ಆವಂತ್ಯಃ=ಆವಂತ್ಯನು ಅನ್ಯಃ ಚ=ಉದೀಚ್ಯನು ಕೂಡ ಸ್ವೀಕರಿಸಿದನು.

**ಉದೀಚ್ಯಾಃ ಸಾಮಗಾಃ ಶಿಷ್ಯಾ ಆಸನ್ ಪಂಚಶತಾನಿ ವೈ ।**
**ಪೌಷ್ಯಂಜ್ಯಾವಂತ್ಯಯೋ ಶ್ಚಾಪಿ ತಾಂಶ್ಚೋದೀಚ್ಯಾನ್ ಪ್ರಚಕ್ಷತೇ ॥ ೪೨ ॥**

ಪೌಷ್ಯಂಜಾವಂತ್ಯಯೋಃ=ಪೌಷ್ಯಂಜಿ ಆವಂತ್ಯರಿಗೆ ಉದೀಚ್ಯಾಃ=ಉದೀಚೀ ಎಂಬ ಹೆಸರಿನ ಸಾಮಗಾಃ=ಸಾಮವೇದವನ್ನು ಅಧ್ಯಯನ ಮಾಡಿದ ಪಂಚಶತಾನಿ=ಐದು ನೂರು ಶಿಷ್ಯಾಃ=ಶಿಷ್ಯರು ಆಸನ್=ಇದ್ದರು. ತಾನ್=ಅವರನ್ನು ಉದೀಚ್ಯಾನ್=ಉದೀಚ್ಯರು ಎಂದು ಪ್ರಚಕ್ಷತೇ=ಕರೆಯುವರು.

**ಲೌಗಾಕ್ಷಿರ್ಲಾಂಗಲಿಃ ಕುಲ್ಯಃ ಕುಸೀದಃ ಕುಕ್ಷಿರೇವ ಚ ।**
**ಪೌಷ್ಯಂಜಿಶಿಷ್ಯಾ ಜಗೃಹುಃ ಸಂಹಿತಾಸ್ತೇ ಶತಂ ಶತಮ್ ॥ ೪೩ ॥**

೧) ಲೌಗಾಕ್ಷಿ ೨) ಲಾಂಗಲಿ ೩) ಕುಲ್ಯ ೪) ಕುಸೀದ ೫) ಕುಕ್ಷಿ ಈ ಹೆಸರಿನ ಐದು ಜನ ಪೌಷ್ಯಂಜಿಶಿಷ್ಯಾಃ=ಪೌಷ್ಯಂಜಿಯ ಶಿಷ್ಯರು ಅವರ ಶತಂ ಶತಂ= ಒಂದೊಂದು ನೂರು ಸಂಹಿತಾಃ=ಸಂಹಿತೆಗಳನ್ನು ಜಗೃಹುಃ=ಸ್ವೀಕರಿಸಿದರು.

**ಕೃತೋ ಹಿರಣ್ಯನಾಭಸ್ಯ ಚತುರ್ವಿಂಶತಿಸಂಹಿತಾಃ ।**
**ಶಿಷ್ಯ ಊಚೇ ಸ್ವಶಿಷ್ಯೇಭ್ಯಃ ಶೇಷಾ ಆವಂತ್ಯ ಆತ್ಮವಾನ್ ॥ ೪೪ ॥**

ಹಿರಣ್ಯನಾಭಸ್ಯ=ಹಿರಣ್ಯನಾಭನ ಶಿಷ್ಯಃ=ಶಿಷ್ಯನಾದ ಕೃತಃ=ಕೃತ ಎಂಬುವವನು ಸ್ವಶಿಷ್ಯೇಭ್ಯಃ=ತನ್ನ ಶಿಷ್ಯರಿಗೆ ಚತುರ್ವಿಂಶತಿಸಂಹಿತಾಃ=ಇಪ್ಪತ್ನಾಲ್ಕು ಸಂಹಿತೆಗಳನ್ನು ಊಚೇ=ಹೇಳಿದನು ಆತ್ಮವಾನ್=ಜ್ಞಾನಿಯಾದ ಆವಂತ್ಯಃ=ಆವಂತ್ಯನು ಶೇಷಾಃ=ಉಳಿದ ಶಾಖಾಗಳನ್ನು ಸ್ವಶಿಷ್ಯೇಭ್ಯಃ=ತನ್ನ ಶಿಷ್ಯರಿಗೆ ಊಚೇ=ಹೇಳಿದನು.

**ಅಥರ್ವವಿತ್ ಸುಮಂತುಶ್ಚ ಶಿಷ್ಯಮಧ್ಯಾಪಯತ್ ಸ್ವಕಾಮ್ ।**
**ಸಂಹಿತಾಂ ಸೋಽಪಿ ಪಥ್ಯಾಯ ವೇದದರ್ಶಾಯ ಚೋಕ್ತವಾನ್ ॥ ೪೫ ॥**

ಅಥರ್ವವಿತ್=ಅಥರ್ವವೇದವನ್ನು ತಿಳಿದ ಸುಮಂತುಃ=ಸುಮಂತುವು ಶಿಷ್ಯಂ=ಒಬ್ಬ ಶಿಷ್ಯನಿಗೆ ಸ್ವಕಾಂ=ತಾನು ಅಧ್ಯಯನ ಮಾಡಿದ ಅಥರ್ವಸಂಹಿತೆಯನ್ನು ಅಧ್ಯಾಪಯತ್=ಕಲಿಸಿದನು. ಸೋಽಪಿ=ಸುಮಂತು ಶಿಷ್ಯನೂ ಕೂಡ ಪಥ್ಯಾಯ=ಪಥ್ಯ ಹಾಗು ವೇದದರ್ಶಾಯ=ವೇದದರ್ಶ ಎಂಬ ಇಬ್ಬರಿಗೆ ಉಕ್ತವಾನ್=ಹೇಳಿದನು.

**ಶೌಕ್ಲಾಯನಿರ್ಬ್ರಹ್ಮವಾಲಿರ್ಮೋದೋಷಃ ಪಿಪ್ಪಲಾಯನಿಃ ।**
**ವೇದದರ್ಶಸ್ಯ ಶಿಷ್ಯಾಸ್ತೇ ಪಥ್ಯಶಿಷ್ಯಾನಥೋ ಶೃಣು ॥**
**ಕುಮುದಃ ಶೌನಕೋ ಬ್ರಹ್ಮನ್ ಜಾಜಲಿಶ್ಚಾಪ್ಯಥರ್ವವಿತ್ ॥ ೪೬ ॥**

ಶೌಕ್ಲಾಯನಿಃ=ಶೌಕ್ಲಾಯನಿ ಬ್ರಹ್ಮವಾಲಿಃ=ಬ್ರಹ್ಮವಾಲಿ ಮೋದೋಷಃ=ಮೋದೋಷ ಪಿಪ್ಪಲಾಯನಿಃ=ಪಿಪ್ಪಲಾಯನಿ ಈ ನಾಲ್ವರು ವೇದದರ್ಶಸ್ಯ=ವೇದದರ್ಶನನ ಶಿಷ್ಯಾಃ=ಶಿಷ್ಯರು ಅಥೋ=ನಂತರ ಪಥ್ಯಶಿಷ್ಯಾನ್=ಪಥ್ಯನ ಶಿಷ್ಯರನ್ನು ಶೃಣು=ಕೇಳು. ಕುಮುದಃ ಶೌನಕಃ ಜಾಜಲಿಃ=ಕುಮುದ, ಶೌನಕ, ಜಾಜಲಿ ಈ ಹೆಸರಿನ ಮೂವರು ಪಥ್ಯನ ಶಿಷ್ಯರು ಹೇ ಬ್ರಹ್ಮನ್=ಶೌನಕರೇ ಅಥರ್ವವಿತ್=ಎಲ್ಲರೂ ಅಥರ್ವವೇದ ತಿಳಿದವರು.

**ವಿಶೇಷ-** ಒಂದೇ ವೇದವನ್ನು ಓದಿದವರಾದ್ದರಿಂದ ಕ್ರಮ ಪ್ರಾಪ್ತವಾದ ಪಥ್ಯ ಶಿಷ್ಯರನ್ನು ಮೊದಲು ಹೇಳದೇ ವೇದದರ್ಶಿಯ ಶಿಷ್ಯರನ್ನು ಹೇಳಿದ್ದು ತಪ್ಪೇನಲ್ಲ. ಮುಂದೂ ಇದೇ ರೀತಿ ತಿಳಿಯಬೇಕು. 'ಅಥ ಪಥ್ಯಶಿಷ್ಯಾನ್ ಶೃಣು' ಎಂದದ್ದರಿಂದ ಅವರಿಗೆ ಹೇಳುವ ಇಚ್ಛೆಯಿದೆ ಎಂದು ಸೂಚಿಸುವರು.

**ಬಭ್ರುಃ ಶಿಷ್ಯೋಽಪ್ಯಂಗಿರಸಃ (ಶಿಷ್ಯೋಽಥಾಂಗಿರಸಃ)ಸೈಂಧವಾಯನ ಏವ ಚ ।**
**ಅಧೀಯೇತಾಂ ಸಂಹಿತೇ ದ್ವೇ ಸಾವರ್ಣ್ಯಾದ್ಯಾಸ್ತಥಾಪರೇ ॥ ೪೭ ॥**

ಅಂಗಿರಸಃ=ಅಂಗಿರಸಗೋತ್ರದಲ್ಲಿರುವ ಶುನಕನಿಗೆ ಬಭ್ರುಃ=ಬಭ್ರು ಎಂಬುವನು ಚ=ಮತ್ತು ಸೈಂಧವಾಯನಃ ಅಪಿ=ಸೈಂಧವಾಯನ ಎಂಬ ಹೆಸರಿನವನೂ ಸಹ ಶಿಷ್ಯಃ=ಶಿಷ್ಯನು ದ್ವೇ ಸಂಹಿತೇ=ಎರಡು ಶಾಖೆಗಳನ್ನು ಅಧೀಯೇತಾಂ=ಅಧ್ಯಯನ ಮಾಡಿದರು ತಥಾ ಹಾಗೂ ಸಾವರ್ಣ್ಯಾದ್ಯಾಃ=ಸಾವರ್ಣ್ಯವೊದಲಾದವರು ಅಪರೇ=ಬೇರೆ ಶಿಷ್ಯರು ಇದ್ದರು. ಅಥವಾ ಸಾವರ್ಣ್ಯಾದಿಗಳು ಸೈಂಧವಾಯನನ ಶಿಷ್ಯರು ಎಂಥರ್ಥ.

ವಿಶೇಷ- ಶುನಕಸ್ತು ದ್ವಿಧಾ ಕೃತ್ವಾ ದದಾವೇಕಂ ತು ಬಭ್ರವೇ ।
ದ್ವಿತೀಯಾ ಸಂಹಿತಾಂ ಪ್ರಾದಾತ್ ಸೈಂಧವಾಯನ ಸಂಜ್ಞಿತೇ ॥

ಎಂದಿದೆ. ಶುನಕನು ಎರಡು ಶಾಖೆಗಳನ್ನು ಮಾಡಿ ಒಂದನ್ನು ಬಭ್ರುವಿಗೆ ಇನ್ನೊಂದನ್ನು ಸೈಂಧವಾಯನನಿಗೆ ಕೊಟ್ಟನೆಂದು ಪ್ರಮಾಣವಿದೆ.

**ನಕ್ಷತ್ರಕಲ್ಪಃ ಶಾಂತಿಶ್ಚ ಕಶ್ಯಪಾಂಗಿರಸಾದಯಃ ।**
**ಏತೇ ಅಥರ್ವಣಾಚಾರ್ಯಾ: ಶೃಣು ಪೌರಾಣಿಕಾನ್ ಮುನೇ ॥ ೪೮ ॥**

ಹೇ ಮುನೇ=ಶೌನಕರೇ ನಕ್ಷತ್ರಕಲ್ಪಃ=ನಕ್ಷತ್ರಕಲ್ಪನು ಶಾಂತಿಃ=ಶಾಂತಿಕಲ್ಪನು ಕಶ್ಯಪಾಂಗಿರಸಾದಯಃ=ಕಶ್ಯಪಾಂಗಿರಸ ಮೊದಲಾದವರು ಅಥರ್ವಣಾಚಾರ್ಯಾಃ= ಅಥರ್ವಣವೇದ ಪ್ರವರ್ತಕರು ಏತೇ=ಇವರು ಇನ್ನು ಮುಂದೆ ಪೌರಾಣಿಕಾನ್= ಪುರಾಣ ಪ್ರವರ್ತಕರನ್ನು ಶೃಣು=ಕೇಳಿರಿ.

ಅಥರ್ವಣವೇದದಲ್ಲಿ ಒಟ್ಟು ೧೨ ಶಾಖೆಗಳಿವೆ. ಅವುಗಳಲ್ಲಿ ಪೈಪ್ಪಲಾದ, ಸ್ತೌದ, ಮೌದ, ಶೌನಕೀಯ, ಜಾಜಲ, ಜಲದ, ಬ್ರಹ್ಮವದ, ವೇದದರ್ಶ, ಚಾರಣ, ವೈದ್ಯ.

ವಿಶೇಷ- ವೇದವ್ಯಾಸದೇವರಿಂದ ಪೈಲ, ವೈಶಂಪಾಯನ, ಜೈಮಿನಿ, ಸುಮಂತುಗಳು ಕ್ರಮವಾಗಿ ಋಗ್ವೇದಾದಿಗಳನ್ನು ಉಪದೇಶವಾಗಿ ಪಡೆದರು. ಕೇವಲ ಋಷಿಗಳು ಅಂದರೆ ಸಾಮಾನ್ಯಋಷಿಗಳು ವೇದವ್ಯಾಸರಿಂದ ಸಾಕ್ಷಾತ್ತಾಗಿ ಉಪದೇಶ ಪಡೆಯಲು ಸಾಧ್ಯವಿಲ್ಲ ಆದಕ್ಕಾಗಿ ದೇವತೆಗಳು ಪೈಲಾದಿ ಋಷಿಗಳಲ್ಲಿ ಆವಿಷ್ಟರಾದರು. ಎಂದು ಆಚಾರ್ಯರು ನಿರ್ಣಯದಲ್ಲಿ ತಿಳಿಸುತ್ತಾರೆ. ಅದರ ಒಂದು ವಿವರಣೆ ಈ ಕೆಳಗಿನಂತೆ ಇದೆ.

| ವೇದ | ಋಷಿ | ದೇವತೆ |
|---|---|---|
| ಋಗ್ವೇದ | ಪೈಲ | ಶೇಷದೇವರು |
| ಯಜುರ್ವೇದ | ವೈಶಂಪಾಯನ | ಬ್ರಹ್ಮದೇವರು |
| ಸಾಮವೇದ | ಜೈಮಿನಿ | ಇಂದ್ರ |
| ಅಥರ್ವವೇದ | ಸುಮಂತು | ಗರುಡದೇವರು |
| ದೈವೀಮೀಮಾಂಸಾ | ಪೈಲ | |
| ಕರ್ಮಮೀಮಾಂಸಾ | ಜೈಮಿನಿ | |
| ಬ್ರಹ್ಮಮೀಮಾಂಸಾ | ಭಗವಾನ್ ವೇದವ್ಯಾಸರು. | |

**ತ್ರಯ್ಯಾರುಣಿಃ ಕಶ್ಯಪಶ್ಚ ಸಾವರ್ಣಿರಕೃತವ್ರಣಃ ।**
**ಶಿಂಶಪಾಯನಹಾರೀತೌ ಷಡ್ ವೈ ಪೌರಾಣಿಕಾ ಇಮೇ ॥ ೪೯ ॥**

ತ್ರೈಯ್ಯಾರುಣಿಃ=ತ್ರೈಯ್ಯಾರುಣಿ ಕಶ್ಯಪಃ=ಕಶ್ಯಪ ಸಾವರ್ಣಿಃ=ಸಾವರ್ಣಿ ಅಕೃತವ್ರಣಃ =ಅಕೃತವ್ರಣ ಶಿಂಶಪಾಯನ(ವೈಶಂಪಾಯನ)ಹಾರೀತೌ=ಶಿಂಶಪಾಯನ ವೈಶಂಪಾಯನ ಹಾಗು ಹಾರೀತರೆಂಬ ಇಮೇ ಷಟ್=ಈ ಆರು ಜನ ಪೌರಾಣಿಕಾಃ=ಪುರಾಣಾಚಾರ್ಯರು.

**ಅಧೀಯಂತ ವ್ಯಾಸಶಿಷ್ಯಾತ್ ಸಂಹಿತಾಂ ಮತ್ಪಿತುರ್ಮುಖಾತ್ ।**
**ಏಕೈಕಾಮಹಮೇತೇಷಾಂ ಶಿಷ್ಯಃ ಸರ್ವಾಂ ಸಮಧ್ಯಗಾಮ್ ॥ ೫೦ ॥**

ವ್ಯಾಸಶಿಷ್ಯಾತ್=ವೇದವ್ಯಾಸದೇವರ ಶಿಷ್ಯರಾದ ಮತ್ಪಿತುಃ=ನನ್ನ ತಂದೆಯಾದ ರೋಮ ಹರ್ಷಣರ ಮುಖಾತ್=ಮುಖದಿಂದ ಏಕೈಕಾಂ=ಒಂದೊಂದು ಸಂಹಿತಾಂ= ಸಂಹಿತೆಯನ್ನು ಏಕೈಕಃ=ಒಬ್ಬೊಬ್ಬರು ಅಧೀಯಂತ=ಕಲಿತರು. ಅಹಂ=ನಾನು ಏತೇಷಾಂ ಶಿಷ್ಯಃ=ಇವರೆಲ್ಲರ ಶಿಷ್ಯನು ಸರ್ವಾಂ=ಒಬ್ಬೊಬ್ಬರಿಂದ ಒಂದೊಂದರಂತೆ ಎಲ್ಲ ಸಂಹಿತೆಗಳನ್ನು ಸಮಧ್ಯಗಾಮ್=ಅಭ್ಯಸಿಸಿದೆನು.

**ಕಾಶ್ಯಪೋಽಹಂ ಚ ಸಾವರ್ಣೀ ರಾಮಶಿಷ್ಯೋಽಕೃತವ್ರಣಃ ।**
**ಅಧೀಮಹಿ ವ್ಯಾಸಪುತ್ರಾಚ್ಚತಸ್ರೋ ಮೂಲಸಂಹಿತಾಃ ॥ ೫೧ ॥**

ಕಾಶ್ಯಪಃ=ಕಾಶ್ಯಪರು ಸಾವರ್ಣೀ=ಸಾವರ್ಣಿಗಳು ರಾಮಶಿಷ್ಯಃ=ಪರಶುರಾಮದೇವರ ಶಿಷ್ಯನಾದ ಅಕೃತವ್ರಣಃ=ಅಕೃತವ್ರಣ ಚ=ಮತ್ತು ಅಹಂ=ನಾನು ಹೀಗೆ ನಾಲ್ಕು ಜನರು ವ್ಯಾಸ ಪುತ್ರಾತ್=ಶುಕಾಚಾರ್ಯರಿಂದ ಚತಸ್ರಃ ಮೂಲಸಂಹಿತಾಃ=ನಾಲ್ಕು ಪುರಾಣ ಸಂಹಿತೆಗಳನ್ನು ಅಧೀಮಹಿ=ಕಲಿತೆವು.

*ಪೌರಾಣಿಕರನ್ನು ಹೇಳುವಾಗ ಪ್ರಾಸಂಗಿಕವಾಗಿ ಪುರಾಣ ಲಕ್ಷಣವನ್ನು ಹೇಳಿ ಪುರಾಣ ಸ್ವರೂಪವನ್ನು ತಿಳಿಸುತ್ತಾರೆ.*

**ಪುರಾಣಲಕ್ಷಣಂ ಬ್ರಹ್ಮನ್ ಬ್ರಹ್ಮರ್ಷಿಭಿರ್ನಿರೂಪಿತಮ್ ।**
**ಶ್ರುಣುಷ್ವ ಬುದ್ಧಿಮಾಶ್ರಿತ್ಯ ವೇದ ಶಾಸ್ತ್ರಾನುಸಾರತಃ ॥ ೫೨ ॥**

ಶೌನಕರೇ ಬ್ರಹ್ಮರ್ಷಿಭಿಃ=ಬ್ರಹ್ಮರ್ಷಿಗಳಿಂದ ವೇದಶಾಸ್ತ್ರಾನುಸಾರತಃ=ವೇದಶಾಸ್ತ್ರಗಳಿಗೆ ಅನುಸಾರವಾಗಿ ನಿರೂಪಿತಂ=ಹೇಳಲ್ಪಟ್ಟ ಪುರಾಣಲಕ್ಷಣಂ=ಪುರಾಣಗಳ ಲಕ್ಷಣವನ್ನು ಬುದ್ಧಿಮಾಶ್ರಿತ್ಯ=ಏಕಾಗ್ರತೆಯಿಂದ ಶ್ರುಣುಷ್ವ=ಕೇಳಿರಿ.

**ಸರ್ಗಶ್ಚೈವ ವಿಸರ್ಗಶ್ಚ ವೃತ್ತಿರಕ್ಷಾಂತರಾಣಿ ಚ ।**
**ವಂಶೋ ವಂಶಾನುಚರಿತಂ ಸಂಸ್ಥಾಹೇತುರಪಾಶ್ರಯಃ ॥ ೫೩ ॥**
**ದಶಭಿರ್ಲಕ್ಷಣೈರ್ಯುಕ್ತಂ ಪುರಾಣಂ ತದ್ವಿದೋ ವಿದುಃ ।**
**ಕ್ವಚಿತ್ ಪಂಚವಿಧಂ ಬ್ರಹ್ಮನ್ ಮಹದಲ್ಪ ವ್ಯವಸ್ಥಯಾ ॥ ೫೪ ॥**

ಸರ್ಗಃ=ಸರ್ಗವು ವಿಸರ್ಗಃ=ವಿಸರ್ಗವು ವೃತ್ತಿರಕ್ಷಾಂತರಾಣಿ=ವೃತ್ತಿ, ರಕ್ಷಾ, ಮನ್ವಂತರಗಳು, ವಂಶಃ=ವಂಶವು ವಂಶಾನುಚರಿತಮ್=ವಂಶವೃತ್ತಾಂತಗಳು ಸಂಸ್ಥಾಹೇತುಃ=ಸಂಸ್ಥಾಹೇತುಗಳು ಅಪಾಶ್ರಯಃ=ಅಪಾಶ್ರಯವು ದಶಭಿಃ ಲಕ್ಷಣೈಃ=ಹತ್ತು ಲಕ್ಷಣಗಳಿಂದ ಯುಕ್ತಂ=ಕೂಡಿದ್ದನ್ನು ತದ್ವಿದಃ=ಪುರಾಣಜ್ಞರು ಪುರಾಣಂ=ಪುರಾಣವೆಂದು ವಿದುಃ=ತಿಳಿಯುವರು. ಕ್ವಚಿತ್=ಕೆಲವೆಡೆ ಕೆಲವರು ಪಂಚವಿಧಂ=ಐದು ಲಕ್ಷಣಗಳಿಂದ ಕೂಡಿದ್ದೆಂದು ವಿದುಃ=ತಿಳಿದಿರುವರು ಹಾಗಾದರೆ ವಿರೋಧ ಬಂತಲ್ಲ ಎಂದರೆ ಮಹದಲ್ಪವ್ಯವಸ್ಥಯಾ=ಪುರಾಣಕ್ಕೆ ಮಹತ್ವ ಅಲ್ಪತ್ವರೂಪ ವ್ಯವಸ್ಥೆಯಿಂದ ಅಂದರೆ ಮಹಾಪುರಾಣಕ್ಕೆ ಹತ್ತು ಅಲ್ಪ ಪುರಾಣಕ್ಕೆ ಐದು ಲಕ್ಷಣಗಳಾದ್ದರಿಂದ ವಿರೋಧವಿಲ್ಲ

ವಿಶೇಷ- ಸರ್ಗ ವಿಸರ್ಗ ವೃತ್ತಿ ರಕ್ಷೆ ಮನ್ವಂತರ ವಂಶ ವಂಶಾನುಚರಿತ ಸಂಸ್ಥಾ ಹೇತು ಅಪಾಶ್ರಯ ಇವು ಹತ್ತು ಮಹಾಪುರಾಣಗಳ ಲಕ್ಷಣಗಳು.

*ಈ ಹತ್ತು ಲಕ್ಷಣಗಳನ್ನು ಕ್ರಮವಾಗಿ ವಿವರಿಸುವರು.*

**ಅವ್ಯಾಕೃತಗುಣಕ್ಷೋಭಾನ್ಮಹತ ಸ್ತ್ರಿವೃತೋಽಹಮಃ ।**
**ಭೂತಸೂಕ್ಷ್ಮೇಂದ್ರಿಯಾರ್ಥಾನಾಂ ಸಂಭವಃ ಸರ್ಗ ಉಚ್ಯತೇ ॥ ೫೫ ॥**

ಅವಾಕೃತಗುಣಕ್ಷೋಭಾತ್=ಪ್ರಕೃತಿಯ ಗುಣಗಳಾದ ಸತ್ವಾದಿಗಳ ಪರಸ್ಪರ ಸಂಯೋಗವೆಂಬ ಕ್ಷೋಭೆಯಿಂದ ಮಹತಃ=ಮಹತ್ತತ್ವದಿಂದ ತ್ರಿವೃತಃ=ವೈಕಾರಿಕ ತೈಜಸ ತಾಮಸವೆಂದು ಮೂರು ವಿಧವಾದ ಅಂಹಕಾರವು ಹುಟ್ಟಿತು. ಅಹಮಃ= ಅಹಂಕಾರತತ್ತ್ವದಿಂದ(ಮಹತಃ ಸಕಾಶಾತ್ ಮಹತ್ತತ್ವದಿಂದ) ಭೂತಸೂಕ್ಷ್ಮೇಂದ್ರಿ-ಯಾರ್ಥಾನಾಂ=ಭೂತಸೂಕ್ಷ್ಮಗಳ, ತೈಜಸ ಅಹಂಕಾರದಿಂದ ಇಂದ್ರಿಯಗಳ ಮತ್ತು ಶಬ್ದಾದಿ ವಿಷಯಗಳ ಸಂಭವಃ=ಉತ್ಪತ್ತಿಯು ಸರ್ಗಃ ಉಚ್ಯತೇ=ಸರ್ಗವೆನಿಸುತ್ತದೆ ಹಿಂದೆ ಇದನ್ನೇ 'ಭೂತಮಾತ್ರೇಂದ್ರಿಯಧಿಯಾಂ ಜನ್ಮ' ಮುಂತಾಗಿ ಹೇಳಿದೆ.

**ಪುರುಷಾನುಗೃಹೀತಾನಾಮೇತೇಷಾಂ ವಾಸನಾಮಯಃ ।**
**ವಿಸರ್ಗೋ ಯಸ್ಸಮಾಹಾರೋ ಜೀವೋಽಜೀವಶ್ಚರಾಚರಃ ॥ ೩೬ ॥**

ಪುರುಷಾನುಗೃಹೀತಾನಾಂ=ಭಗವಂತನಿಂದ ಪ್ರವೇಶಿಸಲ್ಪಟ್ಟ (ಪ್ರವೇಶವೆಂಬ ಅನುಗ್ರಹವುಳ್ಳ) ಏತೇಷಾಂ=ಈ ತತ್ವಗಳಿಂದ ವಾಸನಾಮಯಃ ಯಃ ಸಮಾಹಾರಃ= ಅವರವರ ಕರ್ಮಾನುಸರಣವು ಸೃಷ್ಟಿಯ ವಿಸರ್ಗವು ಜೀವೋಽಜೀವಃ= ಚೇತನ ಅಚೇತನರೂಪವಾದ ಚರಾಚರಃ=ಸ್ಥಾವರ ಜಂಗಮಾತ್ಮಕ ಬ್ರಹ್ಮಾಂಡ ಸೃಷ್ಟಿಯು ವಿಸರ್ಗಃ=ವಿಸರ್ಗವು.

**ಬ್ರಹ್ಮಣೋ ಗುಣವೈಷಮ್ಯಾತ್ ವಿಸರ್ಗಃ ಪೌರುಷಃ ಸ್ಮೃತಃ ॥**

ಎಂದು ಹಿಂದೆ ಹೇಳಿದೆ. ತತ್ವಗಳ ಸೃಷ್ಟಿ ಸರ್ಗ, ಬ್ರಹ್ಮಾಂಡಸೃಷ್ಟಿ ವಿಸರ್ಗ ಎಂದಾಯಿತು.

**ವೃತ್ತಿರ್ಭೂತಾನಿ ಭೂತಾನಾಂ ಚರಾಣಾಮಚರಾಣಿ ಚ ।**
**ಕೃತೇಶೇನ ನೃಣಾಂ ತತ್ರ ಕಾಮಾಚ್ಚೋದನಯಾಽಪಿ ವಾ ॥ ೩೭ ॥**

ಭೂತಾನಾಂ=ಪಂಚಮಹಾಭೂತಗಳಿಗೆ ಭೂತಾನಿ=ಭೂತಗಳೇ ಪರಸ್ಪರ ವೃತ್ತಿಃ=ಜೀವನವು.(ಅನ್ನವೆಂದರ್ಥ) ಉದಾಹರಣೆಗೆ ತೇಜಸ್ಸಿಗೆ ಪೃಥಿವಿ. ಅಂದರೆ ಕಟ್ಟಿಗೆಗಳು ಅನ್ನವಿದ್ದಂತೆ ಹೀಗೆ ತಿಳಿಯಬೇಕು ಅಥವಾ ಭೂತಾನಾಂ ಪಿಶಾಚಗಳಿಗೆ ಭೂತಾನಿ ಮನುಷ್ಯಶರೀರ, ರಕ್ತ ಮಾಂಸಾದಿಗಳು(ಪಿಶಾಚೋ ಗುಹ್ಯಕಸಿದ್ಧೋ ಭೂತೋಮಿ ದೇವಯೋನಯಃ ಎಂದು ಅಮರವಿದೆ) ಚರಾಣಾಂ ಭೂತಾನಾಂ= ಸಂಚರಿಸುವ ಜೀವರಿಗೆ ಅಚರಾಣಿ ಭೂತಾನಿ=ಧಾನ್ಯಾದಿಗಳು ವೃತ್ತಿಃ=ಜೀವನವು ಅನ್ನವು ಕಾಮಾತ್=ಇಚ್ಛೆಯಿಂದ ಈಶೇನ ಕೃತಾ=ಶ್ರೀಹರಿಯಿಂದ ನಿರ್ಮಿತವಾದುದು ತತ್ರ

ಹೀಗಿರುವಾಗ ನೃಣಾಂ=ಮನುಷ್ಯರಿಗೆ ಕಾಮಾತ್=ಇಚ್ಛೆಯಿಂದ ಹಣ್ಣು ಹಂಪಲುಗಳು ವೃತ್ತಿಃ=ಅನ್ನವು ಚೋದನಯಾ=ವಿಧಿಯಿಂದ ಆ ಕ್ರಿಯೆಗಳಿಗನುಸರಿಸಿ ಚರು ಪುರೋಡಾಶಾದಿಗಳು ಅನ್ನವಾಗುವವು.

**ರಕ್ಷಾಽಚ್ಯುತಾವತಾರೇಹಾ ವಿಶ್ವಸ್ಯಾನು ಯುಗೇ ಯುಗೇ ।**
**ತಿರ್ಯಙ್ಮರ್ತ್ಯರ್ಷಿದೇವೇಷು ಹನ್ಯಂತೇ ಯೈಸ್ತ್ರಯೀದ್ವಿಷಃ ॥ ೫೮ ॥**

ಯುಗೇ ಯುಗೇ=ಪ್ರತಿಯೊಂದು ಯುಗದಲ್ಲಿ ಅನು=ದೇವತೆಗಳ ಪ್ರಾರ್ಥನಾನುಸಾರ ತಿರ್ಯಙ್ಮರ್ತ್ಯರ್ಷಿದೇವೇಷು=ತಿರ್ಯಗ್ಯೋನಿಯಲ್ಲಿ ಮತ್ಸ್ಯಕೂರ್ಮ,ವರಾಹನಾಗಿ ಮನುಷ್ಯರಲ್ಲಿ ರಾಮಕೃಷ್ಣರಾಗಿ ಋಷಿಗಳಲ್ಲಿ ವೇದವ್ಯಾಸನಾಗಿ ದೇವತೆಗಳಲ್ಲಿ ಉಪೇಂದ್ರನಾಗಿ ಅವತರಿಸಿ ಯೈಃ=ಯಾವ ಅವತಾರಗಳಿಂದ ತ್ರಯೀದ್ವಿಷಃ=ವೇದವನ್ನು ದ್ವೇಷಿಸುವವರು(ಅಪಾರ್ಥ ಮಾಡುವ)ಹನ್ಯಂತೇ=ಕೊಲ್ಲಲ್ಪಡುವರೋ ಅಂತಹ ಅಚ್ಯುತಾವತಾರೇಹಾ=ಶ್ರೀಹರಿಯ ಅವತಾರಗಳಲ್ಲಿ ಮಾಡಿದ ವ್ಯಾಪಾರಗಳು ವಿಶ್ವಸ್ಯ= ಜಗತ್ತಿನ ರಕ್ಷಾ=ರಕ್ಷಣೆಯೆನಿಸುತ್ತದೆ ಇದನ್ನು ವರ್ಣಿಸುವುದು ಒಂದು ಪುರಾಣದ ಲಕ್ಷಣ.

**ಮನ್ವಂತರಂ ಮನುರ್ದೇವಾ ಮನುಪುತ್ರಾಃ ಸುರೇಶ್ವರಾಃ ।**
**ಋಷಯೋಽಂಶಾವತಾರಾಶ್ಚ ಹರೇಃ ಷಡ್ವಿಧಮುಚ್ಯತೇ ॥ ೫೯ ॥**

ಮನುಃ=ಮನುವು ದೇವಾಃ=ದೇವತೆಗಳು ಮನುಪುತ್ರಾಃ=ಮನುವಿನ ಮಕ್ಕಳು ಸುರೇಶ್ವರಾಃ=ಇಂದ್ರರು(ಪ್ರತಿಯೊಂದು ಮನ್ವಂತರದ ಇಂದ್ರನನ್ನು ಇಟ್ಟುಕೊಂಡು ಬಹುವಚನ) ಋಷಯಃ=ಸಪ್ತ ಋಷಿಗಳು ಹರೇಃ ಅಂಶಾವತಾರಾಃ=ಶ್ರೀಹರಿಯ ಅಂಶಾವತಾರಗಳು ಈ ಆರು ಸೇರಿದರೆ ಮನ್ವಂತರ ಎನಿಸುತ್ತದೆ ಇವನ್ನು ಪ್ರತಿಪಾದಿಸುವುದು ಎಂದರ್ಥ.

**ವಿಶೇಷ-** ಮನ್ವಂತರಗಳು ಒಟ್ಟು ಹದಿನಾಲ್ಕು ೧.ಸ್ವಾಯಂಭುವ ೨.ಸ್ವಾರೋಚಿಷ ೩.ಉತ್ತಮ ೪.ತಾಪಸ ೫.ರೈವತ ೬.ಚಾಕ್ಷುಷ ೭.ವೈವಸ್ವತ ೮.ಸಾವರ್ಣಿ ೯.ದಕ್ಷಸಾವರ್ಣಿ ೧೦.ಬ್ರಹ್ಮಸಾವರ್ಣಿ ೧೧.ಧರ್ಮಸಾವರ್ಣಿ ೧೨.ರುದ್ರಸಾವರ್ಣಿ ೧೩.ದೇವಸಾವರ್ಣಿ ೧೪.ಇಂದ್ರಸಾವರ್ಣಿ

ಮನ್ವಂತರಕಾಲಪರಿಮಿತಯ ವಿಚಾರ-ನಾಲ್ಕು ಮಹಾಯುಗಗಳು ಗತಿಸಿದರೆ ಒಂದು ಮಹಾಯುಗ ಎಂದು ತಿಳಿಯುವದು. ಒಂದೊಂದು ಯುಗದಲ್ಲಿ ಗತಿಸುವ ವರ್ಷಗಳನ್ನು ತಿಳಿಯುವುದಾದರೆ **ಕೃತಯುಗ**-17ಲಕ್ಷ 28ಸಾವಿರವರ್ಷ, **ತ್ರೇತಾಯುಗ**-

12ಲಕ್ಷ 96ಸಾವಿರವರ್ಷ, **ದ್ವಾಪರಯುಗ**-8ಲಕ್ಷ 64ಸಾವಿರವರ್ಷ, **ಕಲಿಯುಗ**-4ಲಕ್ಷ 32ಸಾವಿರವರ್ಷಗಳು. ಒಟ್ಟು 17,28,000 + 12,96,000 + 8,64,000 + 4,32,000 =43,20,000 ವರ್ಷಗಳು. 43,20,000 ×71 =30,67,20,000. ಇದಲ್ಲದೇ ಶ್ರೀಮದಾಚಾರ್ಯರು ತೃತೀಯಸ್ಕಂಧ ತಾತ್ಪರ್ಯದಲ್ಲಿ **'ಯುಗೈಕಸಪ್ತತೇರೂರ್ಧ್ವಂ ಸಾರ್ಧಾಷ್ಟಾದಶಲಕ್ಷಕಮ್'** ಎಂದು ತಿಳಿಸಿದಂತೆ 71 ಮಹಾಯುಗದ ಮೇಲೆ 18ಲಕ್ಷ 50 ಸಾವಿರವರ್ಷಗಳನ್ನು ಒಂದು ಮನ್ವಂತರಕ್ಕೆ ಹೆಚ್ಚಿಗೆ ಸೇರಿಸಿಕೊಳ್ಳಬೇಕು.) ಒಟ್ಟು ಮನುಷ್ಯಮಾನದ ಪ್ರಕಾರ 30,85,70,000 ಇಷ್ಟು ವರ್ಷಗಳು ಒಂದು ಮನ್ವಂತರ.

'ಯತ್ರ ಇಂದ್ರೋ ಹರಿಸ್ತತ್ರ' ಎಂದು ಹಿಂದೆ ಹೇಳಿದೆ. ಯಾವ ಮನ್ವಂತರದಲ್ಲಿ ಶ್ರೀಹರಿಯೇ ಇಂದ್ರನಾಗುತ್ತಾನೆ. ಆಗ ಇದೇ ಮನ್ವಂತರ ಶಬ್ದಾರ್ಥ. ಹರಿಯ ಅಂಶ ಪ್ರತ್ಯೇಕ ಹೇಳಬೇಕಿಲ್ಲ ಎಂದು ಭಾವ.

**ರಾಜ್ಞಾಂ ಮನುಪ್ರಸೂತಾನಾಂ ವಂಶಸ್ತ್ರೈಕಾಲಿಕೋಽನ್ವಯಃ ।**
**ವಂಶಾನುಚರಿತಂ ತೇಷಾಂ ವೃತ್ತಂ ವಂಶಧರಾಶ್ಚ ಯೇ ॥ ೬೦ ॥**

ಮನುಪ್ರಸೂತಾನಾಂ=ಮನುವಿನಿಂದ ಜನಿಸಿದ ರಾಜ್ಞಾಂ=ರಾಜರುಗಳ ತ್ರೈಕಾಲಿಕಃ= ಭೂತ ಭವಿಷ್ಯದ್ವರ್ತಮಾನಗಳೆಂಬ ಮೂರು ಕಾಲದಲ್ಲಿರುವ ವಂಶಃ=ವಂಶವು ಅದರ ಅನ್ವಯಃ ಪ್ರತಿಪಾದ್ಯತಯಾ ಸಂಬಂಧವು ವಂಶವೆಂದು ಹೇಳಲ್ಪಡುತ್ತದೆ.

ಅಥವಾ ರಾಜರ ಅನ್ವಯಃ=ವಂಶವು ವಂಶಃ=ವಂಶವೆಂದು ಕರೆಯಲ್ಪಡುತ್ತದೆ. ತೇಷಾಂ=ಆ ರಾಜರುಗಳ ವೃತ್ತಂ=ವೃತ್ತಿಯನ್ನು ಹೇಳುವುದು ಯೇ ವಂಶಧರಾಃ=ಆ ಆ ವಂಶ ಪ್ರವರ್ತಕರೋ ಅಥವಾ ನಶಿಸಿ ಹೋದ ವಂಶವನ್ನು ಸ್ಥಾಪಿಸಿದರೋ ತೇಷಾಂ=ಅವರ ವೃತ್ತಂ=ಚರಿತ್ರೆಯನ್ನು ಹೇಳುವದು ವಂಶಾನುಚರಿತಂ=ವಂಶಾನುಚರಿತ-ವೆನಿಸುವುದು.

*ಅಲ್ಲಲ್ಲಿ ಹೇಳಿದ ಪ್ರಲಯಗಳನ್ನು ಒಂದೆಡೆ ಸಂಗ್ರಹಿಸಿ ಹೇಳುವರು*

**ನೈಮಿತ್ತಿಕಃ ಪ್ರಾಕೃತಿಕೋ ನಿತ್ಯ ಆತ್ಯಂತಿಕೋ ಲಯಃ ।**
**ಸಂಸ್ಥೇತಿ ಕವಿಭಿಃ ಪ್ರೋಕ್ತಾ ಚತುರ್ಧಾಽಸ್ಯ ಸ್ವಭಾವತಃ ॥ ೬೧ ॥**

ಅಸ್ಯ ಲಯಃ=ಈ ಪ್ರಪಂಚದ ಪ್ರಲಯವು ಸ್ವಭಾವತಃ=ಸ್ವಾಭಾವಿಕವಾಗಿ ನೈಮಿತ್ತಿಕ, ಪ್ರಾಕೃತಿಕ, ನಿತ್ಯ, ಆತ್ಯಂತಿಕ ಹೀಗೆ ಚತುರ್ಧಾ=ನಾಲ್ಕು ವಿಧವೆಂದು ಹೇಳುವರು ಇದೇ ಕವಿಭಿಃ=ಜ್ಞಾನಿಗಳಿಂದ ಸಂಸ್ಥಾ ಇತಿ ಪ್ರೋಕ್ತಾ=ಸಂಸ್ಥಾ ಎಂದು ಹೇಳಲ್ಪಟ್ಟಿದೆ.

**ಹೇತುರ್ಜೀವೋಽಸ್ಯ (ಹೇತುರ್ಜೀವಸ್ಯ) ಸರ್ಗಾದೇರವಿದ್ಯಾಕರ್ಮಕಾರಕಃ ।**
**ಯಂ ವಾಽನುಶಾಯಿನಂ ಪ್ರಾಹುರವ್ಯಾಕೃತಮುತಾಪರೇ ॥ ೬೨ ॥**

ಯಂ=ಯಾವನನ್ನು ಅನುಶಾಯಿನಂ=ಪ್ರಲಯದಲ್ಲಿ ಪರಮಾತ್ಮನನ್ನು ಪ್ರವೇಶ ಮಾಡಿ ನಿದ್ರಿಸುವವನೆಂದು ಕೆಲವರು ಪ್ರಾಹುಃ=ಹೇಳುವರು ಅಪರೇ=ಹಲವರು ಅವ್ಯಾಕೃತಂ ಅವ್ಯಾಕೃತಾಕಾಶದಂತೆ ನಿರ್ವಿಕಾರನೆಂದು ಪ್ರಾಹುಃ=ಕರೆದರು ಸಃ=ಆ ಜೀವನು ಅವಿದ್ಯಾಕರ್ಮಕಾರಕಃ=ಅಜ್ಞಾನದಿಂದ ಕರ್ಮ ಮಾಡುವವನು ಅಸ್ಯ=ಈ ಜಗತ್ತಿನ ಸರ್ಗಾದೇಃ=ಸೃಷ್ಟ್ಯಾದಿಗಳಿಗೆ ಜೀವಃ=ಜೀವ ಸಮುದಾಯವು ಹೇತುಃ=ನಿಮಿತ್ತವು.

**ವಿಶೇಷ-** ಜೀವ ಸಮುದಾಯಕ್ಕೆ ಸುಖದುಃಖಗಳನ್ನು ಕೊಡುವುದಕ್ಕೆ ಜೀವನನ್ನು ನಿಮಿತ್ತ ಮಾಡಿ ಜಗತ್ತಿನ ಸೃಷ್ಟ್ಯಾದಿಗಳನ್ನು ಮಾಡುತ್ತಾನೆ ಎಂದು ಭಾವ.

**ವ್ಯತಿರೇಕಾನ್ವಯೌ ಯಸ್ಯ ಜಾಗ್ರತ್ಸ್ವಪ್ನಸುಷುಪ್ತಿಷು ।**
**ಮಾಯಾಮಯಾಸು ತದ್ಬ್ರಹ್ಮ ಜೀವವೃತ್ತಿಷ್ವಪಾಶ್ರಯಃ ॥ ೬೩ ॥**

ಯಸ್ಯ=ಯಾವನಿಗೆ ಮಾಯಾಮಯಾಸು=ಶ್ರೀಹರಿಯ ಇಚ್ಛೆಯಿಂದ ರಚಿತವಾದ-ವುಗಳಾದ ಜೀವವೃತ್ತಿಷು=ಜೀವನಿಗೆ ಶ್ರಮಾದಿ ಪರಿಹಾರ ಕಾರಣವಾದುದರಿಂದ ಜೀವನೋಪಾಯಗಳಾದ ಜಾಗ್ರತ್‌ಸ್ವಪ್ನಸುಷುಪ್ತಿಷು=ಜಾಗ್ರತ್ಸ್ವಪ್ನಸುಷುಪ್ತಿ ಎಂಬ ಮೂರು ಅವಸ್ಥೆಗಳಲ್ಲಿ ವ್ಯತಿರೇಕಾನ್ವಯೌ=ಜಾಗ್ರದಾದಿಗಳು ಇಲ್ಲದಿರುವಾಗಲೂ ಇರುವನು ಎಂಬ ವ್ಯತಿರೇಕ, ಅವುಗಳು ಇದ್ದಾಗಲು ಇರುವನು ಎಂಬ ಅನ್ವಯ ಇವೆಯೋ ತದ್ಬ್ರಹ್ಮ=ಆ ಶ್ರೀಹರಿಯು ವ್ಯಪಾಶ್ರಯಃ=ಆಶ್ರಯ ರಹಿತನಾದ್ದರಿಂದ (ಸ್ವಾಶ್ರಯನಾದ್ದರಿಂದ)ವ್ಯಪಾಶ್ರಯನೆನಿಸುತ್ತಾನೆ.

*ಬೇರೆ ರೀತಿಯಿಂದ ವ್ಯಪಾಶ್ರಯವನ್ನು ತಿಳಿಸುವರು*

**ಪದಾರ್ಥೇಷು ಯಥಾದ್ರವ್ಯಂ ತನ್ಮಾತ್ರಂ ರೂಪನಾಮಸು ।**
**ಬೀಜಾದಿಪಂಚತಾಂ ತಾಸು ಹ್ಯವಸ್ಥಾಸು ಯುತಾಯುತಮ್ ॥ ೬೪ ॥**

ರೂಪನಾಮಸು=ರೂಪಾತ್ಮಕ ನಾಮಾತ್ಮಕವಾದ ಪದಾರ್ಥೇಷು=ಕಾರ್ಯವಸ್ತುಗಳಿಗೆ ದ್ರವ್ಯಂ=ಉಪಾದಾನ ಕಾರಣವಾದ ಪ್ರಕೃತಿ ಮುಂತಾದವು ತನ್ಮಾತ್ರಂ=ಪದಾರ್ಥ ಸ್ವರೂಪವಾಗಿದ್ದರೂ ಬೀಜಾದಿಪಂಚತಾಂ=ತಾನು ಉತ್ಪತ್ತಿ ಮೊದಲು ಮಾಡಿ ಮರಣಾಂತಗಳಾದ ತಾಸು=ಆ ಅವಸ್ಥಾಸು=ಅವಸ್ಥೆಗಳಲ್ಲಿ ಯಥಾ=ಹೇಗೆ

ಯುತಾಯುತವಮ್=ಸ್ಥೂಲರೂಪದಿಂದ ಸಂಬದ್ಧವಾಗಿ ಸೂಕ್ಷ್ಮರೂಪದಿಂದ ಸಂಬದ್ಧವಾಗದೇ ಅನ್ವಯ ವ್ಯತಿರೇಕದಿಂದ ಸಿದ್ಧವಾಗುವುದೋ ಹಾಗೆ ಬ್ರಹ್ಮನು ಹುಟ್ಟಿನಿಂದ ಸಾಯುವವರೆಗೆ ಇರುವವನು.

**ವಿರಮೇತ ಯದಾ ಚಿತ್ತಂ ಹಿತ್ವಾ ವೃತ್ತಿತ್ರಯಾಶ್ರಯಮ್ ।**
**ಯೋಗೇನ ವಾ ತದಾತ್ಮಾನಂ ವೇದನಾತ್ಮಾ ನಿವರ್ತತೇ ॥ ೬೫ ॥**

ವೃತ್ತಿತ್ರಯಾಶ್ರಯಂ=ಜಾಗ್ರತ್‌ಸ್ವಪ್ನಸುಷುಪ್ತಿಗಳೆಂಬ ಮೂರು ವೃತ್ತಿಗಳಿಂದ ನಿರೂಢವಾದ ಚಿತ್ತಂ=ಮನಸ್ಸನ್ನು ಹಿತ್ವಾ=ಬಿಟ್ಟು ಯದಾ=ಯಾವಾಗ ವೃತ್ತಿತ್ರಯಗಳಿಂದ ವಿರಮೇತ್=ವಿರಮಿಸುವನೋ ತದಾ=ಆಗ ಯೋಗೇನ=ಧ್ಯಾನ ರೂಪವಾದ ಉಪಾಸನೆಯಿಂದ ಅಥವಾ ನಿರಂತರ ನಾರಾಯಣಕಥಾಕಥನರೂಪ ಉಪಾಸನೆಯಿಂದಲೂ ಆತ್ಮಾನಂ=ಪರಮಾತ್ಮನನ್ನು ವೇದ=ತಿಳಿಯುವನು ಹೊಂದುವನು ಅಂತಹ ಆತ್ಮಾ=ಜೀವನು ನ ನಿವರ್ತತೇ=ತಿರುಗಿ ಬರಲಾರನು.

**ಏವಂ ಲಕ್ಷಣಲಕ್ಷ್ಯಾಣಿ ಪುರಾಣಾನಿ ಪುರಾವಿದಃ ।**
**ಮುನಯೋಽಷ್ಟಾದಶ ಪ್ರಾಹುಃ ಕ್ಷುಲ್ಲಕಾನಿ ಮಹಾಂತಿ ಚ ॥ ೬೬ ॥**

ಏವಂ=ಈ ರೀತಿ ಲಕ್ಷಣಲಕ್ಷ್ಯಾಣಿ=ಲಕ್ಷಣಗಳಿಗೆ ಆಶ್ರಯವಾದ ಪುರಾಣಾನಿ= ಪುರಾಣಗಳನ್ನು ಪುರಾವಿದಃ ಮುನಯಃ=ಪ್ರಾಚೀನ ಜ್ಞಾನಿಗಳು ಕ್ಷುಲ್ಲಕಾನಿ=ಸಂಕ್ಷಿಪ್ತ ಶಬ್ದಗಳುಳ್ಳ (ಶ್ಲೋಕ ಸಂಖ್ಯೆಯಿಂದ) ಮಹಾಂತಿ=ಶ್ಲೋಕ ಸಂಖ್ಯೆಯಿಂದಲೂ ಅರ್ಥದಿಂದಲೂ ಫಲದಿಂದಲೂ ದೊಡ್ಡವಾದವು ಅಷ್ಟಾದಶ=ಹದಿನೆಂಟು ಎಂದು ಪ್ರಾಹುಃ=ಹೇಳಿರುವರು.

*ಹದಿನೆಂಟು ಪುರಾಣಗಳನ್ನು ಕ್ರಮವಾಗಿ ಹೇಳುವರು*

**ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಲಿಂಗಂ ಚ ಗಾರುಡಮ್ ।**
**ನಾರದೀಯಂ ಭಾಗವತಮಾಗ್ನೇಯಂ ಸ್ಕಾಂದಸಂಜ್ಞಿತಮ್ ॥ ೬೭ ॥**

**ಭವಿಷ್ಯಂ ಬ್ರಹ್ಮವೈವರ್ತಂ ಮಾರ್ಕಂಡೇಯಂ ಸವಾಮನಮ್ ।**
**ವಾರಾಹಂ ಮಾತ್ಸ್ಯಂ ಕೌರ್ಮ್ಯಂ ಚ ಬ್ರಹ್ಮಾಂಡಾಖ್ಯಮಿತಿ ತ್ರಿಷಟ್ ॥ ೬೮ ॥**

೧) ಬ್ರಹ್ಮ, ೨) ಪದ್ಮ, ೩) ವಿಷ್ಣು ೪) ಶೈವ, ೫) ಲಿಂಗ, ೬) ಗರುಡ, ೧) ನಾರದೀಯ, ೨) ಭಾಗವತ, ೩) ಅಗ್ನಿ, ೪) ಸ್ಕಂದ, ೫) ಭವಿಷ್ಯ, ೬) ಬ್ರಹ್ಮವೈವರ್ತ, ೧) ಮಾರ್ಕಂಡೇಯ, ೨) ವಾಮನ, ೩) ವರಾಹ, ೪) ಮತ್ಸ್ಯ, ೫) ಕೂರ್ಮ,

೬) ಬ್ರಹ್ಮಾಂಡ ಹೀಗೆ ತ್ರಿಷಟ್ ಮೂರು ಆರುಗಳು ಸೇರಿ ಹದಿನೆಂಟು ಪುರಾಣಗಳು. ಅಷ್ಟಾದಶಪುರಾಣಗಳು-

| | | | | | | |
|---|---|---|---|---|---|---|
| **ವಾರಾಹ** | 24,000 | **ಪಾದ್ಮ** | 55,000 | **ವಿಷ್ಣು** | 23,000 | ಸಾತ್ವಿಕ |
| **ಗಾರುಡ** | 19,000 | **ಭಾಗವತ** | 18,000 | **ನಾರದೀಯ** | 25,000 | ಸಾತ್ವಿಕ |
| **ಬ್ರಹ್ಮಾಂಡ** | 12,000 | **ಬ್ರಹ್ಮವೈವರ್ತ** | 17,000 | **ಮಾರ್ಕಂಡೇಯ** | 9,000 | ರಾಜಸ |
| **ಬ್ರಾಹ್ಮ** | 10,000 | **ಭವಿಷ್ಯ** | 14,500 | **ವಾಮನ** | 10,000 | ರಾಜಸ |
| **ಕೂರ್ಮ** | 17,000 | **ಸ್ಕಾಂದ** | 80,100 | **ಲಿಂಗ** | 11,000 | ತಾಮಸ |
| **ಶೈವ** | 24,000 | **ಮತ್ಸ್ಯ** | 14,000 | **ಅಗ್ನಿ** | 15,400 | ತಾಮಸ |

**ಬ್ರಹ್ಮನ್ನೈತತ್ ಸಮಾಖ್ಯಾತಂ ಶಾಖಾಪ್ರಣಯನಂ ಮುನೇ ।**
**ಶಿಷ್ಯಾಣಾಂ ಚ ಪ್ರಶಿಷ್ಯಾಣಾಂ ಬ್ರಹ್ಮತೇಜೋವಿದೀಪನಮ್ ॥ ೬೯ ॥**

ಏತಚ್ಛಾಖಾಪ್ರಣಯನಂ=ಈ ಪುರಾಣ ವಿಭಾಗಗಳನ್ನು ಮಾಡಲು ಬ್ರಹ್ಮತೇಜೋ-ವಿದೀಪನಂ=ಪರಮಾತ್ಮನ ಮಹಾತ್ಮ್ಯ ಪ್ರಕಾಶಕವಾದವನ್ನು ಶಿಷ್ಯಾಣಾಂ ಪ್ರಶಿಷ್ಯಾಣಾಂ ಚ=ಶಿಷ್ಯ ಪ್ರಶಿಷ್ಯರಿಗೆ ಬ್ರಹ್ಮಣಾ=ಪರಮಾತ್ಮನಿಂದಲೇ ಸಮಾಖ್ಯಾತಂ=ಹೇಳಲ್ಪಟ್ಟಿದೆ.

॥ ಇಲ್ಲಿಗೆ ಆರನೇ ಅಧ್ಯಾಯವು ಸಮಾಪ್ತವಾಯಿತು ॥



# ಅಥ ಸಪ್ತಮೋऽಧ್ಯಾಯಃ

**ಸಾರಾಂಶ**

***ಮಾರ್ಕಂಡೇಯರ ಚರಿತ್ರೆ***

ಶೌನಕರು ಸೂತರನ್ನು ಕುರಿತು ಹೀಗೆ ಹೇಳುತ್ತಾರೆ. ಸೂತರೇ ಸಜ್ಜನರನ್ನು ಉದ್ಧಾರ ಮಾಡಲು ನಿರತರಾದ ನಿಮ್ಮ ಪ್ರಯತ್ನ ನಿಜಕ್ಕೂ ಸಾರ್ಥಕ. ನೀವು ಚಿರಂಜೀವಿಗಳಾಗಬೇಕು. ನಿಮ್ಮ ಈ ತತ್ತ್ವಜ್ಞಾನದ ಪರಂಪರೆಯು ಅವ್ಯಾಹತವಾಗಿ ನಡೆಯಬೇಕು. ನೀವು ಭಗವಂತನ ಮಹಿಮೆಯನ್ನು ಹೇಳುತ್ತಿರುವಿರಿ ಈ ಮಾತುಗಳನ್ನು ಹೇಳುತ್ತಿದ್ದಂತೆ ಶೌನಕರಿಗೆ ಮಾರ್ಕಂಡೇಯರ ಸ್ಮರಣೆಯಾಯಿತು. ಮಾರ್ಕಂಡೇಯರು ತಮ್ಮ ಪೂರ್ವಜರು. ಹರಿಯನ್ನು ಕಾಣುವದಕ್ಕಾಗಿ ಹರನಿಂದ ಆಯುಷ್ಯವನ್ನು ಪಡೆದವರು. ಅಂತಹ ಭಗವನ್ಮಹಿಮೋಪೇತವಾದ ಮಾರ್ಕಂಡೇಯರ ಚರಿತ್ರೆಯನ್ನು ತಿಳಿಸಿರಿ ಎಂದು ಪ್ರಾರ್ಥಿಸುತ್ತಾರೆ.

ಮೃಕುಂಡುವಿನ ಮಕ್ಕಳಾದ ಮಾರ್ಕಂಡೇಯರಿಗೆ ಪ್ರಳಯಕಂಡವರು ಎಂಬ ಕೀರ್ತಿ ಇದೆ. ಈ ಕಲ್ಪದಲ್ಲಿಯೇ ಹುಟ್ಟಿದ ಮಾರ್ಕಂಡೇಯರು ಇನ್ನೂ ನಡೆಯದಿರುವ ಪ್ರಳಯವನ್ನು ನೋಡಿದ್ದಾದರೂ ಹೇಗೆ ? ಆ ಮಹಿಮೆಯನ್ನು ತಿಳಿಯಲು ನಮ್ಮಲ್ಲಿ ಪ್ರತಿಕ್ಷಣವೂ ಆಶೆ ಹೆಚ್ಚುತ್ತಿದೆ. ಆದ್ದರಿಂದ ದಯಮಾಡಿ ಮಾರ್ಕಂಡೇಯರ ಚರಿತ್ರೆಯನ್ನು ಹೇಳಬೇಕು.

ಮಾರ್ಕಂಡೇಯರು ಗುರುಕುಲದಲ್ಲಿದ್ದಾಗ ಪ್ರತಿದಿನವೂ ಪ್ರಾತಃಕಾಲದಲ್ಲಿ ಮಧುಕರ ವೃತ್ತಿಯಿಂದ ಭಿಕ್ಷೆಯನ್ನು ತಂದು ಗುರುಗಳಿಗೆ ಸಮರ್ಪಿಸುತ್ತಿದ್ದರು. ಗುರುಗಳಿಂದ ಆಜ್ಞೆಪಡೆದು ಅವರು ನೀಡಿದ್ದನ್ನು ಮಾತ್ರ ಆಹಾರವನ್ನಾಗಿ ಸ್ವೀಕರಿಸುತ್ತಿದ್ದರು. ಗುರುಗಳು ಬೇಡವೆಂದಾಗ ಉಪವಾಸದಿಂದ ಇರುತ್ತಿದ್ದರು. ಹೀಗೆ ಸಾವಿರಾರು ವರ್ಷಗಳ ಕಾಲ ತಪಸ್ಸು-ಅಧ್ಯಯನಗಳನ್ನು ಮಾಡಿದರು. ಭಗವಂತನ ಪ್ರೀತಿಯನ್ನು ಸಂಪಾದಿಸಿದರು.

ಸದುರ್ಜಯವಾದ ಮೃತ್ಯುವನ್ನು ಜಯಿಸಿದರು. ಅವರ ಈ ಚರ್ಯೆಯನ್ನು ನೋಡಿ ಬ್ರಹ್ಮಾದಿದೇವತೆಗಳು ಹರಸಿದರು. ದೇವತೆಗಳ ಅನುಗ್ರಹದಿಂದ ಆರು ಮನ್ವಂತರಗಳ ಕಾಲ ಭಗವಂತನನ್ನು ತಪಸ್ಸಿನಿಂದ ಸಂತೋಷಗೊಳಿಸಿದರು. ಏಳನೆಯ ಮನ್ವಂತರದಲ್ಲಿ ಇಂದ್ರ ಇವರ ತಪಸ್ಸಿಗೆ ವಿಘ್ನವನ್ನುಂಟು ಮಾಡಲು ವಿಚಾರಿಸಿದ. ಅನೇಕ ಅಪ್ಸರಾಸ್ತ್ರೀಯರು ಧರೆಗಿಳಿದು ಬಂದು ನರ್ತಿಸಿದರು. ಅದಾವುದೂ ಫಲಿಸಲಿಲ್ಲ. ಇಂದ್ರನ ಪ್ರಯತ್ನವೆಲ್ಲ ವ್ಯರ್ಥವಾಯಿತು. ಭಗವಂತ ತನ್ನ ಭಕ್ತರಾದ ಮಾರ್ಕಂಡೇಯರ ಪಕ್ಷದಲ್ಲಿ ನಿಂತ. ಮಾರ್ಕಂಡೇಯರ ಪರಾಕ್ರಮವನ್ನು ಕಂಡು ಇಂದ್ರ ಸಂತುಷ್ಟನಾದ. ಋಷಿಗಳ ಮಹಿಮೆಯನ್ನು ಜಗತ್ತಿಗೆ ತೋರಿಸಿದನು. ಹೀಗೆ ಮಾರ್ಕಂಡೇಯರು ಭಕ್ತಿಯಿಂದ ಭಗವಂತನನ್ನು ಆರಾಧಿಸಿದರು.

*ಶ್ರೀಹರಿಯ ಜ್ಞಾನವು ಮೋಕ್ಷಸಾಧನವಾದುದರಿಂದ ಅವಶ್ಯವಾಗಿ ಸಂಪಾದನೀಯವಾಗಿದೆ. ಅದಕ್ಕೆ ಸಾಧನವು ಅವನ ನಿರತಿಶಯ ಚರಿತ್ರ ಶ್ರವಣವು. ಆದುದರಿಂದ ಶ್ರೀಹರಿಯ ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ಹೇಳುವರು.*

*ಅದರಲ್ಲಿಯೂ ಮೊದಲಿಗೆ ಕೇಳಲು ಯೋಗ್ಯವಾದ ಮಾರ್ಕಂಡೇಯರ ಕಥೆಯನ್ನು ಹೇಳಿರೆಂದು ಶೌನಕರು ಸೂತರನ್ನು ಕೇಳುತ್ತ ತಾವು ಬ್ರಾಹ್ಮಣರಾದುದರಿಂದ ಅವರಿಗೆ ಆಯುಷ್ಯಾಭಿವೃದ್ಧಿಯಾಗಲೆಂದು ಆಶೀರ್ವದಿಸುವರು.*

**ಶೌನಕ ಉವಾಚ-**

**ಸೂತ ಜೀವ ಚಿರಂ ಸಾಧೋ ವದ ನೋ ವದತಾಂ ವರ ।**
**ತಮಸ್ಯಪಾರೇ ಭ್ರಮತಾಂ ನೃಣಾಂ ತ್ವಂ ಪಾರದರ್ಶನಃ ॥ ೧ ॥**

ಹೇ ವದತಾಂ ವರ=ವಾಗ್ಮಿಗಳಲ್ಲಿ ಶ್ರೇಷ್ಠನಾದ ಸಾಧೋ=ಸಜ್ಜನನಾದ ಸೂತ=ಸೂತನೇ ಚಿರಂಜೀವ=ಬಹುಕಾಲ ಜೀವಿಸು. ತ್ವಂ=ನೀನು ಅಪಾರೇ ತಮಸಿ=ಅಜ್ಞಾನ ಪ್ರಚುರವಾದ ಸಂಸಾರದಲ್ಲಿ ಭ್ರಮತಾಂ=ತಿರುಗುವ ನೃಣಾಂ=ಜನರಿಗೆ ಪಾರದರ್ಶನಃ= ದಡವನ್ನು ತೋರಿಸುವವನು. ನಃ=ನಮಗೆ ವದ=(ಮಾರ್ಕಂಡೇಯರ ಕಥೆಯನ್ನು) ಹೇಳು.

**ವಿಶೇಷ-** ಚಿರಂಜೀವಿಗಳಾದ ಮಾರ್ಕಂಡೇಯರ ಕಥೆಯನ್ನು ಕೇಳಲು ಪ್ರಾರ್ಥಿಸುವುದರಿಂದ ಮೊದಲಿಗೆ ಈ ರೀತಿ ಚಿರಂಜೀವಿತವನ್ನು ಆಶಂಸಿರುವರು. **ಜೀವಚಿರಂ** ಎಂಬುದು ಸಮಸ್ತಪದ. ಜೀವೇಷು ಚಿರಂ ಎಂದು ವಿಗ್ರಹ. 'ಜೀವೇಷು ಜೀವಿಷು - ಮನುಷ್ಯರಲ್ಲಿ ಚಿರಂ ಬಹುಕಾಲಿಕಂ - ಬಹುಕಾಲ ಇರುವವನನ್ನು,

ವದ=ಹೇಳು ಎಂದು ಅಭಿಪ್ರಾಯ. 'ಸುಪ್‌ಸುಪಾ ನಿರ್ದೇಶಃ' ಎಂಬ ಮಾತಿನಂತೆ. ಅಥವಾ ಮಯೂರವ್ಯಂಸಕಾದಿತ್ವೇನ ವಾ ಸಮಾಸ ಮಾಡುವುದು.

**ಆಹುಶ್ಚಿರಾಯುಷಮೃಷಿಂ ಮೃಕಂಡುತನಯಂ ಜನಾಃ ।**
**ಯಃ ಕಲ್ಪಾಂತೇಽಪ್ಯುರ್ವರಿತೋ ಯೇನ ಗ್ರಸ್ತಮಿದಂ ಜಗತ್ ॥ ೨ ॥**

ಯೇನ=ಯಾವುದರಿಂದ ಇದಂ=ಈ ಜಗತ್=ಜಗತ್ತು ಗ್ರಸ್ತಂ=ನುಂಗಲ್ಪಟ್ಟಿತೋ ಅಂತಹ ಕಲ್ಪಾಂತೇಽಪಿ=(ಬ್ರಹ್ಮಪ್ರಲಯದಲ್ಲಿಯೂ) ಕಲ್ಪದ ಕೊನೆಗೂ ಯಃ=ಯಾವನು ಉರ್ವರಿತಃ=ಉಳಿದನೋ ಯಂ=ಯಾವ ಮೃಕಂಡುತನಯಂ ಋಷಿಂ=ಮೃಕಂಡುವಿನ ಮಗನಾದ ಮಾರ್ಕಂಡೇಯ ಋಷಿಯನ್ನು ಜನಾಃ=ಜನರು ಚಿರಾಯುಷಂ ಆಹುಃ= ಚಿರಾಯುವೆಂದು ಕರೆದರೋ ಅವನು.

**ವಿಶೇಷ-** ಜನರು ಯಾವ ಮಾರ್ಕಂಡೇಯನನ್ನು ಚಿರಾಯು ಎಂದು ಕರೆದರೋ ಅವನು ಎನ್ನುವದು ಮುಂದಿನ ಶ್ಲೋಕದಲ್ಲಿ ಅನ್ವಯವನ್ನು ಪಡೆದುಕೊಳ್ಳುತ್ತದೆ. 'ಜನಾ ಆಹುಃ' ಎಂದು ಬಹುಜನ ಸಮ್ಮತಿಯಿರುವುದರಿಂದ ವಿಶ್ವಸನೀಯವೆಂದು ಸೂಚಿಸುವರು.

*ಲೌಕಿಕವಾಗಿ ಅವನು ನಮ್ಮ ಅನುಬಂಧಿಯಾದುದರಿಂದ ಅವನ ಕಥಾಶ್ರವಣ ಮಾಡುವದು ಉಚಿತವೆಂದು ಹೇಳುವರು.*

**ಸ ವಾಽಸ್ಮತ್ಕುಲೋತ್ಪನ್ನಃ ಕಲ್ಪೇಽಸ್ಮಿನ್ ಭಾರ್ಗವರ್ಷಭಃ ।**
**ನೈವಾಧುನಾಪಿ ಭೂತಾನಾಂ ಸಂಪ್ಲವಃ ಕೋಽಪಿ ಜಾಯತೇ ॥ ೩ ॥**

ಭಾರ್ಗವರ್ಷಭಃ=ಭೃಗುಕುಲಶ್ರೇಷ್ಠನಾದ ಸಃ=ಆ ಮಾರ್ಕಂಡೇಯರು ಅಸ್ಮತ್ ಕುಲೋತ್ಪನ್ನಃ=ನಮ್ಮ ಕುಲದಲ್ಲಿ ಜನಿಸಿದವರು ಅಸ್ಮಿನ್ ಕಲ್ಪೇ=ಈ ಕಲ್ಪದಲ್ಲಿ ಅಧುನಾಪಿ=ಈವರೆಗೂ ಕೋಽಪಿ=ಯಾವ ಭೂತಾನಾಂ=ಭೂತಗಳ ಸಂಪ್ಲವಃ=ನಾಶವು ನ ಜಾಯತೇ=ಆಗಿಲ್ಲ (ಕ್ರಿಯಾಪ್ರಬಂಧೇ ಲಟ್ ಎಂದಿರುವುದರಿಂದ ಲಙ್ ಅರ್ಥದಲ್ಲಿ ಲಟ್ ಪ್ರಯೋಗ)

**ಏಕ ಏವಾರ್ಣವೇ ಭ್ರಾಮ್ಯನ್ ದದರ್ಶ ಪುರುಷಂ ಕಿಲ ।**
**ವಟಪತ್ರಪುಟೇ ತೋಕಂ ಶಯಾನಂ ತ್ವೇಕಮದ್ಭುತಮ್ ॥ ೪ ॥**

ಏಕ ಏವ=ಒಬ್ಬನೇ ಅರ್ಣವೇ=ಪೂರ್ಣವಾದ ಸಮುದ್ರದಲ್ಲಿ ಭ್ರಾಮ್ಯನ್= ಸಂಚರಿಸುತ್ತ ಪುರುಷಂ=ಪರಮಾತ್ಮನನ್ನು ವಟಪತ್ರಪುಟೇ=ಆಲದೆಲೆಯ ಮೇಲೆ

ಶಯಾನಂ=ಮಲಗಿರುವ ಏಕಂ=ಒಂದು ತೋಕಂ=ಆಶ್ಚರ್ಯಕರವಾದ ಶಿಶುರೂಪವನ್ನು ದದರ್ಶ ಕಿಲ=ನೋಡಿದನಷ್ಟೇ. ಪ್ರಲಯದಲ್ಲಿ ತುಂಬಿದ ಸಮುದ್ರದಲ್ಲಿ ಒಬ್ಬನೇ ತಿರುಗವದಾದರೂ ಹೇಗೆ ? ತಿರುಗುತ್ತ ಅದ್ಭುತವಾದ ಮಗವನ್ನು ನೋಡುವುದಂತು.

**ಏಷ ನಃ ಸಂಶಯೋ ಭೂಯಾನ್ ಜಾತಂ ಕೌತೂಹಲಂ ಯತಃ ।**
**ತನ್ನಶ್ಛಿಂಧಿ ಮಹಾಯೋಗಿನ್ ಪುರಾಣೇಷ್ವಪಿ ಸಮ್ಮತಃ ॥ ೫ ॥**

ಏಷಃ=ಈ ನಃ=ನಮ್ಮ ಸಂಶಯಃ=ಸಂಶಯವು ಭೂಯಾನ್=ನಿನ್ನ ಹೊರತು ಬೇರೆಯವರಿಂದ ಅಪರಿಹಾರ್ಯವಾದುದು ಯತಃ=ಯಾವಕಾರಣ ಪರಂ=ಬಹಳ ಕೌತೂಹಲಂ=ಕುತೂಹಲವೂ ಜಾತಂ=ಉಂಟಾಗಿದೆ. ಆದ್ದರಿಂದ ಮಹಾಯೋಗಿನ್=ಜ್ಞಾನಿಯೇ ಪುರಾಣೇಷು ಸಮ್ಮತಃ=ಪುರಾಣಗಳನ್ನು ತಿಳಿದವನೆಂದು ಎಲ್ಲರಿಂದ ಅಂಗೀಕೃತನಾದ ನೀನು ತಚ್ಛಿಂಧಿ=ಆ ಸಂಶಯವನ್ನು ಪರಿಹರಿಸು.

**ವಿಶೇಷ-** ನನಗೆ ತಿಳಿದಿಲ್ಲವೆನ್ನದಿರಲಿ ಎಂದು 'ಪುರಾಣೇಷು ಸಮ್ಮತಃ' 'ಮಹಾಯೋಗಿನ್' ಈ ಎರಡು ವಿಶೇಷಣಗಳನ್ನು ಹೇಳಿರುವರು.

*ಪ್ರಶ್ನೆ ಮಾಡುವ ಶೌನಕರೇ ನೀವಾದರೂ ಎಲ್ಲವನ್ನೂ ತಿಳಿದವರೇ ಆಗಿದ್ದೀರಿ ಆದರೂ ಜನರಿಗೆ ಬರುವ ಸಂಶಯವನ್ನು ಸ್ವೀಕರಿಸಿ ಪ್ರಶ್ನಿಸುವಿರಿ ಎಂದು ಅಭಿನಂದಿಸಿ ಸೂತರು ಹೇಳುವರು.*

**ಸೂತ ಉವಾಚ -**

**ಪ್ರಶ್ನಸ್ತ್ವಯಾ ಮಹರ್ಷೇಽಯಂ ಕೃತೋ ಲೋಕಭ್ರಮಾಪಹಃ ।**
**ನಾರಾಯಣಕಥಾ ಯತ್ರ ಗೀತಾ ಕಲಿಮಲಾಪಹಾ ॥ ೬ ॥**

ಹೇ ಮಹರ್ಷೇ=ಶೌನಕರೇ ಲೋಕಭ್ರಮಾಪಹಃ=ಜನರ ಭ್ರಮೆಯನ್ನು ಪರಿಹರಿಸುವ ಅಯಂ ಪ್ರಶ್ನಃ=ಈ ಪ್ರಶ್ನೆಯು ತ್ವಯಾ=ನಿನ್ನಿಂದ ಕೃತಃ=ಮಾಡಲ್ಪಟ್ಟಿದೆ. ಯತ್ರ=ಯಾವ ಮಾರ್ಕಂಡೇಯರ ಕಥೆಯಲ್ಲಿ ಕಲಿಮಲಾಪಹಾ=ಕಲಿಯ ದೋಷವನ್ನು ನಾಶ ಮಾಡುವ ನಾರಾಯಣಕಥಾ=ಶ್ರೀಹರಿಯ ಚರಿತ್ರೆಯು ಗೀತಾ=ಹೇಳಲ್ಪಟ್ಟಿದೆ. ಆದ್ದರಿಂದ ಉತ್ತರಿಸುವೆನು ಎಂದು ಭಾವ.

**ಪ್ರಾಪ್ತದ್ವಿಜಾತಿಸಂಸ್ಕಾರೋ ಮಾರ್ಕಂಡೇಯಃ ಪಿತುಃ ಕ್ರಮಾತ್ ।**
**ಛಂದಾಂಸ್ಯಧೀತ್ಯ ಧರ್ಮೇಣ ತಪಃಸ್ವಾಧ್ಯಾಯಸಂಯುತಃ ॥ ೭ ॥**

ಪಿತುಃ=ತಂದೆಯಾದ ಮೃಕಂಡು ಋಷಿಗಳಿಂದ ಕ್ರಮಾತ್=ಜಾತಕರ್ಮ ಮೊದಲು ಮಾಡಿ ಉಪನಯನದವರೆಗೆ ಪ್ರಾಪ್ತದ್ವಿಜಾತಿಸಂಸ್ಕಾರಃ=ಹೊಂದಲ್ಪಟ್ಟ ಬ್ರಾಹ್ಮಣನಿಗೆ ಯೋಗ್ಯವಾದ ಸಂಸ್ಕಾರವುಳ್ಳವನಾಗಿ ಮಾರ್ಕಂಡೇಯಃ=ಮಾರ್ಕಂಡೇಯನು ಧರ್ಮೇಣ=ಪೂರ್ವಾಭಿಮುಖವಾಗಿ ಕೂಡುವುದೇ ಮೊದಲಾದ ಅಧ್ಯಯನದ ನಿಯಮಗಳಿಂದ ಛಂದಾಂಸಿ=ವೇದಗಳನ್ನು ಅಧೀತ್ಯ=ಗುರುಮುಖದಿಂದ ಅಧ್ಯಯನ ಮಾಡಿ ತಪಃಸ್ವಾಧ್ಯಾಯಸಂಯುತಃ=ತಾನು ತಪಸ್ಸು ವೇದಾಧ್ಯಯನಗಳಿಂದ ಯುಕ್ತನಾದನು.

**ಬೃಹದ್ವ್ರತಧರಃ ಶಾಂತೋ ಜಟಿಲೋ ವಲ್ಕಲಾಂಬರಃ ।**
**ಬಿಭ್ರತ್ ಕಮಂಡಲುಂ ದಂಡಮುಪವೀತಂ ಸಮೇಖಲಮ್ ॥ ೮ ॥**
**ಕೃಷ್ಣಾಜಿನಂ ಚಾಕ್ಷಸೂತ್ರಂ ಕುಶಾಂಶ್ಚ ನಿಯಮೈರ್ಯುತಃ ।**
**ಅಗ್ನ್ಯರ್ಕಗುರುವಿಪ್ರಾಂಶ್ಚ ಸ್ವರ್ಚಯನ್ ಸಂಧ್ಯಯೋರ್ಹರಿಮ್ ॥ ೯ ॥**

ಬೃಹದ್ವ್ರತಧರಃ=ಬ್ರಹ್ಮಚಾರಿಗೆ ಯೋಗ್ಯವಾದ ಮಹಾವ್ರತವನ್ನು ಧರಿಸಿದ ಶಾಂತಃ= ಭಗವನ್ನಿಷ್ಠೆಯುಳ್ಳ ಜಟಿಲಃ=ಜಟಾಧಾರಿಯಾದ ವಲ್ಕಲಾಂಬರಃ=ನಾರುಬಟ್ಟೆಯನ್ನುಟ್ಟ ಕಮಂಡಲುಂ=ಕಮಂಡಲವನ್ನು ದಂಡಂ=ದಂಡವನ್ನು ಸಮೇಖಲಂ=ಹುಲ್ಲಿನ ಉಡದಾರದಿಂದ ಸಹಿತವಾದ ಕಪೀನವನ್ನು ಉಪವೀತಂ=ಯಜ್ಞೋಪವೀತವನ್ನು ಚಾಕ್ಷಸೂತ್ರಂ=ಅಕ್ಷಮಾಲಾವನ್ನು ಕೃಷ್ಣಾಜಿನಂ=ಕೃಷ್ಣಾಜಿನವನ್ನು ಕುಶಾನ್=ದರ್ಭೆಗಳನ್ನು ಬಿಭ್ರತ್=ಧರಿಸಿದವನಾಗಿ ನಿಯಮೈಃ ಯುತಃ=ಯಮ ನಿಯಮ ಮುಂತಾದವುಗಳಿಂದ ಕೂಡಿದವನಾಗಿ ಅಗ್ನ್ಯರ್ಕಗುರುವಿಪ್ರಾನ್=ಅಗ್ನಿ-ಸೂರ್ಯ-ಗುರುಗಳು-ಬ್ರಾಹ್ಮಣರನ್ನು ಸಂಧ್ಯಯೋಃ=ಕಾಲವನ್ನು ಅತಿಕ್ರಮಿಸದೇ ಸಂಧಿ ಕಾಲಗಳಲ್ಲಿ ಹರಿಂ=ಪರಮಾತ್ಮನನ್ನು ಸ್ವರ್ಚಯನ್=ಪೂಜಿಸುತ್ತ ಇದ್ದನು.

**ಸಾಯಂ ಪ್ರಾತಃ ಸ ಗುರವೇ ಭೈಕ್ಷ್ಯಮಾಹೃತ್ಯ ವಾಗ್ಯತಃ ।**
**ಬುಭುಜೇ ಗುರ್ವನುಜ್ಞಾತಃ ಸಕೃನ್ನೋಚೇದುಪೋಷಿತಃ ॥ ೧೦ ॥**

ಸಃ=ಮಾರ್ಕಂಡೇಯನು ಸಾಯಂಪ್ರಾತಃ=ಬೆಳಿಗ್ಗೆ ಮತ್ತು ಸಾಯಂಕಾಲ ವಾಗ್ಯತಃ= ಮೌನವಾಗಿ ಭೈಕ್ಷ್ಯಂ=ಭಿಕ್ಷೆ ಬೇಡಿ ತಂದ ಪದಾರ್ಥವನ್ನು ಗುರುವೇ=ಗುರುಗಳಿಗೆ ಆಹೃತ್ಯ=ತಂದು ಒಪ್ಪಿಸಿ ಗುರ್ವನುಜ್ಞಾತಃ=ಗುರುಗಳ ಅಪ್ಪಣೆ ಪಡೆದು ಸಕೃತ್=ಒಂದು ಸಲ ಮಾತ್ರ ಬುಭುಜೇ=ಊಟ ಮಾಡುವನು ನೋ ಚೇತ್=ಮನಸ್ಸನ್ನು ಪರೀಕ್ಷಿಸಲು ಗುರುಗಳ ಆಜ್ಞೆ ನೀಡದಿದ್ದಲ್ಲಿ ಉಪೋಷಿತಃ=ಉಪವಾಸವಿರುತ್ತಿದ್ದನು.

**ವಿಶೇಷ-** ವಾಕ್-ಉಪದೇಶರೂಪವಾದ ಮಾತುಗಳು ಯತಃ-ಯಾರಿಂದ ಬರುವುವೋ ಅಂಥ ಗುರುವಿಗೆ ಹೀಗೂ ಅರ್ಥ. ಆಜ್ಞೆ ಕೊಡದಿದ್ದರೆ ಸಿಟ್ಟಾಗಿ ದೂರ ಹೋಗಲಿಲ್ಲ ಎಂಬರ್ಥವೂ ಉಪೋಷಿತಃ ಎಂಬುದರಿಂದ ಬರುವುದು ಉಪ= ಸಮೀಪ ಉಷಿತಃ-ವಾಸಿಸಿದವನು ಎಂದರ್ಥ.

**ಏವಂ ತಪಃ ಸ್ವಾಧ್ಯಾಯಪರೋ ವರ್ಷಾಣಾಮಯುತಾಯುತಮ್ ।**
**ಆರಾಧಯನ್ ಹೃಷೀಕೇಶಂ ಜಿಗ್ಯೇ ಮೃತ್ಯುಂ ಸುದುಷ್ಕರಮ್ ॥ ೧೧ ॥**

ಏವಂ=ಈ ರೀತಿಯಾಗಿ ತಪಃಸ್ವಾಧ್ಯಾಯಪರಃ=ಅಧ್ಯಯನ ತಪಸ್ಸುಗಳಲ್ಲಿ ಆಸಕ್ತನಾಗಿ ವರ್ಷಾಣಾಂ ಅಯುತಾಂ ಯುತಂ=ಹತ್ತು ಸಾವಿರ ವರ್ಷ ಪರ್ಯಂತ ಹೃಷಿಕೇಶಂ= ಶ್ರೀಹರಿಯನ್ನು ಆರಾಧಯತ್=ಆರಾಧಿಸಿದನು. ಸುದುಷ್ಕರಂ=ಕಠಿಣವಾದ ಮೃತ್ಯುಂ= ಮರಣವನ್ನು ಜಿಗ್ಯೇ=ಗೆದ್ದನು.

*ಮೃತ್ಯುರಹಿತರಾದವರೂ ಇವನ ಕಾರ್ಯದಿಂದ ಆಶ್ಚರ್ಯಗೊಂಡರು ಎಂದು ಹೇಳುವರು.*

**ಬ್ರಹ್ಮಾ ಭೃಗುರ್ಭವೋ ದಕ್ಷೋ ಬ್ರಹ್ಮಪುತ್ರಾಶ್ಚ ಯೇಽಪರೇ ।**
**ನೃದೇವಪಿತೃಭೂತಾನಿ ತೇನಾಸನ್ನತಿವಿಸ್ಮಿತಾಃ ॥ ೧೨ ॥**

ಬ್ರಹ್ಮಾ=ಬ್ರಹ್ಮದೇವರು ಭೃಗುಃ=ಭೃಗುಋಷಿಯು ಭವಃ=ರುದ್ರದೇವರು ದಕ್ಷಃ= ದಕ್ಷಪ್ರಜಾಪತಿಯು ಯೇ ಅಪರೇ ಬ್ರಹ್ಮಪುತ್ರಾಃ=ಮಿಕ್ಕೆಲ್ಲ ಬ್ರಹ್ಮಪುತ್ರರು(ನಾರದಾದಿಗಳು, ಸನತ್ಕುಮಾರಾದಿಗಳು,ಮರೀಚ್ಯಾದಿಗಳು) ನೃದೇವಪಿತೃಭೂತಾನಿ=ಮನುಷ್ಯರು, ದೇವತೆಗಳು, ಪಿತೃಗಳು, ಭೂತಗಳು ತೇನ=ಅವನ ಕಾರ್ಯದಿಂದ ಅತಿವಿಸ್ಮಿತಾಃ ಆಸನ್=ಅತ್ಯಂತ ಆಶ್ಚರ್ಯಚಕಿತರಾದರು ಇತ್ಯೇತೇ=ಎಂದು ಅಧ್ಯಾಹಾರ ಮಾಡಿ ಅನ್ವಯ ಮಾಡುವುದರಿಂದ ಅತಿವಿಸ್ಮಿತಾಃ ಎಂಬುದು ಉಪಪನ್ನವಾಗುವುದು.

ಅಥವಾ ಭೂತಾನಿತೇ=ಎಂದು ಪದಚ್ಛೇದ. ನಿ ಎಂಬುದಕ್ಕೆ ಆಸನ್ ಎಂಬಲ್ಲಿ ಅನ್ವಯ. ಭೂತಾಃ ದೇವಯೋನಿಯಲ್ಲಿ ಜನಿಸಿದವರು ಎಂದರ್ಥ. ನಿತೇನ 'ಮುಷ್ಟಿಹತ್ಯಯಾ ನಿವೃತ್ತಾಃ' ಎಂಬಲ್ಲಿಯಂತೆ ವ್ಯವಧಾನವಿದ್ದರೂ ಅನ್ವಯವೆಂದು ತಿಳಿಯಬೇಕು. ಹಿಂದೆಯೂ ಹೀಗೆ ವಿವರಿಸಿರುವರು. ಭೂತಾನಿನಃ ಎಂಬಲ್ಲಿ ಭೂತಾಶ್ಚ ಅನಿನಃ ಇತರೆ ಪ್ರಾಣಿನಶ್ಚ ತೇ ಚ ತೇ ಚ ಇತಿ ಸಃ ಎಂದು. ಅತಿತೇ ಅವಿತರತಿರೂಪಿಣಃ ರಕ್ಷಿತವಾದ ತಮ್ಮ ಸುಖಸ್ವರೂಪವುಳ್ಳ ಆದ್ದರಿಂದಲೇ ಅತಿವಿಸ್ಮಿತಾಃ ಅತಿಕ್ರಾಂತಾಃ ನೀತಿತಃ । ಅವಿಸ್ಮಿತಾ ಇತಿ ಯಾವತ್ । ನಿತರಾಂ ಈತಿತಃ ನೀತಿತಃ

ಬಹುತರವಾದ ಬಾಧೆಯಿಂದ ಅತಿಕ್ರಾಂತರು ಅಂದರೆ ಆಶ್ಚರ್ಯಪಡದವರೆಂದರ್ಥ. ಜಿಗ್ಯೇ ಇತಿ ವಿಸ್ಮಿತಾ ನಾಸನ್ ಎಂದು ಅನ್ವಯ.

ಈ ಶ್ಲೋಕದಲ್ಲಿ ಮಾರ್ಕಂಡೇಯರು ತಪವಗೈದು ಮೃತ್ಯುವನ್ನು ಜಯಸಿದ್ದನ್ನು ಕಂಡು ಬ್ರಹ್ಮಾದಿಗಳು ಆಶ್ಚರ್ಯಪಟ್ಟರು ಎಂದರ್ಥ ಕಾಣುವದು. ಇದು ತಾರತಮ್ಯವಿರುದ್ಧವಾದದ್ದು ಕಾರಣ ಈ ರೀತಿ ಯೋಜಿಸಿರುವರು ಶ್ರೀಸತ್ಯಧರ್ಮತೀರ್ಥರು. ಸ್ವಯಂ ಮೃತ್ಯುವನ್ನು ಗೆದ್ದ ಭಗವದಪರೋಕ್ಷಜ್ಞಾನಿಗಳಾದ ಅಧಿಕಾರಿಗಳಲ್ಲಿ ಉತ್ತಮರಾದ ಬ್ರಹ್ಮಾದಿದೇವತೆಗಳು ಮಾರ್ಕಂಡೇಯರನ್ನು ಕಂಡು ನಮಗಿಲ್ಲದ ಮೃತ್ಯುಂಜಯ ಭಗವದನುಗ್ರಹ ಮುಂತಾದವುಗಳು ಮಾರ್ಕಂಡೇಯರಿಗೆ ಇದೆ ಎಂಬ ಬಾಧೆಯನ್ನಾಗಲಿ ಆಶ್ಚರ್ಯವನ್ನಾಗಲಿ ಹೊಂದಲಿಲ್ಲ ಎಂದು ಭಾವ.

**ಇತ್ಥಂ ಬೃಹದ್ವ್ರತಧರಸ್ತಪಃಸ್ವಾಧ್ಯಾಯಸಂಯಮೈಃ ।**
**ದಧ್ಯಾವಧೋಕ್ಷಜಂ ಯೋಽಗಾದ್ ಧ್ವಸ್ತಕ್ಲೇಶೋಂತರಾತ್ಮನಾ ॥ ೧೩ ॥**

ಇತ್ಥಂ=ಈ ರೀತಿಯಾಗಿ ಬೃಹದ್ವ್ರತಧರಃ=ಮಹಾವ್ರತಧಾರಿಯಾಗಿ ತಪಃಸ್ವಾಧ್ಯಾಯ ಸಂಯಮೈಃ=ತಪಸ್ಸು ವೇದಾಧ್ಯಯನ ಇಂದ್ರಿಯ ನಿಗ್ರಹಗಳಿಂದ ಯೋಗಾತ್=ಸಮಾಧಿ ಮುಂತಾದ ಉಪಾಯದಿಂದ ಧ್ವಸ್ತಕ್ಲೇಶಃ=ಸಾಂಸಾರಿಕ ಕಷ್ಟವಿಲ್ಲದೆ ಅಂತರಾತ್ಮನಾ ಶ್ರೀಹರಿಯಲ್ಲಿಟ್ಟ ಮನಸ್ಸಿನಿಂದ ಅಧೋಕ್ಷಜಂ=ಶ್ರೀಹರಿಯನ್ನು ದಧ್ಯೌ=ಧ್ಯಾನಮಾಡಿದನು. (ಅಂತಃ ಸ್ಥಿತ್ವಾ ರಮಣಕೃತ್ ಅಂತರಃ ಸ ಉದಾಹೃತಃ ಎಂದಿರುವುದರಿಂದ ಅಂತರ ಎಂದರೆ ಶ್ರೀಹರಿಯು ಎಂದರ್ಥ.)

**ತಸ್ಯೈವಂ ಯುಂಜತಶ್ಚಿತ್ತಂ ಮಹಾಯೋಗೇನ ಯೋಗಿನಃ ।**
**ವ್ಯತೀಯಾಯ ಮಹಾನ್ ಕಾಲೋ ಮನ್ವಂತರಷಡಾತ್ಮಕಃ ॥ ೧೪ ॥**

ಏವಂ=ಈ ರೀತಿಯಾಗಿ ಮಹಾಯೋಗೇನ=ಮಹತ್ತರ ಉಪಾಯದಿಂದ ಯೋಗಿನಃ=ಯೋಗಿಯಾದ ತಸ್ಯ=ಮಾರ್ಕಂಡೇಯನಿಗೆ ಚಿತ್ತಂ=ಭಗವಂತನಲ್ಲಿ ಮನಸ್ಸನ್ನು ಯುಂಜತಃ=ಯೋಜಿಸುತ್ತಲೇ ಮನ್ವಂತರಷಡಾತ್ಮಕಃ=ಆರು ಮನ್ವಂತರಗಳಷ್ಟು ಮಹಾನ್ ಕಾಲಃ=ಬಹಳ ಕಾಲವು ವ್ಯತೀಯಾಯ=ಗತಿಸಿ ಹೋಯಿತು.

*ದೇವೇಂದ್ರನು ಸ್ವರ್ಗಾಧಿಪತ್ಯವನ್ನಪೇಕ್ಷಿಸಿ ತಪಸ್ಸು ಮಾಡುವನೆಂದು ತಿಳಿದು ವಿಘ್ನ ಮಾಡಿದ ರೀತಿಯನ್ನು ಹೇಳುವರು*

**ಏತತ್ ಪುರಂದರೋ ಜ್ಞಾತ್ವಾ ಸಪ್ತಮೇಽಸ್ಮಿನ್ ಕಿಲಾಂತರೇ ।**
**ತಪೋ ವಿಶಂಕಿತೋ ಬ್ರಹ್ಮನ್ನಾರೇಭೇ ತದ್ವಿಘಾತಕಮ್ ॥ ೧೫ ॥**

ಅಸ್ಮಿನ್=ಈ ಸಪ್ತಮೇ=ಏಳನೆಯ ವೈವಸ್ವತಮನ್ವಂತರೇ=ವೈವಸ್ವತಮನ್ವಂತರದಲ್ಲಿ ಏತತ್ತಪಃ=ಈ ತಪಸ್ಸನ್ನು ಜ್ಞಾತ್ವಾ=ತಿಳಿದು ವಿಶಂಕಿತಃ=ಸ್ವರ್ಗಾಧಿಪತ್ಯವನ್ನೇ ಅಪೇಕ್ಷಿಸಿ ತಪಸ್ಸು ಮಾಡುತ್ತಿರುವನೆಂದು ಶಂಕಿಸಿ ಪುರಂದರಃ=ಇಂದ್ರನು ತದ್ವಿಘಾತಕಂ=ತಪಸ್ಸಿಗೆ ವಿಘ್ನವನ್ನು ಆರೇಭೇ=ಮಾಡಲಾರಂಭಿಸಿದನು.

*ದೇವೇಂದ್ರನು ಮಾಡಿದ ವಿಘ್ನವನ್ನು ವಿವರಿಸುವರು.*

**ಗಂಧರ್ವಾಪ್ಸರಸಃ ಕಾಮಂ ವಸಂತಂ ಮಲಯಾನಿಲಮ್ ।**
**ಮುನಯೇ ಪ್ರೇಷಯಾಮಾಸ ರಜಃ ಸ್ತೋಭಮದೌ ತಥಾ ॥ ೧೬ ॥**

ಗಂಧರ್ವಾಪ್ಸರಸಃ=ಗಂಧರ್ವರು ಅಪ್ಸರಾಸ್ತ್ರೀಯರನ್ನು ಕಾಮಂ=ಕಾಮನನ್ನು, ವಸಂತಂ=(ಆಶಾಭಿಮಾನಿಯನ್ನು)ವಸಂತಮಾಸಾಭಿಮಾನಿಯನ್ನು ಮಲಯಾನಿಲಂ= ಮಲಯಮಾರುತನನ್ನು(ರಜೋಗುಣವನ್ನು)ಸ್ತೋಭಂ=ಆಕಳಿಕೆಯನ್ನು (ವ್ಯರ್ಥಕ್ರಿಯೆಯನ್ನು)ಮದಂ=ಅಹಂಕಾರವನ್ನು ಮುನಯೇ=ಮಾರ್ಕಂಡೇಯನಿಗೆ (ಋಷಿಯ ತಪೋಭಂಗಕ್ಕಾಗಿ) ಪ್ರೇಷಯಾಮಾಸ=ಕಳುಹಿಸಿದನು.

**ವಿಶೇಷ-** ಕಾಮಂ ಯಥೇಚ್ಛ ಎಂಬರ್ಥದಲ್ಲಿ ಅವ್ಯಯವು. ಹೊರಗೆ ದೇಹಕ್ಕೆ ತೊಂದರೆ ಕೊಡಲು ಕಾಮನನ್ನು, ಹೊರಗೂ ಒಳಗೂ ಆಶೆಯನ್ನು ಹುಟ್ಟಿಸಲು ರಜೋಗುಣವನ್ನೂ, ಆಕಳಿಕೆ ತೂಕಡಿಕೆ ಮುಂತಾದ ವ್ಯರ್ಥಕ್ರಿಯೆಗಳನ್ನು, ತಪಸ್ಸನ್ನು ಬಿಟ್ಟು ಸುಮ್ಮನೆ ಕೂಡುವಂತೆ ಅಹಂಕಾರವನ್ನೂ ಕಳುಹಿಸಿದನು ಎಂದು ಭಾವ.

**ತೇ ವೈ ತದಾಶ್ರಮಂ ಜಗ್ಮುರ್ಹಿಮಾದ್ರೇಃ ಪಾರ್ಶ್ವ ಉತ್ತರೇ ।**
**ಪುಷ್ಯಭದ್ರಾನದೀ ಯತ್ರ ಚಿತ್ರಾಖ್ಯಾ ಚ ಶಿಲಾ ವಿಭೋ ॥ ೧೭ ॥**

ತೇ=ಇಂದ್ರನಿಂದ ಕಳುಹಿಸಿದ ಕಾಮವೊದಲಾದವರು ಹಿಮಾದ್ರೇಃ= ಹಿಮವತ್ಪರ್ವತದ ಉತ್ತರೇ ಪಾರ್ಶ್ವೇ=ಎಡಭಾಗದಲ್ಲಿರುವ ಯತ್ರ=ಎಲ್ಲಿ ಶಿಲಾ=ಶಿಲೆ ಎಂಬ ಚಿತ್ರಾಖ್ಯಾ =ಚಿತ್ರಾ ಎಂದೂ ಹೆಸರುಳ್ಳ ಪುಷ್ಪಭದ್ರಾನದೀ=ಪುಷ್ಪಭದ್ರಾನದಿಯು ಇದೆಯೋ ತತ್ರ=ಅಲ್ಲಿರುವ ತದಾಶ್ರಮಂ=ಅವನ ಆಶ್ರಮಕ್ಕೆ ಜಗ್ಮುಃ=ಹೋದರು.

ವಿಶೇಷ- 'ತದಾಶ್ರಮಂ ಜಗ್ಮುಃ' ಎಂದು ಹೇಳಿದ್ದರಿಂದ ಮುಂದಿನ ಕಾರ್ಯ-ವನ್ನು ನೋಡಲಾಗಿ ತಮ್ಮ ಕಾರ್ಯವಾಗದ ಕಾರಣ ತದಾ-ಆಗ ಶ್ರಮಂ ಜಗ್ಮುಃ-ಶ್ರಮವನ್ನೂ ಹೊಂದಿದರು ಎಂಬ ಅರ್ಥವನ್ನೂ ಸೂಚಿಸುವರು.

**ತತ್ರಾಶ್ರಮಪದಂ ಪುಣ್ಯಂ ಪುಣ್ಯದ್ರುಮಲತಾನ್ವಿತಮ್ ।**
**ಪುಣ್ಯದ್ವಿಜಕುಲಾಕೀರ್ಣಂ ಪುಣ್ಯಾಮಲಜಲಾಶಯಮ್ ॥ ೧೮ ॥**

ತತ್ರ=ಹಿಂದೆ ಹೇಳಿದ ಸ್ಥಳದಲ್ಲಿ ಪುಣ್ಯದ್ರುಮಲತಾಯುತಂ=ಪವಿತ್ರವಾದ ಗಿಡ ಬಳ್ಳಿಗಳಿಂದ ಕೂಡಿದ ಪುಣ್ಯದ್ವಿಜಕುಲಾಕೀರ್ಣಂ=ಶುಭಸೂಚಕಗಳಾದ ಪಕ್ಷಿಗಳ ಸಮೂಹದಿಂದ ಕೂಡಿದ ಪುಣ್ಯಾಮಲಜಲಾಶಯಂ=ರಮ್ಯವಾದ ಸ್ವಚ್ಛವಾದ ಸರೋವರವುಳ್ಳ ಪುಣ್ಯಂ=ಪರಿಶುದ್ಧವಾದ ಆಶ್ರಮಪದಂ=ಆಶ್ರಮಸ್ಥಾನವು ಇತ್ತು.

**ಮತ್ತಭ್ರಮರಸಂಗೀತಂ ಮತ್ತಕೋಕಿಲಕೂಜಿತಮ್ ।**
**ಮತ್ತಬರ್ಹಿನಟಾಟೋಪಂ ಮತ್ತದ್ವಿಜಕುಲಾಕುಲಮ್ ॥ ೧೯ ॥**

ಮತ್ತಭ್ರಮರಸಂಗೀತಂ=ಸಂತುಷ್ಟವಾದ ಗುಂಗಿಹುಳುಗಳ ಝೇಂಕಾರ ರೂಪ ಸಂಗೀತದಿಂದ ಯುಕ್ತವಾದ ಮತ್ತಕೋಕಿಲಕೂಜಿತಂ=ಹರ್ಷದಿಂದ ಕೋಗಿಲೆ ಮಾಡುವ ಮಂಜುಳ ಧ್ವನಿಯುಳ್ಳ ಮತ್ತಬರ್ಹಿನಟಾಟೋಪಂ=ಆನಂದದಿಂದ ನರ್ತಿಸುವ ನವಿಲಿನ ಆರ್ಭಟವುಳ್ಳ ಮತ್ತದ್ವಿಜಕುಲಾಕುಲಂ=ಆನಂದಯುತ ಪಕ್ಷಿಗಳ ಸಮೂಹದಿಂದ ಕಿಲಕಿಲಿಸುವ ಆಶ್ರಮವನ್ನು

**ವಾಯುಃ ಪ್ರವಿಷ್ಟ ಆದಾಯ ಹಿಮನಿರ್ಜರಸೀಕರಾನ್ ।**
**ಸುಮನೋಭಿಃ ಪರಿಷ್ವಕ್ತೋವವಾವುತ್ತಂಭಯನ್ ಸ್ಮರಮ್ ॥ ೨೦ ॥**

ಹಿಮನಿರ್ಜರಸೀಕರಾನ್=ಹಿಮಗಿರಿಯ ಬೆಟ್ಟದಿಂದ ಹರಿದು ಬರುವ ನೀರಿನ ತುಂತುರು ಹನಿಗಳನ್ನು ಆದಾಯ=ಸ್ವೀಕರಿಸಿ ಸುಮನೋಭಿಃ=ಹೂಗಳಿಂದ ಪರಿಷ್ವಕ್ತಃ=ಆಲಿಂಗಿತವಾದ ವಾಯುಃ=ಗಾಳಿಯು ಪ್ರವಿಷ್ಟಃ=ಪ್ರವೇಶಿಸಿ ಸ್ಮರಂ ಉತ್ತಂಭಯನ್=ಕಾಮೋದ್ದೀಪನಗೊಳಿಸುತ್ತ,

**ಉದ್ಯಚ್ಚಂದ್ರನಿಶಾವಕ್ತ್ರಃ ಪ್ರವಾಲಸ್ತಬಕಾಲಿಭಿಃ ।**
**ಗಾಯನ್ ದ್ರುಮಲತಾಜಾಲೈಸ್ತತ್ರಾಸೀತ್ ಕುಸುಮಾಕರಃ ॥ ೨೧ ॥**

ಉದ್ಯಚ್ಚಂದ್ರನಿಶಾವಕ್ತ್ರಃ=ಉದಯಿಸುತ್ತಿರುವ ಚಂದ್ರನುಳ್ಳ ರಾತ್ರಿಯ ಮುಖದಂತಿರುವ ಪ್ರದೋಷಸಮಯವು(ಸಾಯಂಕಾಲ) ಪ್ರವಾಲಸ್ತಬಕಾಲಿಭಿಃ=ಚಿಗುರೆಲೆಗಳ ಗುಚ್ಛದಲ್ಲಿರುವ ದುಂದುಭಿಗಳಿಂದ ಗಾಯನ್=ಹಾಡುತ್ತಿರುವ ದ್ರುಮಲತಾಜಾಲೈಃ= ಬಳ್ಳಿಗಳ ಸಮೂಹಗಳಿಂದ ಕೂಡಿ ಕುಸುಮಾಕರಃ=ವಸಂತನು ತತ್ರ ಆಸೀತ್=ಅಲ್ಲಿ ಕಾಣಿಸಿಕೊಂಡನು.

**ಅನ್ವೀಯಮಾನೋ ಗಂಧರ್ವೈರ್ಗೀತವಾದೀತ್ರಯಾಧಿಪೈಃ ।**
**ಅದೃಶ್ಯತಾತ್ತಚಾಪೇಷುಃ ಸ್ವಃ ಸ್ತ್ರೀಯೂಥಪತಿಃ ಸ್ಮರಃ ॥ ೨೨ ॥**

ಗೀತವಾದಿತ್ರಯಾಧಿಪೈಃ=ಗಾಯನವಾದ್ಯಗಳಿಂದ ಸಹಿತರಾದ ಗಣನಾಯಕರುಗಳಿಂದ ಅನ್ವೀಯಮಾನಃ=ಅನುಸರಿಸಲ್ಪಟ್ಟವನಾಗಿ ಸ್ವಃ ಸ್ತ್ರೀಯೂಥಪತಿಸ್ಮರಃ=ಸ್ವರ್ಗ ಸ್ತ್ರೀಯರ ತುಟಿಗೆ(ಅಪ್ಸರೆಯರಿಗೆ)ವಡೆಯನಾದ ಕಾಮನು ಆತ್ತಚಾಪೇಷು=ತನ್ನ ಬಿಲ್ಲು ಬಾಣಗಳಾದ ಕಬ್ಬು ಕಮಲಗಳನ್ನು ಸ್ವೀಕರಿಸಿ ಅದೃಶ್ಯತ=ಕಾಣಿಸಿಕೊಂಡನು.

**ವಿಶೇಷ-** ಅನಂಗನಾದ್ದರಿಂದ ಕಾಣಿಸದಿರುವ ಕಾಮನು ಕಾರ್ಯಗೌರವದಿಂದ ಕಾಣಿಸಿಕೊಂಡನು ಎಂದು ಭಾವ.

**ಹುತ್ವಾಗ್ನಿಂ ಸಮುಪಾಸೀನಂ ದದೃಶುಃ ಶಕ್ರಕಿಂಕರಾಃ ।**
**ಮೀಲಿತಾಕ್ಷಂ ದುರಾಧರ್ಷಂ ಮೂರ್ತಿಮಂತಮಿವಾನಲಮ್ ॥ ೨೩ ॥**

ಅಗ್ನಿಂ=ಅಗ್ನಿಯನ್ನು ಹುತ್ವಾ=ಪ್ರಜ್ವಲಗೊಳಿಸಿ ಸಮುಪಾಸೀನಂ=ಹೋಮಾದಿಗಳನ್ನೂ ಮಾಡುತ್ತ ಸಮೀಪದಲ್ಲಿ ಕುಳಿತಿರುವ ಮೀಲಿತಾಕ್ಷಂ=ಕಣ್ಣು ಮುಚ್ಚಿರುವ ದುರಾಧರ್ಷಂ =ಯಾರಿಂದಲೂ ಚಾಂಚಲ್ಯ ಗೊಳಿಸಲಾಗದ ಮೂರ್ತಿಮಂತಂ ಅನಲಮಿವ=ಅಗ್ನಿಯ ದೇಹವನ್ನು ಸ್ವೀಕರಿಸಿ ಕುಳಿತಂತಿರುವ ಋಷಿಯನ್ನು ಶಕ್ರಕಿಂಕರಾಃ=ಇಂದ್ರನ ಸೇವಕರು ದದೃಶುಃ=ನೋಡಿದರು.

**ನನೃತುಸ್ತಸ್ಯ ಪುರತಃ ಸ್ತ್ರಿಯೋಽಥೋ ಗಾಯಕಾ ಜಗುಃ ।**
**ಮೃದಂಗವೀಣಾಪಣವೈರ್ವಾದ್ಯಂ ಚಕ್ರುರ್ಮನೋರಮಮ್ ॥ ೨೪ ॥**

ತಸ್ಯ ಪುರತಃ=ಮಾರ್ಕಂಡೇಯನ ಎದುರಿಗೆ ಸ್ತ್ರಿಯಃ=ಅಪ್ಸರಾಸ್ತ್ರೀಯರು ನನೃತುಃ= ಕುಣಿದರು ಅಥ=ನಂತರ ಗಾಯಕಾಃ=ಗಂಧರ್ವರು ಜಗುಃ=ಗಾಯನ ಮಾಡಿದರು ವಾದಕಾಃ=ಬಾರಿಸುವವರು ವೃದಂಗವೀಣಾಪಣವೈಃ=ವೃದಂಗ, ವೀಣೆ, ಮದ್ದಲೆಗಳಿಂದ ಮನೋರಮಂ=ಸುಂದರವಾದ ವಾದ್ಯಂ ಚಕ್ರುಃ=ಧ್ವನಿಯನ್ನು ಮಾಡಿದರು.

**ಸಂದಧೇಽಸ್ತ್ರಂ ಸ್ವಧನುಷಿ ಕಾಮಃ ಪಂಚಮುಖಂ ತದಾ ।**
**ಮಧುರ್ಮದೋರಜಃಸ್ತೋಭಃ ಇಂದ್ರಭೃತ್ಯಾ ಅಕಂಪಯನ್ ॥ ೨೫ ॥**

ಕಾಮಃ=ಕಾಮನು ತದಾ=ಆ ಕಾಲದಲ್ಲಿ ಸ್ವಧನುಷಿ=ತನ್ನ ಧನುಸ್ಸಿನಲ್ಲಿ ಪಂಚಮುಖಾಸ್ತ್ರಂ=ಪಂಚಮುಖವೆಂಬ ಬಾಣವನ್ನು ಸಂದಧೇ=ಹೂಡಿದನು ಮಧುರ್ಮದೋರಜಸ್ತೋಭಃ=ಮಧು,ಮದ,ರಜ,ಸ್ತೋಭ ಈ ಹೆಸರಿನ ಇಂದ್ರಭೃತ್ಯಾಃ=ಇಂದ್ರಕಿಂಕರರು ವ್ಯಕಂಪಯನ್=ವಿಚಲಿತಗೊಳಿಸಲು ಪ್ರಯತ್ನಿಸಿದರು.

**ವಿಶೇಷ-** ಪಂಚಮುಖ ಎಂದರೆ ಶೋಷಣ, ಮೋಹನ, ಸಂದೀಪನ ತಾಪನ ಮಾದನ ಈ ಐದು ಎಂದು ಹೇಳುವರು. ವಿಶಾಲಮುಖವುಳ್ಳ ಎಂದು ಹಲವರು. ಐದರಲ್ಲಿ ಪ್ರಧಾನವಾದ ಕಮಲವನ್ನು ಎಂದು ಮತ್ತೆ ಕೆಲವರು ಅರ್ಥ ಮಾಡುವರು. (ಅರವಿಂದ, ಅಶೋಕ, ಚೂತ, ನವಮಲ್ಲಿಕಾ ನಿಲೋತ್ಪಲ ಇವು ಐದು ಮನ್ಮಥ ಬಾಣಗಳು ಸಮ್ಮೋಹನ, ಉನ್ಮಾದನ, ಶೋಷಣ, ತಾಪನ ಮತ್ತು ಸ್ತಭನ ಎಂದು ಈ ಬಾಣಗಳ ಹೆಸರು ಎಂದು ತಿಳಿಯಬೇಕು.

**ಕ್ರೀಡಂತ್ಯಾಃ ಪುಂಜಿಕಸ್ಥಲ್ಯಾಃ ಕಂದುಕೈಃ ಸ್ತನಗೌರವಾತ್ ।**
**ಭೃಶಮುದ್ವಿಗ್ನಮಧ್ಯಾಯಾಃ ಕೇಶವಿಭ್ರಂಶಿತಸ್ರಜಃ ॥ ೨೬ ॥**
**ಇತಸ್ತತೋ ಭ್ರಮದ್ ದೃಷ್ಟೇಶ್ಚಲಂತ್ಯಾ ಅನುಕಂದುಕಮ್ ।**
**ವಾಯುರ್ಜಹಾರ ತದ್ವಾಸಃ ಸೂಕ್ಷ್ಮಂ ತ್ರುಟಿತಮೇಖಲಮ್ ॥ ೨೭ ॥**

ಕಂದುಕೈಃ=ಚೆಂಡುಗಳಿಂದ ಕ್ರೀಡಂತ್ಯಾಃ=ಆಟವಾಡುತ್ತಿರುವ ಸ್ತನಗೌರವಾತ್=ಕುಚಗಳ ಭಾರದಿಂದ ಭೃಶಂ=ಬಹಳವಾಗಿ ಉದ್ವಿಗ್ನಮಧ್ಯಾಯಾಃ=ಪೀಡಿತವಾಗಿ ಸಣ್ಣಗಾದ ನಡುವುಳ್ಳ ಕೇಶವಿಭ್ರಂಶಿತಸ್ರಜಃ=ಕೂದಲುಗಳಿಂದ ಉದುರಿದ ಮಾಲೆಯುಳ್ಳ ಇತಸ್ತತಃ=ಅತ್ತ ಇತ್ತ ಭ್ರಮದ್ ದೃಷ್ಟೇಃ=ಚಲಿಸುವ ನೋಟವುಳ್ಳ ಅನುಕಂದುಕಂ ಚಲಂತ್ಯಾಃ=ಚಂಡನ್ನನುಸರಿಸಿ ಸಂಚರಿಸುವ ಪುಂಜಕಸ್ಥಲ್ಲ್ಯಾಃ=ಪುಂಜಕಸ್ಥಲೀ ಎಂಬ ಅಪ್ಸರೆಯ ತ್ರುಟಿತಮೇಖಲಂ=ಕಡಿದುಹೋದ ಕಾಂಚಿಯುಳ್ಳ ಸೂಕ್ಷ್ಮಂ ತದ್ವಾಸಃ=ತೆಳುವಾದ ಆವಳ ವಸ್ತ್ರವನ್ನು ವಾಯುಃ=ಗಾಳಿಯು ಜಹಾರ=ಹಾರಿಸಿತು.

**ವಿಸಸರ್ಜ ತತೋ ಬಾಣಂ ಮತ್ವಾ ತಂ ಸ್ವಜಿತಂ ಸ್ಮರಃ ।**
**ಸರ್ವಂ ತತ್ರಾಭವನ್ಮೋಘಮನೀಶಸ್ಯ ಯಥೋದ್ಯಮಃ ॥ ೨೮ ॥**

ಸ್ಮರಃ=ಮನ್ಮಥನು ತಂ=ಮುನಿಯನ್ನು ಸ್ವಜಿತಂ ಮತ್ವಾ=ತನ್ನಿಂದ ಸೋಲಲ್ಪಟ್ಟನೆಂದು ತಿಳಿದು ತತಃ=ಅಲ್ಲಿಂದ ಬಾಣಂ=ಬಾಣವನ್ನು ವಿಸಸರ್ಜ=ಬಿಟ್ಟನು. ತತ್ರ=ಆ ಮುನಿಯ ವಿಷಯದಲ್ಲಿ ಅನೀಶಸ್ಯ=ಅಸಮರ್ಥನ ಉದ್ಯಮಃ ಯಥಾ=ಪ್ರಯತ್ನದಂತೆ ಸರ್ವಂ=ಎಲ್ಲ ಪ್ರಯತ್ನವೂ ಮೋಘಂ ಅಭವತ್=ವ್ಯರ್ಥವಾಯಿತು.

**ತೇ ಇತ್ಥಮಪಕುರ್ವಂತೋ ಮುನೇಸ್ತತ್ತೇಜಸಾ ಮುನೇ ।**
**ದಹ್ಯಮಾನಾ ನಿವವೃತುಃ ಪ್ರಬೋಧ್ಯಾಹಿಮಿವಾರ್ಭಕಾಃ ॥ ೨೯ ॥**

ಹೇ ಮುನೇ=ಶೌನಕನೇ ತೇ=ಆ ಇಂದ್ರನ ದೂತರು ಇತ್ಥಂ=ಈ ರೀತಿಯಾಗಿ ಅಪಕುರ್ವಂತಃ=ಅಪಕಾರ ಮಾಡುವವರಾಗಿ ಮುನೇಃ=ಮಾರ್ಕಂಡೇಯರ ತತ್ತೇಜಸಾ=ಆ ಪ್ರಸಿದ್ಧವಾದ ತಪಃಪ್ರಭಾವದಿಂದುಂಟಾದ ಕಾಂತಿಯಿಂದ ದಹ್ಯಮಾನಾಃ =ತಾಪಗೊಂಡು ಅರ್ಭಕಾಃ=ಚಿಕ್ಕ ಮಕ್ಕಳು ಅಹಿಂ ಪ್ರಬೋಧ್ಯ ಇವ=ಮಲಗಿದ ಹಾವನ್ನು ಕಲ್ಲಿನಿಂದ ಹೊಡೆದೆಬ್ಬಿಸಿ ಹೆದರಿ ಓಡುವಂತೆ ನಿವವೃತುಃ=ತಿರುಗಿ ಹೋದರು.

**ಇತೀಂದ್ರಾನುಚರೈರ್ಬ್ರಹ್ಮನ್ ಧರ್ಷಿತೋಽಪಿ ಮಹಾಮುನಿಃ ।**
**ಯನ್ನಾಗಾದಹಮೋಭಾವಂ ನತಚ್ಚಿತ್ರಂ ಮಹತ್ಸ್ವಪಿ ॥ ೩೦ ॥**

ಹೇ ಬ್ರಹ್ಮನ್=ಶೌನಕರೇ ಇತಿ=ಈ ರೀತಿಯಾಗಿ ಇಂದ್ರಾನುಚರೈಃ=ಇಂದ್ರನ ಸೇವಕರಿಂದ ಧರ್ಷಿತಃ ಅಪಿ= ವಿಷಯಗಳತ್ತ ಸೆಳೆದರೂ ಸಹ ಮಹಾಮುನಿಃ= ದೊಡ್ಡಜ್ಞಾನಿಯಾದ ಮಾರ್ಕಂಡೇಯನು ಅಹಮಃ=ಅಹಂಕಾರದ ಭಾವಂ=ವಿಕಾರವನ್ನು ನಾಗಾತ್=ಹೊಂದಲಿಲ್ಲ ಇತಿ ಯತ್=ಇದೇನಿದೆಯೋ ತತ್=ಅದು ಮಹತ್ಸ್ವಪಿ ನ ಚಿತ್ರಂ=ದೊಡ್ಡವರಲ್ಲಿ ಆಶ್ಚರ್ಯವೇನಲ್ಲ ಅಂದ ಮೇಲೆ ಮಹಾಮುನಿಯಲ್ಲಿ ಆಶ್ಚರ್ಯವಲ್ಲವೆಂದು ಬೇರೆ ಹೇಳಬೇಕಿಲ್ಲವಷ್ಟೇ.

**ದೃಷ್ಟ್ವಾ ನಿಸ್ತೇಜಸಂ ಕಾಮಂ ಸಗಣಂ ಭಗವಾನ್ ಸ್ವರಾಟ್ ।**
**ಶ್ರುತ್ವಾನುಭಾವಂ ಬ್ರಹ್ಮರ್ಷೇರ್ವಿಸ್ಮಯಂ ಸಮಗಾತ್ಪರಮ್ ॥ ೩೧ ॥**

ಭಗವಾನ್ ಸ್ವರಾಟ್=ಪೂಜ್ಯನಾದ ಇಂದ್ರನು ಸಗಣಂ ಕಾಮಂ=ಪರಿವಾರ ಸಹಿತನಾದ ಕಾಮನನ್ನು ನಿಸ್ತೇಜಸಂ ದೃಷ್ಟ್ವಾ=ಸ್ವರ್ಗಕ್ಕೆ ಮಾರ್ಕಂಡೇಯನನ್ನು ಕರೆತರಲು ಅಸಮರ್ಥನಾದುದನ್ನು ಕಂಡು ಬ್ರಹ್ಮರ್ಷಿಃ=ಬ್ರಹ್ಮಜ್ಞಾನಿಯಾದ ಮಾರ್ಕಂಡೇಯನ ಅನುಭಾವಂ=ಮಹಾತ್ಮ್ಯವನ್ನು ಶ್ರುತ್ವಾ=ತಿರುಗಿಬಂದ ದೂತನ ಮುಖಾಂತರ ಕೇಳಿ ತಿಳಿದು ಪರಂ ವಿಸ್ಮಯಂ=ಬಹಳ ಆಶ್ಚರ್ಯವನ್ನು ಸಮಗಾತ್=ಹೊಂದಿದನು.

**ತಸ್ಯೈವಂ ಯುಂಜತಶ್ಚಿತ್ತಂ ತಪಃಸ್ವಾಧ್ಯಾಯಸಂಯಮೈಃ ।**
**ಅನುಗ್ರಹಾಯಾವಿರಾಸೀನ್ನರನಾರಾಯಣೋ ಹರಿಃ ॥ ೩೨ ॥**

ಏವಂ=ಈ ರೀತಿಯಾಗಿ ತಪಃಸ್ವಾಧ್ಯಾಯಸಂಯಮೈಃ=ತಪಸ್ಸು ಅಧ್ಯಯನ ಇಂದ್ರಿಯ ನಿಗ್ರಹಗಳಿಂದ ಚಿತ್ತಂ=ಮನಸ್ಸನ್ನು ಯುಂಜತಃ=ಶ್ರೀಹರಿಯಲ್ಲಿ ತೊಡಗಿಸಿದ ಮುನಿಗೆ ಅನುಗ್ರಹಾಯ=ಅನುಗ್ರಹಿಸಲು ನರನಾರಾಯಣಃ ಹರಿಃ=ನರನಿಂದ ಕೂಡಿದ ನಾರಾಯಣನೆಂಬ ಶ್ರೀಹರಿಯು ಆವಿರಾಸೀತ್=ಕಾಣಿಸಿಕೊಂಡನು.

**ವಿಶೇಷ-** ನರನಲ್ಲಿ ಆವಿಷ್ಟವಾದ ರೂಪದಿಂದ ನಾರಾಯಣನಿಗೆ ಅಭೇದ ನರನಿಗೆ ಪ್ರತ್ಯೇಕ ಹೆಸರು ಹೇಳಿದ್ದರಿಂದ ಭೇದವನ್ನೂ ಸೂಚಿಸಿರುವರು.

*ರೂಪಗಳನ್ನು ನಿರೂಪಿಸುವರು*

**ತೌ ಶುಕ್ಲಕೃಷ್ಣೌ ನವಕಂಜಲೋಚನೌ**
**ಚತುರ್ಭುಜೌ ರೌರವವಲ್ಕಲಾಂಬರೌ ।**
**ಪವಿತ್ರಪಾಣೀ ಉಪವೀತಕಂ ತ್ರಿವೃತ್**
**ಕಮಂಡಲುಂ ದಂಡಮೃಜುಂ ಚ ವೈಣವಮ್ ॥ ೩೩ ॥**

ತೌ=ಬಂದಿರುವ(ತಕಾರಶ್ಚಾಗತೇ ಚೋರೇ ಎಂದು ವಿಶ್ವಕೋಶವಿದೆ) ತೌ=ನರನಾರಾಯಣರು ಶುಕ್ಲಕೃಷ್ಣೌ=ನರನು ಶುಕ್ಲವರ್ಣನು ನಾರಾಯಣನು ಕೃಷ್ಣವರ್ಣದವನು ನವಕುಂಜಲೋಚನೌ=ಅರಳಿದ ಹೊಸಕಮಲದಂತಿರುವ ಕಣ್ಣುಗಳುಳ್ಳವರು ಚತುರ್ಭುಜೌ=ನಾಲ್ಕು ಕೈಗಳುಳ್ಳವರು ರೌರವವಲ್ಕಲಾಂಬರೌ=ಜಿಂಕೆಯ ಚರ್ಮ ನಾರುಬಟ್ಟೆಗಳೇ ವಸ್ತ್ರವಾಗಿವುಳ್ಳವರು(ರುರು ಕೃಷ್ಣಸಾರಮೃಗ ಅದರ ಸಂಬಂಧ ರೌರವ) (ವಲ್ಕಲ-ನಾರುಬಟ್ಟೆ) ಪವಿತ್ರಪಾಣೀ=ಕೈಯಲ್ಲಿ ಪವಿತ್ರವನ್ನು ಧರಿಸಿದ ತ್ರಿವೃತ್‌ಉಪವೀತಕಂ=ಮೂರು ಎಳೆಯ ಯಜ್ಞೋಪವೀತವನ್ನು ಕಪ್ರತ್ಯಯದಿಂದ ವಿಧಿ ಬದ್ಧರಾಗದಿರುವದರಿಂದ ಅದರ ಅವಶ್ಯಕತೆ ಇಲ್ಲವೆಂದು ಸೂಚಿತವಾಗುವದು) ಕಮಂಡಲುಂ=ಕಮಂಡಲುವನ್ನೂ ವೈಣವಂ=ಬಿದರಿನ ಋಜುಂ=ನೀಟಾದ ದಂಡಂ=ದಂಡವನ್ನು ಧರಿಸಿದ ಎಂದು ಅನ್ವಯ. ಮೂರು ಎಳೆಯ ಜನಿವಾರದಿಂದ ಅವಿವಾಹಿತರೆಂದು ತಿಳಿಯುವುದು.

**ಪದ್ಮಾಕ್ಷಮಾಲಾಮುತ ಜಂತುಮಾರ್ಜನಂ**
**ವೇದಂ ಚ ಸಾಕ್ಷಾತ್ತಪ ಏಕರೂಪಿಣೌ ।**

**ತಪತ್ತಡಿದ್ವರ್ಣವಿಶಂಗರೋಚಿಷಾ**
**ಪ್ರಾಂಶೂ ದಧಾನೌ ವಿಬುಧರ್ಷಭಾರ್ಚಿತೌ** **॥ ೩೪ ॥**

ಪದ್ಮಾಕ್ಷಮಾಲಾಂ=ಪದ್ಮಮಾಲೆಯನ್ನು ನಾರಾಯಣನು, ಅಕ್ಷಮಾಲೆಯನ್ನು ನರನು ಜಂತುಮಾರ್ಜನಂ=(ಚಾಮರ ವಿಶೇಷ)ನೊರಜು, ಸೊಳ್ಳೆಗಳು ಸಾಯದಂತೆ ಅವಗಳನ್ನು ಓಡಿಸಲು ಮೃದುವಾದ ಕೂರ್ಚವನ್ನೂ ವೇದಂ ಚ=ದರ್ಭೆ ಮುಷ್ಟಿಯನ್ನೂ ದಧಾನೌ= ಧರಿಸಿರುವ ವಿಬುಧರ್ಷಭಾರ್ಚಿತೌ=ಬ್ರಹ್ಮಾದಿಗಳಿಂದ ಪೂಜಿತರಾದ ತಪತ್-ತಡಿದ್ವರ್ಣಪಿಶಂಗರೋಚಿಷಾ=ಪ್ರಕಾಶಮಾನವಾದ ಮಿಂಚಿನಂತೆ ವರ್ಣನೀಯವಾದ ಪಿಶಂಗರೋಚಿಷಾ=ಬಂಗಾರಬಣ್ಣದಿಂದ ಸಹಿತರಾದ(ರೋಚಿಷೌ=ಎಂದು ಪಾಠವಿದ್ದರೆ ಕಾಂತಿಯುಳ್ಳ ಎಂದರ್ಥ)ಪ್ರಾಂಶೂ=ಎತ್ತರವಾದ ದೇಹವುಳ್ಳ ತೌ=ನರನಾರಾಯಣರು ಬಂದರು.

**ತೇ ವೈ ಭಗವತೋ ರೂಪೇ ನರನಾರಾಯಣಾವೃಷೀ ।**
**ವಿಕ್ಷ್ಯೋತ್ಥಾಯಾದರೇಣೋಚ್ಚೈರ್ನನಾಮಾಂಗೇನ ದಂಡವತ್** **॥ ೩೫ ॥**

ತೇ ವೈ=ಹಿಂದೆ ಹೇಳಿದ ಭಗವತಃ=ಪರಮಾತ್ಮನ ರೂಪೇ=ಅವಿಷ್ಟವಾದ ಮತ್ತು ಸಾಕ್ಷಾತ್‌ರೂಪಗಳಾದ ನರನಾರಾಯಣೌ ಋಷೀ=ಜ್ಞಾನಿಗಳಾದ ನರ ನಾರಾಯಣರನ್ನು ವೀಕ್ಷ್ಯ=ನೋಡಿ ಆದರೇಣ=ಗೌರವದಿಂದ ಉತ್ಥಾಯ=ಎದ್ದು ಅಂಗೇನ=ಉರ ಆದಿ ಅಷ್ಟಾಂಗ ಸಹಿತವಾಗಿ ದಂಡವತ್=ದೀರ್ಘದಂಡಾಕಾರವಾಗಿ ಉಚ್ಚೈಃ=ಗಟ್ಟಿಯಾಗಿ ಸ್ತುತಿಸುತ್ತ ನನಾಮ=ನಮಸ್ಕರಿಸಿದನು.

**ಏತತ್ಸಂದರ್ಶನಾನಂದನಿಯತಾತ್ಮೇಂದ್ರಿಯಾಶಯಃ ।**
**ಹೃಷ್ಟರೋಮಾಽಶ್ರುಪೂರ್ಣಾಕ್ಷೋ ನ ಸೇಹೇ ತಾವುದೀಕ್ಷಿತುಮ್** **॥ ೩೬ ॥**

ಏತತ್ಸಂದರ್ಶನಾನಂದನಿಯತಾತ್ಮೇಂದ್ರಿಯಾಶಯಃ=ಇವರನ್ನು ನೋಡಿದ್ದ-ರಿಂದುಂಟಾದ ಆನಂದದಿಂದ ನಿಗ್ರಹಿಸಲ್ಪಟ್ಟ ಮನಸ್ಸು ಇಂದ್ರಿಯಗಳು ಹೃದಯಗಳುಳ್ಳ ಹೃಷ್ಟರೋಮಾ=ಸಂತೋಷದಿಂದ ರೋಮಾಂಚಿತನಾದ ಅಶ್ರುಪೂರ್ಣಾಕ್ಷಃ= ಆನಂದಭಾಷ್ಪದಿಂದ ತುಂಬಿದ ಕಣ್ಣುಗಳುಳ್ಳವನಾಗಿ ತೌ=ಅವರನ್ನು ಉದೀಕ್ಷಿತುಂ ನ ಸೇಹೇ=ನೋಡಲು ಸಮರ್ಥನಾಗಲಿಲ್ಲ.

**ಉತ್ಥಾಯ ಪ್ರಾಂಜಲಿಃ ಪ್ರಹ್ವಃ(ಪೂರ್ಣಂ)ಔತ್ಸುಕ್ಯಾದಾಶ್ಲಿಷನ್ನಿವ ।**
**ನಮೋ ನಮ ಇತಿ ಶನೈಃ ಬಭಾಷೇ ಗದ್ಗದಾಕ್ಷರಮ್** **॥ ೩೭ ॥**

ಉತ್ಥಾಯ=ಎದ್ದು ಪ್ರಾಂಜಲಿಃ=ಕೈಮುಗಿದು ಪ್ರಹ್ವಃ=ನಮ್ರನಾಗಿ ಔತ್ಸುಕಾತ್=ಉತ್ಸುಕತೆಯಿಂದ ಆಶ್ಲಿಷನ್ ಇವ=ಆಲಿಂಗಿಸುವವನಂತೆ ಈಶಾನೌ=ಭಗವದ್ರೂಪಗಳನ್ನು ಕುರಿತು ನಮೋ ನಮಃ ಇತಿ=ನಮೋ ನಮ ಎಂದು ಗದ್ಗದಾಕ್ಷರಂ=ಗದ್ಗದಾಕ್ಷರಗಳಿಂದ ಕೂಡಿದ ಮಾತುಗಳನ್ನು ಶನೈಃ=ಮೆಲ್ಲಗೆ ಬಭಾಷೇ=ಆಡಿದನು.

**ತಯೋರಾಸನಮಾಧಾಯ ಪಾದಯೋರವನಿಜ್ಯ ಚ ।**
**ಅರ್ಹಣೇನಾನುಲೇಪೇನ ಧೂಪಮಾಲ್ಯೈರಪೂಜಯತ್ ॥ ೩೮ ॥**

ತಯೋಃ=ಅವರಿಗೆ ಆಸನಂ ಆಧಾಯ=ಆಸನವನ್ನಿತ್ತು ಪಾದಯೋಃ ಅವನಿಜ್ಯ=ಪಾದಗಳನ್ನು ತೊಳೆದು ಅರ್ಹಣೇನ=ವಸ್ತ್ರಗಳಿಂದ ಅನುಲೇಪೇನ=ಗಂಧದಿಂದ ಧೂಪಮಾಲ್ಯೈಃ=ಧೂಪ-ಮಾಲೆಗಳಿಂದ ಅಪೂಜಯತ್=ಪೂಜಿಸಿದನು.

**ಸುಖಮಾಸನಮಾಸೀನೌ ಪ್ರಸಾದಾಭಿಮುಖೌ ಮುನಿಃ ।**
**ಪುನರಾನಮ್ಯ ಪಾದಾಭ್ಯಾಂ ಗರಿಷ್ಠಾವಿದಮಬ್ರವೀತ್ ॥ ೩೯ ॥**

ಸುಖಂ=ಸುಖಸಾಧನವಾದ ಆಸನಂ=ತಾನು ಕೊಟ್ಟ ಆಸನದಲ್ಲಿ ಆಸೀನಂ=ಕುಳಿತಿರುವ ಅಥವಾ ಸುಖವಾಗುವಂತೆ ಆಸನದಲ್ಲಿ ಕುಳಿತಿರುವ(ಸುಖಮಾಸೀನಮಿತಿ ಯಥಾ ಎಂದು ಸುಧಾ, ಋಗ್ಭಾಷ್ಯಟೀಕಾಗಳಲ್ಲಿ ಸುಖಸಾಧನದಲ್ಲಿ ಸುಖ ಶಬ್ದ ಪ್ರಯೋಗಕ್ಕೆ ದೃಷ್ಟಾಂತ ಕೊಟ್ಟಿರುವರು.)ಪ್ರಸಾದಾಭಿಮುಖೌ=ಅನುಗ್ರಹ ಮಾಡಲು ಸಿದ್ಧರಾದ ನರನಾರಾಯಣರ ಪಾದಾಭ್ಯಾಂ=ಪಾದಗಳಿಗೆ ಪುನಃ ಆನಮ್ಯ=ಮತ್ತೆ ನಮಸ್ಕರಿಸಿ ಮುನಿಃ=ಮಾರ್ಕಂಡೇಯನು ಗರಿಷ್ಠೌ=ಜಗದ್ಗುರುಗಳಾದ ಬ್ರಹ್ಮಾದಿಗಳಿಗೆ ಗುರುವಾದವರವನ್ನು ಕುರಿತು ಇದಂ ಅಬ್ರವೀತ್=ಮುಂದೆ ಹೇಳುವಂತೆ ಮಾತನಾಡಿದನು. ಮಾತಿನ ವ್ಯತ್ಯಾಸವನ್ನು ಕ್ಷಮಿಸಲು ಮತ್ತೊಮ್ಮೆ ನಮಸ್ಕರಿಸಿ ಮಾತಿಗೆ ಮೊದಲಿಸಿದನು.

ಮಾರ್ಕಂಡೇಯ ಉವಾಚ -

**ಕಿಂ ವರ್ಣಯೇ ತವ ವಿಭೋ ಯದುದೀರತಾಸುಃ**
**ಸಂಸ್ಪಂದತೇ ತಮನು ವಾಙ್ಮನಇಂದ್ರಿಯಾಣಿ ।**
**ಸ್ಪಂದಂತಿ ವೈ ತನುಭೃತಾಮಜಶರ್ವಯೋಶ್ಚ**
**ಸ್ವಸ್ಯಾಪ್ಯಥಾಪಿ ಭಜತಾಮಸಿ ಭಾವಬದ್ಧಃ ॥ ೪೦ ॥**

ಯತ್=ಯಾವ ಕಾರಣ ಉದೀರತಾಸುಃ=ಉತ್ಕೃಷ್ಟನೆಂದು ಹೇಳಲ್ಪಟ್ಟ ಮುಖ್ಯಪ್ರಾಣನೂ ಸಹ ಯದುದೀರಿತಾ=ಯಾವ ನಿನ್ನಿಂದ ಪ್ರೇರಿತನಾಗಿ ಸಂಸ್ಪಂದತೇ=ಸ್ವಲ್ಪ ಚಲಿಸುವನು (ಭೀಷಾಸ್ಮಾದ್ವಾತಃ ಪವತೇ ಎಂದು ಶ್ರುತಿ ಇದೆ.) ತಮನು=ಅಂತಹ ಪ್ರಾಣನನ್ನನುಸರಿಸಿ ತನುಭೃತಾಂ=ಜನರ ವಾಙ್ಮನಇಂದ್ರಿಯಾಣಿ=ಮಾತುಗಳು ಮನಸ್ಸು ಇಂದ್ರಿಯಗಳು ಸ್ಪಂದಂತಿ=ಚೇಷ್ಟೆ ಮಾಡುವವು. ಅಥಾಪಿ=ಹೀಗೆ ಸ್ವತಂತ್ರನಾಗಿದ್ದರೂ ಭಜತಾಂ= ಸೇವಿಸುವವರ ಭಾವಬದ್ಧಃ ಅಸಿ=ಭಕ್ತಿಯಿಂದ ಬದ್ಧನಾಗಿರುವಿ ಹೇ ವಿಭೋ= ಸ್ವಾಮಿಯೇ ತವ=ನಿನ್ನ ಮಹಿಮೆಯನ್ನು ಕಿಂ ವರ್ಣಯೇ=ಏನು ವರ್ಣಿಸಲಿ ಅನಂತವಾಗಿದೆ. ವರ್ಣಿಸಲಾರೆನೆಂದರ್ಥ.

**ವಿಶೇಷ-** ಅಥವಾ ಸ್ಪಂದಂತೇ ಇತಿ ಸ್ಪಂದಾಃ ತದ್ವದಾಚರಂತೀತಿ ಸ್ಪಂದಂತಿ । ಇದು ಸತ್ಯಧರ್ಮರ ಪಾಠ. 'ಅಜಶರ್ವಯೋಶ್ಚ' ನಿನ್ನ ಪ್ರೇರಣೆಯಿಂದ ಬ್ರಹ್ಮರುದ್ರರ ಇಂದ್ರಿಯ ಮನಸ್ಸು ವಾಕ್‌ಗಳು ವ್ಯಾಪಾರ ಮಾಡುವವು. ಸ್ವಸ್ಯಾಪಿ=ನಿನ್ನ ಇಂದ್ರಿಯಾದಿಗಳೂ ಸಹ ನಿನ್ನ ಪ್ರೇರಣೆಯಿಂದಲೇ ವ್ಯಾಪಾರ ಮಾಡುವವು. ನಿನಗೆ ಮತ್ತೊಬ್ಬ ಪ್ರೇರಕರಿಲ್ಲ.

ನಿತ್ಯಸಾಪೇಕ್ಷವಾದ್ದರಿಂದ 'ದೇವದತ್ತಸ್ಯ ಗುರುಕುಲಂ' ಎಂಬಂತೆ ಭಜತಾಂ ಭಾವಬದ್ಧಃ ಎಂದು ಸಮಾಸವಾಗುವುದು. ಮನಶ್ಚ ಇಂದ್ರಿಯಾಣಿ ಚ ಮನ ಇಂದ್ರಿಯಾಣಿ ವಾಕ್ ಚ ಮನಇಂದ್ರಿಯಾಣಿ ಚ ಎಂದು ವಿಗ್ರಹ. ಆದ್ದರಿಂದ 'ಅಚತುರ' ಮುಂತಾದ ಸೂತ್ರದಲ್ಲಿ ಹೇಳಿದ ಅಚ ಪ್ರಸಕ್ತಿ ಇಲ್ಲ. ವಾಯುವು ಶ್ರೀಹರಿಯ ಅಧೀನ ಎಂದು ಹೇಳಿದ್ದರೂ ಪದವಿ ಪ್ರಯುಕ್ತ ಕಿಂಚಿತ್ ಅಧಿಕ್ಯವಿದ್ದುದರಿಂದ ಬ್ರಹ್ಮನು ಸೃಷ್ಟಿಕರ್ತನೆಂದು ಶಿವನು ಸಂಹಾರಕರ್ತನೆಂಬ ಲೋಕಪ್ರಚಾರವೆಂಬ ಅಪಪ್ರಚಾರದಿಂದ ಬ್ರಹ್ಮ-ರುದ್ರಾದಿಗಳು ಶ್ರೀ ಹರಿಗೆ ಸಮಾನರು ಎಂಬ ಶಂಕೆಯನ್ನು ಪರಿಹರಿಸಲು ಮತ್ತೆ 'ಅಜಶರ್ವಯೋಃ'ಎಂದಿರುವರು.

*ಭಕ್ತಿವಶತೆಯನ್ನೇ ವಿವರಿಸುವರು -*

**ಮೂರ್ತೀ ಇಮೇ ಭಗವತೋ ಭಗವಂಸ್ತ್ರಿಲೋಕ್ಯಾಃ**
**ಕ್ಷೇಮಾಯ ತಾಪವಿರಮಾಯ ಚ ಮೃತ್ಯುಜಿತ್ಯೈ ।**
**ನಾನಾ ಬಿಭರ್ಷ್ಯನುಪಮಾನ್ಯತನೂರ್ಯಥೇದಮ್ ।**
**ಸೃಷ್ಟ್ವಾ ಪುನರ್ಗ್ರಸಸಿ ಸರ್ವಮಿವೋರ್ಣನಾಭಿಃ** ॥ ೪೧ ॥

ಹೇ ಭಗವನ್=ಶ್ರೀಹರಿಯೇ(ಅವಿಷ್ಟರೂಪದಿಂದ ಐಕ್ಯವನ್ನು ಇಟ್ಟುಕೊಂಡು ಏಕವಚನ ಪ್ರಯೋಗ)ಇಮೇ=ನನ್ನ ಪ್ರತ್ಯಕ್ಷ ವಿಷಯಗಳಾದ ಮೂರ್ತೀ= ನರನಾರಾಯಣರೂಪಗಳು ತ್ರಿಲೋಕ್ಯಾಃ=ಮೂರು ಲೋಕಗಳ ಕ್ಷೇಮಾಯ= ಪ್ರಾಪ್ತರಕ್ಷಣೆಗಾಗಿ ತಾಪವಿರಮಾಯ=ವೈರಿಗಳಿಂದ ಬಂದ ಸಂತಾಪವನ್ನು ಕೊನೆಗಾಣಿಸಲು ಚ=ಮತ್ತು ಮೃತ್ಯುಜಿತ್ಯೈ=ಸಂಸಾರವನ್ನು ಗೆಲ್ಲಲು ಭವತಃ=ಕಾರಣವಾಗುತ್ತವೆ. ಯಥಾ= ಕಾರ್ಯಾನುಗುಣವಾಗಿ ಅಸದೃಶಗಳಾದ ಅನ್ಯತನೂಃ=ಈರೂಪಗಳಿಂದ ಭಿನ್ನವಾದ ಶರೀರಗಳನ್ನು (ರೂಪಗಳನ್ನು) ನಾನಾ=ಅನೇಕ ರೀತಿಯಾಗಿ ಬಿಭರ್ಷಿ=ಧರಿಸುವಿ ಊರ್ಣನಾಭಃ ಇವ=ಜೇಡರ ಹುಳುವಿನಂತೆ ಇದಂ=ಈ ಜಗತ್ತನ್ನು ಸೃಷ್ಟ್ವಾ=ಸೃಷ್ಟಿಸಿ ಪುನಃ=ಮತ್ತೆ ಗ್ರಸಸಿ=ಸಂಹರಿಸುವಿ. ಹಾಗೆಯೇ ಈ ರೂಪಗಳೂ ಎಂದು ಭಾವ.

**ತಸ್ಯಾವಿತುಃ ಸ್ಥಿರಚರೇಶಿತುರಂಘ್ರಿಮೂಲಮ್**
**ಯತ್‌ಸ್ಥಂ ನ ಕರ್ಮ ಗುಣಕಾಲರಜಃ ಸ್ಪೃಶಂತಿ ।**
**ಯದ್ವೈ ಸ್ತುವಂತಿ ನಿನಮಂತಿ ಯಜಂತ್ಯಭೀಕ್ಷ್ಣಮ್**
**ಧ್ಯಾಯಂತಿ ವೇದಹೃದಯಾ ಮುನಯಸ್ತದಾಪ್ತ್ಯೈ** **॥ ೪೨ ॥**

ಯತ್ಸ್ಥಂ=ಯಾವ ಪಾದ ಮೂಲದಲ್ಲಿರುವ ಪುರುಷನನ್ನು ಕರ್ಮ=ದುಷ್ಟಕರ್ಮಗಳು ಗುಣಕಾಲರಜಃ=ಸತ್ವಾದಿಗುಣಗಳು,ಜನನ ಮರಣಕಾರಣ ಕಾಲವೂ,ಋತು ಸಂಬಂಧಿ ಯಾದ ಶುಕ್ಲಶೋಣಿತಗಳು ನ ಸ್ಪೃಶಂತಿ=ದುಃಖದಾಯಕಗಳಾಗುವುದಿಲ್ಲ. ವೇದಹೃದಯಾಃ ಮುನಯಃ=ವೇದತಾತ್ಪರ್ಯಜ್ಞರಾದ ಬ್ರಹ್ಮಾದಿಗಳು ಸ್ಥಿರಚರೇಶಿತುಃ= ಸ್ಥಾವರ ಜಂಗಮಾತ್ಮಕ ಜಗತ್ತಿಗೆ ಒಡೆಯನಾದ ತಸ್ಯ=ಅಂಥ ಅವಿತುಃ=ರಕ್ಷಕನಾದ ಭಗವಂತನನ್ನು ತದಾಪ್ತ್ಯೈ=ಹೊಂದಲು ಯತ್=ಯಾವುದನ್ನು ಸ್ತುವಂತಿ=ಸ್ತುತಿಸುವರು ನಿನಮಂತಿ=ಬಹಳವಾಗಿ ನಮಿಸುವರೋ ಅಭೀಕ್ಷ್ಣಂ=ಬಹಳವಾಗಿ ಧ್ಯಾಯಂತಿ= ಧ್ಯಾನಿಸುವರು ಯಜಂತಿ=ಪೂಜಿಸುವರು ಅಂತಹ ಅಂಘ್ರಿಮೂಲಂ=ಪಾದಗಳನ್ನು ಭಜಾಮಿ=ಭಜಿಸುವೆನು.

**ನಾನ್ಯತ್ ತವಾಂಘ್ರ್ಯುಪನಯಾದಪವರ್ಗಮೂರ್ತೇ**
**ಕ್ಷೇಮಂ ಜನಸ್ಯ ಪರಿತೋಽಭಯ ಈಶವಿದ್ಮಃ**
**ಬ್ರಹ್ಮಾಬಿಭೇತ್ಯಲಮತೋ ದ್ವಿಪರಾರ್ಧದಿಷ್ಣ್ಯಃ**
**ಕಾಲಸ್ಯ ತೇ ಕಿಮುತ ತತ್ಕೃತಭೌತಿಕಾನಾಮ್** **॥ ೪೩ ॥**

ಹೇ ಅಪವರ್ಗ=ಪುರಾಷಾರ್ಥಸ್ವರೂಪನೇ ದ್ವಿಪರಾರ್ಧಧಿಷ್ಣ್ಯಃ=ಎರಡು ಪರಾರ್ಧಪರಿಮಿತವಾದ ಪದವಿಯುಳ್ಳ ಬ್ರಹ್ಮಾ=ಬ್ರಹ್ಮನು ಕಾಲಸ್ಯ=ಕಾಲಶಬ್ದವಾಚ್ಯನಾದ ತೇ=ನಿನ್ನ ದೆಶೆಯಿಂದ ಅಲಂ ಬಿಭೇತಿ=ಅತ್ಯಂತ ಭಯಪಡುವನು ತತ್ಕೃತಭೌತಿಕಾನಾಂ ಕಿಮುತ=ಅವನಿಂದ ನಿರ್ಮಿತವಾದ ಭೌತಿಕ ಶರೀರವುಳ್ಳವರು ಭಯಪಡುವರು ಎಂದು ಬೇರೆ ಏನು ಹೇಳುವುದಿದೆ ? ಯಃ=ಯಾವ ತ್ವಂ=ನೀನು ಪರಿತಃ=ಸರ್ವರಿಂದ ಅಭಯಂ=ಭಯರಹಿತನು ಅಂತಹ ತವ=ನಿನ್ನ ಅಂಘ್ರ್ಯುಪನಯಾತ್=ಪಾದಗಳಿಗೆ ಶರಣಾಗುವದು ಬಿಟ್ಟರೆ ಜನಸ್ಯ=ಜನರಿಗೆ ಕ್ಷೇಮಂ=ಕ್ಷೇಮಕಾರಣವಾದ ಅನ್ಯತ್= ಬೇರೆಯದನ್ನು ನ ವಿದ್ಮಃ=ತಿಳಿಯಲಾರೆವು

ಅಥವಾ 'ಪರಿತೋಽಭಯೇ ಈಪ್ಸಿತೇ' ಎಲ್ಲರಿಂದ ಅಭಯ ಇಷ್ಟವಾಗಿದ್ದರೆ ಅದಕ್ಕೆ ಬೇರೆ ಉಪಾಯವಿಲ್ಲ ಎಂದರ್ಥ. ಪರಿತೋಭಯ ಎಂಬ ಪಾಠವಿದ್ದಾಗ ಎಲ್ಲರಿಂದಲೂ ಭಯವುಳ್ಳ ಜನಸ್ಯ ಜನರಿಗೆ ಎಂದು ಅನ್ವಯಿಸಬೇಕು.

**ತದ್ವೈ ಭಜಾಮ್ಯೃತಧಿಯಸ್ತವಪಾದಮೂಲಂ**
**ಹಿತ್ವೇತದಾತ್ಮಛಿದಮಾತ್ಮಗುರೋಃ ಪರಸ್ಯ ।**
**ದೇಹಾದ್ಯಪಾರ್ಥಮಸದಿತ್ಯನಭಿಜ್ಞಮಾತ್ರಂ**
**ವಿಂದೇಯ ತೇ ತರ್ಹಿ ಸರ್ವಮನೀಷಿತಾರ್ಥಮ್ ॥ ೪೪ ॥**

ತತ್ ವೈ=ಹಿಂದೆ ವರ್ಣಿಸಿದ ಋತಧಿಯಃ=ಶಾಶ್ವತವಾಗಿ ಏಕಪ್ರಕಾರ ಜ್ಞಾನವುಳ್ಳ ಆತ್ಮಗುರೋಃ=ಜೀವರಿಗೆ ಗುರುವಾದ ಅಥವಾ ಬ್ರಹ್ಮದೇವರಿಗೂ ಗುರುವಾದ ಪರಸ್ಯ= ಸರ್ವೋತ್ತಮನಾದ ತವ=ನಿನ್ನ ಪಾದಮೂಲಂ=ಪಾದಮೂಲವನ್ನು ಆತ್ಮಚ್ಛಿದಂ=ತನ್ನ ನಾಶಕ್ಕೆ ಕಾರಣವಾದ ಆದ್ದರಿಂದಲೇ ದೇಹಾದ್ಯಪಾರ್ಥಂ=ದೇಹ ಮುಂತಾದ ಪುರುಷಾರ್ಥರೂಪ ಪ್ರಯೋಜನವಿಲ್ಲದ ಅಸತ್=ಅಮಂಗಲವಾದ ಅನಭಿಜ್ಞಮಾತ್ರಂ=ಕೇವಲ ಅಜ್ಞಾನ ನಿರ್ಮಿತವಾದದ್ದು ಇತಿ=ಎಂದು ಏತತ್= ದೇಹಾದ್ಯಭಿಮಾನವನ್ನು ಹಿತ್ವಾ=ಬಿಟ್ಟು ಯದಿ=ಯಾವಾಗ ಭಜಾಮಿ=ಭಜಿಸುವೆನೋ ತರ್ಹಿ=ಆಗ ಸರ್ವಮನೀಷಿತಾರ್ಥಂ=ಎಲ್ಲ ಅಭೀಷ್ಟ ಪ್ರಯೋಜನಗಳನ್ನು ವಿಂದೇಯ=ಹೊಂದುವೆನು. ಇದರಿಂದ ದೇಹದಲ್ಲಿರುವ ಅಹಂಭಾವ ಸಂಸಾರಕ್ಕೆ ಕಾರಣ. ಅದನ್ನು ತೊರೆದರೆ ಮುಕ್ತಿ ಎಂದು ಹೇಳಿದಂತಾಯಿತು.

**ಸತ್ವಂ ರಜಸ್ತಮ ಇತೀಶ ತವಾತ್ಮಬಂಧೋ**
**ಮಾಯಾಮಯಾಃ ಸ್ಥಿತಿಲಯೋದ್ಭವಹೇತವೋಽಸ್ಯ ।**

**ಲೀಲಾಧೃತಾ ಯದಪಿ ಸತ್ವಮಯಃ ಪ್ರಶಾಂತ್ಯೈ**
**ನಾನ್ಯೇ ನೃಣಾಂ ವ್ಯಸನಮೋಹಭಿಯಶ್ಚ ಯಾಭ್ಯಾಮ್ ॥ ೪೫ ॥**

ಹೇ ಈಶ=ಸ್ವಾಮಿಯೇ ಆತ್ಮಬಂಧೋ=ಅನಿಮಿತ್ತೋಪಕಾರಕನೇ(ಸ್ವಾಮಿಯಾಗಿದ್ದರೂ ನೀನಾಗಿಯೇ ಯಾವ ಫಲವೂ ಇಲ್ಲದೇ ಬಂಧು ಆದವನೇ) ಯದಪಿ=ಯದ್ಯಪಿ ತವ=ನಿನ್ನ ಮಾಯಾಮಯಾಃ=ಇಚ್ಛಾಪ್ರಧಾನಕಗಳಾದ ಅಸ್ಯ=ಜಗತ್ತಿನ ಸ್ಥಿತಿಲಯೋದಯ-ಹೇತವಃ=ರಕ್ಷಣ ನಾಶ ಉತ್ಪತ್ತಿಗಳಿಗೆ ಕಾರಣಗಳಾದ ಸತ್ವಂ=ಸತ್ವವು ರಜಃ=ರಜಸ್ಸು ತಮಃ ಇತಿ=ತಮಸ್ಸು ಈ ಗುಣಗಳು ಲೀಲಾಧೃತಾಃ=ಜಗನ್ನಿರ್ಮಾಣರೂಪ ಕ್ರೀಡೆಗಾಗಿ ಸ್ವೀಕೃತವಾಗಿವೆ. ತಥಾಪಿ=ಆದರೂ ಸತ್ವಮಯಃ=ಸತ್ವಗುಣವು ಪ್ರಶಾಂತ್ಯೈ=ಮುಕ್ತಿಗೆ ಕಾರಣವಾಗುವುದು. ಯಾಭ್ಯಾಂ=ಯಾವ ರಜೋಗುಣ ತಮೋಗುಣಗಳಿಂದ ವ್ಯಸನಮೋಹಭಿಯಃ=ಚಟ, ಮೂರ್ಛ್ಛ, ಮಿಥ್ಯಾಜ್ಞಾನ, ಭಯಗಳು ಭವಂತಿ= ಆಗುವವೋ ಅನ್ಯೇ=ಬೇರೆ ರಜೋಗುಣ ತಮೋಗುಣಗಳು ನೃಣಾಂ=ಜನರಿಗೆ ನ ಪ್ರಶಾಂತ್ಯೈ=ಮೋಕ್ಷಕಾರಣಗಳಲ್ಲ.

**ವಿಶೇಷ-** ಯದ್ಯಪಿ 'ಉದಯಸ್ಥಿತಿಲಯಹೇತುಃ' ಎನ್ನಬೇಕಿತ್ತು ಆದರೂ ಸ್ಥಿತಿಯನ್ನು ಮೊದಲು ಹೇಳಿದ್ದು ಹರಹಿರಣ್ಯಗರ್ಭರು ಲಯ ಉದಯ ಕಾರಣವೆಂದು ಒಪ್ಪುವವರೂ ಸಹ ಸ್ಥಿತಿಕಾರಣನು ಶ್ರೀಹರಿ ಎಂದು ಅಂಗೀಕರಿಸುವರು ಎಂಬ ವಸ್ತುಸ್ಥಿತಿಯನ್ನು ತಿಳಿಸಲು, ಲಯೋದಯಗಳೂ ಭಗವದಧೀನವೆಂದು ಸಾಧಿಸದಂತಾಯಿತು. ಹೇಗೆ ಹೇಳಿದರೂ ತಪ್ಪಿಲ್ಲ. ಅಥವಾ ಸೃಷ್ಟಿ ಸ್ಥಿತಿಗಳು ಚಕ್ರಾಕಾರವಾಗಿ ನಡೆಯುತ್ತಲೇ ಇರುತ್ತವೆ ಎಂದು ತಿಳಿಸಲು ಹೀಗೆ ಹೇಳಿದ್ದು ಎಂದು ತಿಳಿಯಬೇಕು.

*ಸತ್ವಗುಣವು ಮೋಕ್ಷಸಾಧನವೆಂದು ಹೇಳಿದರಷ್ಟೇ. ಆ ಸತ್ವಗುಣವನ್ನು ಸ್ತುತಿಸುತ್ತ ಉಪಸಂಹರಿಸುವರು.*

**ತಸ್ಮಾತ್ತವೇಹ ಭಗವನ್ನಥ ತಾವಕಾನಾಂ**
**ಶುಕ್ಲಾಂ ತನುಂ ಸ್ವದಯಿತಾಂ ಕುಶಲಾ ಭಜಂತಿ ।**
**ಯತ್ಸಾತ್ವತಾಃ ಪುರುಷರೂಪಮುಶಂತಿ ಸತ್ವಂ**
**ಲೋಕೋ ಯತೋಽಭಯಮುತಾತ್ಮಸುಖಂ ಚ ನಾನ್ಯತ್ ॥ ೪೬ ॥**

ತಸ್ಮಾತ್=ಸತ್ವಗುಣವೇ ಮೋಕ್ಷಸಾಧನವಾದುದರಿಂದ ಇಹ=ಅಧಿಕಾರಿವರ್ಗದಲ್ಲಿ ಕುಶಲಾಃ=ಬುದ್ಧಿವಂತರು ಅಥ=ಮಂಗಳದಾಯಕವಾದ ತಾವಕಾನಾಂ=ನಿನ್ನ ಸಂಬಂಧಿಯಾದ ಸ್ವದಯಿತಾಂ=ತಮಗೆ ಪ್ರಿಯವಾದ ಅಥವಾ ಸ್ವಾಭಾವಿಕಪ್ರಿಯವಾದ

ಶುಕ್ಲಾಂ=ಶುದ್ಧವಾದ ತವ=ನಿನ್ನ ತನುಂ=ರೂಪವನ್ನು ಭಜಂತಿ=ಸೇವಿಸುವರು ಯತ್=ಯಾವ ಕಾರಣ ಸಾತ್ವತಾಃ=ಸಾಧುಗುಣಗಳಿಂದ ಕೂಡಿದವರು ಪುರುಷರೂಪಂ= ಪುರುಷಶಬ್ದವಾಚ್ಯನಾದ ಭಗವಂತನನ್ನು ಉಶಂತಿ=ಇಚ್ಛಿಸುವರು ಯತಃ=ಯಾವಕಾರಣ ಪುರುಷರೂಪದಿಂದ ಲೋಕಃ=ಲೋಕವು ಅಭಯಂ=ಭಯರಾಹಿತ್ಯವನ್ನು ಉತ=ಮತ್ತು ಆತ್ಮಸುಖಂ=ಸ್ವರೂಪಸುಖವನ್ನು ಹೊಂದುವುದು. ನ ಅನ್ಯತ್=ರಜೋಗುಣ ತಮೋಗುಣಗಳು ಸ್ವರೂಪ ಸುಖಕಾರಣವಾಗಿಲ್ಲ.

**ವಿಶೇಷ-** ಅಥತಾವಕಾನಾಂ ಎಂಬುದು ಸಮಸ್ತಪದ. ಅನ್ನಂ ಥಂ ಎಂದಿರುವದರಿಂದ ನಿರನ್ನರಾದ ನಿನ್ನವರು ಎಂದು ಅರ್ಥಮಾಡಬಹುದು. ಸಾತ್ವತಾಃ=ಪಂಚರಾತ್ರ ತಿಳಿದವರು ಎಂದೂ ಅರ್ಥಮಾಡಬಹುದು.

**ತಸ್ಮೈನಮೋ ಭಗವತೇ ಪುರುಷಾಯ ಭೂಮ್ನೇ**
**ವಿಶ್ವಾಯ ವಿಶ್ವಗುರವೇ ಪರದೇವತಾಯೈ ।**
**ನಾರಾಯಣಾಯ ಋಷಯೇ ಚ ನರೋತ್ತಮಾಯ**
**ಹಂಸಾಯ ಸಂಯತಗಿರೇ ನಿಗಮೇಶ್ವರಾಯ** **॥ ೪೭ ॥**

ಭೂಮ್ನೇ=ಪೂರ್ಣನಾದ ವಿಶ್ವಗುರವೇ=ಜಗದ್ಗುರುವಾದ ಅಥವಾ ವಾಯುದೇವರಿಗೆ ಗುರುವಾದ ಪರದೇವತಾಯೈ=ಸರ್ವದೇವತೋತ್ತಮನಾದ ವಿಶ್ವಾಯ=ವಿಶ್ವನಾಮಕನಾದ ನರೋತ್ತಮಾಯ=ಜೀವೋತ್ತಮನಾದ ಋಷಯೇ=ಜ್ಞಾನಿಯಾದ ಹಂಸಾಯ= ಸಮಸ್ತದೋಷ ರಹಿತನಾದ ಸಾರರೂಪನಾದ ಸಂಯತಗಿರೇ=ಮಿತಭಾಷಿಯಾದ (ಸ್ವಾಧೀನನಾದ ಮುಖ್ಯಪ್ರಾಣನುಳ್ಳ) ಭಗವತೇ=ಐಶ್ವರ್ಯಾದಿಗುಣಸಂಪನ್ನನಾದ ನಾರಾಯಣಾಯ=ನಾರಾಯಣನಿಗೆ ನಮಃ=ನಮಸ್ಕಾರವು.

*'ಪರಾಂಚಿಖಾನಿ ವ್ಯತೃಣಾತ್ ಸ್ವಯಂಭೂಸ್ತಸ್ಮಾತ್ ಪರಾಕ್ ಪಶ್ಯತಿ ನಾಂತರಾತ್ಮನ್। ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷತ್ ಆವೃತ್ತಚಕ್ಷುರಮೃತತ್ವಮಿಚ್ಛನ್'॥ ಎಂದು ಕಠಶ್ರುತಿಯಲ್ಲಿ ಹೇಳಿದ ಪ್ರಕಾರ ನಮ್ಮ ಇಂದ್ರಿಯಗಳು ಬಹಿರ್ಮುಖವಾಗಿ ಸೃಷ್ಟವಾದ್ದರಿಂದ ಒಳಗಿದ್ದ ಹರಿಯನ್ನು ನೋಡಲಾರೆವು. ಜ್ಞಾನಿಗಳು ಮಾತ್ರ ನೀನು ಕಣ್ಣು ತೆರೆಸಿದಾಗ ನಿನ್ನನ್ನು ತಿಳಿಯುವರು.*

**ಯಂ ವೈ ನ ವೇದ ವಿತತಾಕ್ಷಪಥೈರ್ಭ್ರಮದ್ಧೀಃ**
**ಸಂತಂ ಸ್ವಖೇಷ್ವಸುಷು ಹೃದ್ಯಪಿ ದೃಕ್‌ಪಥೇಷು ।**

**ತ್ವನ್ಮಾಯಯಾऽವೃತಮತಿಃ ಸ ಉ ಏವ ಸಾಕ್ಷಾ**
**ದದ್ಯಸ್ತವಾಖಿಲಗುರೋರುಪಪಾದ್ಯ ವೇದಮ್ ॥ ೪೮ ॥**

ಹೇ ತತ=ವ್ಯಾಪ್ತನಾದ ಶ್ರೀಹರಿಯೇ ಯಃ=ಯಾವ ಅಧಿಕಾರಿಯು ಅಕ್ಷಪಥೈಃ= ಶಬ್ದಾದಿವಿಷಯಗಳಿಂದ ಭ್ರಮದ್ಧೀಃ=ಚಂಚಲಮನಸ್ಸಿನವನಾಗಿ ಸ್ವಖೇಷು=ತನ್ನ ಇಂದ್ರಿಯಗಳಲ್ಲಿ ಅಸುಷು=ಪ್ರಾಣಗಳಲ್ಲಿ ಹೃದಿ=ಹೃದಯಾಕಾಶದಲ್ಲಿ ದೃಕ್‌ಪಥೇಷು= ದೃಷ್ಟಿಗೆ ವಿಷಯವಾದವುಗಳಲ್ಲಿ ಸಂತಂ=ಇರುವ ಯಂ=ಯಾವ ನಿನ್ನನ್ನು ತ್ವನ್ಮಾಯಾ- ವೃತಮತಿಃ=ನಿನ್ನ ಮೋಹಕ ಶಕ್ತಿಯಿಂದ ಆಚ್ಛಾದಿತನಾಗಿ ನ ವೇದ=ತಿಳಿಯಲಿಲ್ಲವೋ ಸ ಉ=ಅವನೇ ಅಖಿಲಗುರೋಃ=ಎಲ್ಲರ ಗುರುವಾದ ತವ=ನಿನ್ನ ವೇದಂ=ಜ್ಞಾಪಕವಾದ ಪ್ರಮಾಣವನ್ನು ಪಡೆದೂ ನ ವೇದ=ತಿಳಿಯಲಿಲ್ಲ ನಿನ್ನ ಪ್ರಸಾದವಾದರೆ ನಿನ್ನ ಜ್ಞಾನ ಸುಲಭ ಎಂದರ್ಥ.

*ಇಂತಹ ಮಾಹಾತ್ಮ್ಯಜ್ಞಾನವನ್ನು ನಿನ್ನ ಅನುಗ್ರಹದಿಂದ ಸಂಪಾದಿಸಲೇಬೇಕೆಂದು ಹೇಳುವರು*

**ಯದ್ದರ್ಶನಂ ನಿಗಮ ಆತ್ಮರಹಃಪ್ರಕಾಶಂ**
**ಮುಹ್ಯಂತಿ ಯತ್ರ ಕವಯೋಽಜಪರಾ ಯತಂತಃ ।**
**ತಂ ಸರ್ವವಾದವಿಷಯಪ್ರತಿರೂಪಶೀಲಂ**
**ವಂದಾಮಹೇ ಪುರುಷಮಾತ್ಮನಿ ಗೂಢಬೋಧಮ್ ॥ ೪೯ ॥**

ಯದ್ದರ್ಶನಂ=ಯಾವ ನಿನ್ನ ಜ್ಞಾನವು ನಿಗಮೇ=ವೇದದಲ್ಲಿ ಆತ್ಮರಹಪ್ರಕಾಶಂ= ಸ್ವರೂಪ ಪ್ರಕಾಶಕವೆಂದು ಪ್ರತಿಪಾದಿತವಾಗಿದೆ.(ನಾನ್ಯಃ ಪಂಥಾಃ ವಿದ್ಯತೇಽಯನಾಯ) ಹೀಗಿದ್ದರೂ ಯೇ=ಯಾರು ಅತ್ರ=ಭಗವಂತನ ರಹಸ್ಯ ತಿಳಿಯಲು ಯತಂತಃ= ಪ್ರಯತ್ನಿಸುವ ಅಜಪರಾಃ=ವಿಷ್ಣುಪರಾಯಣರಾದ(ಅಜಃ ಪರಃ ಯೇಷಾಂ ತೇ ಬ್ರಹ್ಮನೇ ಅಧಿಕಾವಧಿಯಾಗಿಯುಳ್ಳ)ಕವಯಃ=ಜ್ಞಾನಿಗಳು ಮುಹ್ಯಂತಿ=ಮೋಹ ಹೊಂದುವರು. (ಹೀಗೆ ಎಂದು ಹೇಳಲಾರರು)ಸರ್ವವಾದವಿಷಯಪ್ರತಿರೂಪಶೀಲಂ=ಎಲ್ಲ ಸಿದ್ಧಾಂತ- ಪ್ರತಿಪಾದ್ಯ ಅರ್ಥವಿರುದ್ಧಸ್ವಭಾವವುಳ್ಳ(ಆಪಾತತಃ ವೇದಾದಿ ವಿಚಾರ ಮಾಡಿದರೆ ವಿರುದ್ಧವಾಗಿ ಕಾಣುವ ಸ್ವಭಾವವುಳ್ಳ ಆತ್ಮನಿ=ಜೀವಸಮೂಹದಲ್ಲಿ ಗೂಢಬೋಧಮ್= ತಿಳಿಯದಿರುವ ಜ್ಞಾನವುಳ್ಳ ತಂ ಪುರುಷಂ=ಅಂಥ ಪುರುಷನನ್ನು ವಂದಾಮಹೇ= ನಮಸ್ಕರಿಸುತ್ತೇವೆ.

**॥ ಇಲ್ಲಿಗೆ ಏಳನೇ ಅಧ್ಯಾಯವು ಸಮಾಪ್ತವಾಯಿತು ॥**

# ಅಥ ಅಷ್ಟಮೋऽಧ್ಯಾಯಃ

**ಸಾರಾಂಶ**

ಮಾರ್ಕಂಡೇಯರಿಂದ ಸ್ತುತ್ಯನಾದ ಶ್ರೀಹರಿಯು ಮಾರ್ಕಂಡೇಯರನ್ನು ಕುರಿತು ಹೀಗೆ ಹೇಳಿದನು. ಎಲೋ ಬ್ರಹ್ಮರ್ಷಿಶ್ರೇಷ್ಠರೇ ನಿರಂತರವಾದ ನನ್ನಲ್ಲಿ ಮಾಡುವ ಭಕ್ತಿಯಿಂದ ತಪಸ್ಸು ಅಧ್ಯಯನ ಇಂದ್ರಿಯನಿಗ್ರಹಗಳಿಂದ ಹಾಗು ನನ್ನ ಉಪಾಸನಾಜನ್ಯಜ್ಞಾನದಿಂದಲೂ ಕೃತಕೃತ್ಯರಾಗಿದ್ದಿ.

ನೀವು ಮಾಡಿದ ಮಹಾವ್ರತಾನುಷ್ಠಾನದಿಂದ ನಿನ್ನ ಮೇಲೆ ಸಂತುಷ್ಟನಾಗಿದ್ದೇನೆ. ನಿನಗೆ ಕಲ್ಯಾಣವಾಗಲಿ. ವರಕೊಡುವವರಿಗೂ ನಿಯಾಮಕನಾದ ನನ್ನಿಂದ ಇಷ್ಟವಾದ ವರವನ್ನು ಸ್ವೀಕರಿಸು. ಅದಕ್ಕೆ ಮಾರ್ಕಂಡೇಯರು ಹೀಗೆ ಉತ್ತರ ನೀಡುತ್ತಾರೆ. ದೇವತೆಗಳಿಗೂ ನಿಯಾಮಕನಾದ, ಶರಣಾಗತರ ದುಃಖ ಪರಿಹಾರಕನಾದ, ಚ್ಯುತಿರಹಿತನಾದ ಭಗವಂತನೇ ನಿನ್ನನ್ನು ನೋಡುವ ಭಾಗ್ಯ ನನಗೆ ದೊರಕಿದೆಯಲ್ಲ ಅಷ್ಟೇ ಸಾಕು. ಅಲಭ್ಯಲಾಭವಾದಾಗ ಬೇರೆ ಉಳಿದ ಯಾವುದನ್ನು ಇಚ್ಛಿಸಿಯೇನು? ನಿಮ್ಮದರ್ಶನದಿಂದಲೇ ಎಲ್ಲ ವರಗಳನ್ನೂ ಪಡೆದಂತೆಯೇ. ಕಾರಣ ಏನು ಬೇಡ.

ನಿನ್ನ ದರ್ಶನ ಇಷ್ಟು ದುರ್ಲಭವೇ ಎಂದರೆ ಹೇಳುತ್ತಾರೆ. ಯಾವ ನಿನ್ನ ಕಾಂತಿ ಯುತವಾದ ಪಾದಕಮಲದರ್ಶನವನ್ನು ಬ್ರಹ್ಮಾದಿದೇವತೆಗಳು ಸಮಾಧಿಮುಂತಾದ ಉಪಾಯಗಳಿಂದ ಇಚ್ಛಿಸುವರೋ ಅಂಥ ನೀನು ನನ್ನ ದೃಷ್ಟಿಗೆ ವಿಷಯನಾಗಿರುವಿ. ಹೀಗೆ ಮಾರ್ಕಂಡೇಯರು ಭಗವಂತನನ್ನು ಪ್ರತ್ಯಕ್ಷವಾಗಿ ಕಂಡು ಅವನನ್ನು ಬಹುವಿಧವಾಗಿ ಸ್ತುತಿಸುತ್ತಾರೆ.

ಮಾರ್ಕಂಡೇಯರು ತಮ್ಮ ಆಶ್ರಮದಲ್ಲಿಯೇ ವಾಸಿಸುತ್ತಾ ಅಗ್ನಿ-ಸೂರ್ಯ-ಚಂದ್ರ-ನೀರು-ಭೂಮಿ-ಗಾಳಿ-ಆಕಾಶ-ತದಭಿಮಾನಿದೇವತೆಗಳು ಈ ಎಲ್ಲ ಸ್ಥಳದಲ್ಲಿರುವ

ಎಲ್ಲರ ರಕ್ಷಕನಾದ ಪರಮಾತ್ಮನನ್ನು ಧ್ಯಾನಮಾಡುತ್ತ ಮಾನಸಿಕವಾದ ದ್ರವ್ಯಗಳಿಂದ ಭಗವಂತನನ್ನು ಪೂಜಿಸಿದರು.

ಹೀಗೆಯೇ ದಿನಗಳುರುಳುತ್ತಿರಲು ಒಂದು ಸಲ ಪುಷ್ಪಭದ್ರಾ ನದೀತೀರದಲ್ಲಿ ಸಾಯಂಕಾಲದ ದೇವತೋಪಾಸನೆ ಮಾಡುವ ಪ್ರಸಂಗ. ಆಶ್ರಮದ ಪರಿಸರದಲ್ಲಿ ಭಾರಿ ಬಿರುಗಾಳಿಯು ಬೀಸಿತು. ಭೀಕರಶಬ್ದವನ್ನು ಹೊರಡಿಸುವ ಗಾಳಿಯನ್ನು ಹಿಂಬಾಲಿಸಿ ಕ್ರೂರಮೋಡಗಳು ಉಂಟಾದವು. ಆ ಮೋಡಗಳು ಮಿಂಚುಗಳೊಡನೆ ಗಟ್ಟಿಯಾಗಿ ಧ್ವನಿ ಮಾಡುತ್ತಾ ಚಕ್ಕಡಿಯ ಅಚ್ಚಿನಂತೆ ಓತಪ್ರೋತವಾಗಿ ಅತಿಸ್ಥೂಲವಾಗಿ ಮಳೆಗೈದವು.

ಅನಂತರ ಭಯಜನಕವಾದ ಸುಳಿಗಳುಳ್ಳ ಗಂಭೀರವಾದ ಧ್ವನಿಯಿಂದ ಕೂಡಿದ ನಾಲ್ಕು ಸಮುದ್ರಗಳು ಕಾಣಿಸಿಕೊಂಡವು.

ಈ ರೀತಿಯಾಗಿ ಮಾರ್ಕಂಡೇಯರು ನೋಡುತ್ತಿರಲು ಸಮುದ್ರಗಳು ತೆರೆಗಳಿಂದ ತುಂಬಿ ಹೋದವು. ಬಹಳ ಮಳೆಯನ್ನು ಸುರಿಸುತ್ತಿರುವ ಮೋಡಗಳು ವರ್ಷಗಳಿಂದ ಸಹಿತವಾಗಿ ಭೂಮಿಯನ್ನೂ ಸಹ ಮುಳುಗಿಸಿದವು. ಭೂಮಿ-ಅಂತರಿಕ್ಷ-ಸ್ವರ್ಗದಿಂದ ಸಹಿತವಾದ ಮೂರೂ ಲೋಕಗಳು ನೀರಿನಲ್ಲಿ ಮುಳುಗಿ ಹೋದವು.ಕೊನೆಗೆ ಮಾರ್ಕಂಡೇಯರೊಬ್ಬರೇ ಉಳಿದರು.

ಹಸಿವೆ ನೀರಡಿಕೆಗಳಿಂದ ಬಳಲಿದವರಾಗಿ ಅಂಧಕಾರದಿಂದ ಸುತ್ತುವರಿದು ದಿಕ್ಕು-ಉಪದಿಕ್ಕುಗಳಲ್ಲಿ ತಿರುಗಿ ಆಕಾಶ-ಭೂಮಿಯನ್ನೂ ತಿಳಿಯದಾದರು. ಶ್ರೀಹರಿಯ ಮೋಹಕಶಕ್ತಿಯಿಂದ ಆವೃತರಾದ ಮಾರ್ಕಂಡೇಯರು ಹತ್ತುಕೋಟಿ ಸಾವಿರದ ನೂರು ವರ್ಷಗಳನ್ನು ಹೀಗೆಯೇ ಕಳೆದರು. ಹೀಗಿರುವಾಗ ಮುನಿಯು ಒಂದು ಸಲ ಪ್ರಲಯ ಜಲಧಿಯಲ್ಲಿ ತಿರುಗುತ್ತ ಭೂಮಿಯ ಎತ್ತರ ಪ್ರದೇಶದಲ್ಲಿ ಚಿಗುರು, ಹಣ್ಣುಗಳಿಂದ ಶೋಭಿಸುವ ಚಿಕ್ಕ ವಟವೃಕ್ಷವನ್ನು ನೋಡಿದರು. ಆ ವಟವೃಕ್ಷದ ಟೊಂಗೆಯ ಎಲೆಯ ಮಧ್ಯದಲ್ಲಿ ಮಲಗಿರುವ ತನ್ನ ಕಾಂತಿಯಿಂದ ಕತ್ತಲೆಯನ್ನು ಅಪಹರಿಸುವ ಮಗುವೊಂದನ್ನು ನೋಡಿದರು.

ಮಾರ್ಕಂಡೇಯರು ಆ ಪುಟ್ಟ ಮಗುವನ್ನು ಹೀಗೆ ಸ್ತುತಿಸಿದರು-

ಇಂದ್ರನೀಲಮಣಿಯಂತೆ ಶ್ಯಾಮವರ್ಣದ ಮುಖಕಮಲದಿಂದ ಕೂಡಿದ ,ಶಂಖದಂತಿರುವ ಕುತ್ತಿಗೆ, ಎತ್ತರವಾದ ಭುಜಗಳು, ನೀಟಾದ ಮೂಗು, ಸುಂದರವಾದ ಹುಬ್ಬುಗಳು, ತನ್ನ ಮುಖದ ಗಾಳಿಯಿಂದ ಚಲಿಸುವ ಗುಂಗುರುಕೂದಲುಗಳು,

ಆಲಂಕಾರಿಕವಾದ ಕಿವಿಯ ಆಭರಣಗಳು, ಹವಳದಂತಿರುವ ತುಟಿಯ ಕಾಂತಿ, ಸಲ್ಪ ಕೆಂಪಾದ ಅಮೃತದಂತೆ ಶುಭ್ರವಾದ ಮಂದಹಾಸ, ಕಮಲದ ಒಳಭಾಗದಂತೆ ಕೆಂಪಾದ ಕಣ್ಣಿನ ತುದಿ, ಮಂದಹಾಸದಿಂದ ಕೂಡಿದ ನೋಟ, ಸುಂದರವಾದ ಬೆರಳುಗಳಿಂದ ಕೂಡಿದ ಕೈಗಳು ಪಾದಕಮಲವನ್ನು ಮೇಲೆತ್ತಿ ಬಾಯಿಯಲ್ಲಿಟ್ಟುಕೊಂಡು ಚೀಪುತ್ತಿರುವುದನ್ನು ನೋಡಿ ಮಾರ್ಕಂಡೇಯರು ಆಶ್ಚರ್ಯಗೊಂಡರು.

ಆ ಬಾಲಕನನ್ನು ನೋಡುವುದರಿಂದ ಶ್ರಮವನ್ನು ಕಳೆದುಕೊಂಡವರಾಗಿ ಸಂತೋಷದಿಂದ ಮಾರ್ಕಂಡೇಯರು ಬಾಲಕನನ್ನು ನೀನಾರೆಂದು ಕೇಳಲು ಮುಂದೆ ಬಂದರು. ಅಷ್ಟರಲ್ಲಿ ಬಾಲಕನು ತತ್ಕಾಲದಲ್ಲಿ ಸೃಷ್ಟಿಸಿದ ಶ್ವಾಸಗಾಳಿಯಿಂದ ಆ ಮಾರ್ಕಂಡೇಯರು ನೊರಜಿನಂತೆ ದೇಹದಲ್ಲಿ ಪ್ರವೇಶಿಸಿದರು. ಆ ಭಗವಂತನ ದಿವ್ಯ ಭವ್ಯವಾದ ಶರೀರದಲ್ಲಿ ಸಮಸ್ತ ಪ್ರಪಂಚವನ್ನು ನೋಡಿದರು. ಹೊರಗಿರುವಾಗ ಹೇಗೋ ಹಾಗೆ ಬಹಳ ಆಶ್ಚರ್ಯವಾಯಿತು. ಆಕಾಶ, ದ್ಯಾವಾ-ಪೃಥಿವಿಗಳು, ನಕ್ಷತ್ರಸಮೂಹ, ಪರ್ವತಗಳು, ಮತ್ತು ಸಮುದ್ರಗಳು, ಖಂಡಗಳಿಂದ ಸಹಿತವಾದ ದ್ವೀಪಗಳು, ದಿಕ್ಕುಗಳು, ದೇವದೈತ್ಯರು, ಅಡವಿಗಳು, ನಾನಾದೇಶಗಳು, ನದಿಗಳು, ಪಟ್ಟಣಗಳು, ಬ್ರಾಹ್ಮಣಾದಿವರ್ಣಗಳು ಅನೇಕ ಯುಗಗಳ ಅರಿವಿಗೆ ಕಾರಣವಾದ ಕಾಲ, ಪ್ರವೃತ್ತಿ ನಿವೃತ್ತಿಗೆ ಕಾರಣವಾದ ಹಾನೋಪಾದಾನಸಮರ್ಥವಾದ ಏನೇನಿದೆಯೋ ಆ ಎಲ್ಲ ಸತ್ಯವಾದ ಜಗತ್ತನ್ನು ನೋಡಿದರು. ದೋಷರಹಿತವಾದ ಹೊಟ್ಟೆಯಲ್ಲಿ ಪ್ರಸಿದ್ಧವಾದ ಪ್ರಪಂಚವನ್ನು ಕಂಡರು. ಈ ರೀತಿ ಪ್ರಪಂಚವನ್ನು ನೋಡುತ್ತ ಮಗುವಿನ ನಿಶ್ವಾಸದಿಂದ ಹೊರಗೆ ಪ್ರಲಯ ಸಮುದ್ರದಲ್ಲಿ ಬಿದ್ದರು.

ಆ ಭೂಮಿಯ ಎತ್ತರ ಪ್ರದೇಶದಲ್ಲಿ ಬಹಳ ವಿಸ್ತಾರವಾದ ಆಲದ ಮರ. ಅದರ ಎಲೆಯ ಮಧ್ಯದಲ್ಲಿ ಮಲಗಿರುವ ಶಿಶುವನ್ನು ನೋಡಿದರು. ಆ ಮಗುವಿನ ರೂಪದಿಂದ ಇರುವ ಭಗವಂತನೂ ತನ್ನ ಮಂದಹಾಸಯುತವಾದ ಕಡೆಗಣ್ಣ ನೋಟದಿಂದ ಮಾರ್ಕಂಡೇಯರನ್ನು ನೋಡಿದನು. ನಂತರ ಆ ಶಿಶುವನ್ನು ಕಣ್ಣುಗಳಿಂದ ನೋಡಿ ಹೃದಯದಲ್ಲಿ ನೆಲೆಸಿರುವ ಭಗವಂತನನ್ನು ಆಲಿಂಗಿಸಲು ಅತ್ಯಂತ ಸಂತೋಷದಿಂದ ಹೊರಟರು. ಹೃದಯಗುಹಾದಲ್ಲಿರುವ ಸರ್ವೋಪಾಯಗಳಿಗೆ ನಿಯಾಮಕನಾದ ಶ್ರೀಹರಿಯು ಹೇಗೆ ಅಸಮರ್ಥನಿಂದ ಸೃಷ್ಟಿಸಲ್ಪಟ್ಟ ಇಂದ್ರಜಾಲಿಕ ಪದಾರ್ಥಗಳು ಅದೃಶ್ಯವಾಗುವವೋ ಹಾಗೆ ಮುನಿಯು ಆಲಂಗಿಸುವ ಮುಂಚೆಯೇ ತಕ್ಷಣದಲ್ಲಿ ಮುನಿಗೆ ಕಾಣದಾದನು. ಬಾಲಕನು ಅದೃಶ್ಯನಾಗುತ್ತಿರಲು ಅವನ ಹಿಂದೆಯೇ

ವಟವೃಕ್ಷವು, ಜಗತ್ತನ್ನೇ ಮುಳಿಗಿಸಿದ ನೀರು ಒಂದೇ ಕ್ಷಣದಲ್ಲಿ ಈ ಮುನಿಗೆ ಕಾಣದಾದವು. ಆ ಕ್ಷಣದಲ್ಲಿ ಮುನಿಗಳು ತಮ್ಮ ಆಶ್ರಮದಲ್ಲಿ ಮೊದಲಿನಂತೆ ಕುಳಿತಿದ್ದರು.

**ಸೂತ ಉವಾಚ-**

**ಸಂಸ್ತುತೋ ಭಗವಾನಿತ್ಥಂ ಮಾರ್ಕಂಡೇಯೇನ ಧೀಮತಾ ।**
**ನಾರಾಯಣೋ ನರಸಖಃ ಪ್ರೀತ ಆಹ ಭೃಗೂದ್ವಹಮ್ ॥ ೧ ॥**

ಧೀಮತಾ=ಬುದ್ಧಿವಂತನಾದ ಮಾರ್ಕಂಡೇಯೇನ=ಮಾರ್ಕಂಡೇಯನಿಂದ ಇತ್ಥಂ=ಈ ರೀತಿ ಸಂಸ್ತುತಃ=ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ನರಸಖಃ=ನರನ ಗೆಳೆಯನಾದ ಭಗವಾನ್=ಷಡ್ಗುಣ ಪೂರ್ಣನಾದ ನಾರಾಯಣಃ=ಶ್ರೀಹರಿಯು ಭೃಗೂದ್ವಹಂ=ಮಾರ್ಕಂಡೇಯನನ್ನು ಕುರಿತು ಪ್ರೀತಃ=ಸಂತೋಷಗೊಂಡವನಾಗಿ ಆಹ=ಹೇಳಿದನು.

ಶ್ರೀಭಗವಾನುವಾಚ-

**ಭೋ ಭೋ ಬ್ರಹ್ಮರ್ಷಿವರ್ಯೋ(ರ್ಯಾ)ಽಸಿ ಸಿದ್ಧ ಆತ್ಮಸಮಾಧಿನಾ ।**
**ಮಯಿ ಭಕ್ತ್ಯಾಽನಪಾಯಿನ್ಯಾ ತಪಃಸ್ವಾಧ್ಯಾಯಸಂಯಮೈಃ ॥ ೨ ॥**

ಭೋ ಭೋ ಬ್ರಹ್ಮರ್ಷಿವರ್ಯ=ಎಲೋ ಬ್ರಹ್ಮರ್ಷಿಶ್ರೇಷ್ಠನೇ ಅನಪಾಯಿನ್ಯಾ =ನಿರಂತರವಾದ ಮಯಿ=ನನ್ನಲ್ಲಿ ಮಾಡುವ ಭಕ್ತ್ಯಾ=ಭಕ್ತಿಯಿಂದ ತಪಃಸ್ವಾಧ್ಯಾಯ-ಸಂಯಮೈಃ=ತಪಸ್ಸು, ಅಧ್ಯಯನ, ಇಂದ್ರಿಯನಿಗ್ರಹಗಳಿಂದಲೂ ಆತ್ಮಸಮಾಧಿನಾ =ಶ್ರೀಹರಿಯ ಉಪಾಸನಾಜನ್ಯಜ್ಞಾನದಿಂದ ಸಿದ್ಧಃ ಅಸಿ=ಕೃತಕೃತ್ಯನಾಗಿದ್ದಿ.

**ವಿಶೇಷ-**ಪ್ರಥಮಾಂತಪಾಠವಿದ್ದಾಗ 'ಬ್ರಹ್ಮರ್ಷಿವರ್ಯಃ ಅಸಿ' 'ಸಿದ್ಧಃ ಅಸಿ' ಎಂದು ಅನ್ವಯ ಮಾಡಬೇಕು.

**ವಯಂ ತೇ ಪರಿತುಷ್ಟಾಃ ಸ್ಮ ತ್ವದ್‌ಬೃಹದ್ವ್ರತಚರ್ಯಯಾ ।**
**ವರಂ ಪ್ರತೀಚ್ಛ ಭದ್ರಂ ತೇ ವರದೇಶಾದಭೀಪ್ಸಿತಮ್ ॥ ೩ ॥**

ವಯಂ=ನಾವು ತ್ವದ್ ಬೃಹದ್ವ್ರತಚರ್ಯಯಾ=ನೀನು ಮಾಡಿದ ಮಹಾ-ವ್ರತಾನುಷ್ಠಾನದಿಂದ ತೇ=ನಿನ್ನ ಮೇಲೆ ಪರಿತುಷ್ಟಾಃ ಸ್ಮಃ=ಸಂತುಷ್ಟರಾಗಿದ್ದೇವೆ ತೇ ಭದ್ರಂ ಅಸ್ತು=ನಿನಗೆ ಕಲ್ಯಾಣವಾಗಲಿ ವರದೇಶಾತ್=ವರಕೊಡುವವರಿಗೂ ನಿಯಾಮಕನಾದ ನನ್ನಿಂದ ಈಪ್ಸಿತಂ=ಇಷ್ಟವಾದ ವರಂ=ವರವನ್ನು ಪ್ರತೀಚ್ಛ=ಸ್ವೀಕರಿಸು.

**ವಿಶೇಷ-** ವರದೇಶಾತ್ ಆಗತ್ಯ ವಯಂ ಪರಿತುಷ್ಟಾಃ ಸ್ಮಃ ಹೀಗೂ ಅನ್ವಯ ಮಾಡಬಹುದು. ವರದೇಶಾತ್=ಶ್ರೇಷ್ಠವಾದ ಬದರಿಯಿಂದ ಆಗತ್ಯ=ಬಂದು ಸಂತುಷ್ಟನಾಗಿದ್ದೇನೆ ಎಂದರ್ಥ.

*ಮುಮುಕ್ಷು ಆದವನಿಗೆ ಭಗವದ್ದರ್ಶನದ ಹೊರತು ಬೇರೆ ವರ ಇಷ್ಟವಿಲ್ಲ ಎಂದು ಇಲ್ಲಿ ಹೇಳುತ್ತಾರೆ.*

*ಶ್ರೀಸತ್ಯಧರ್ಮರ ಪ್ರಕಾರ - ಮೇಲಿನ ಶ್ಲೋಕದಲ್ಲಿ ಹೇಳಿದಂತೆ ಭಗವಂತನು ಮಾಡಿದ ವರದ ಪ್ರಲೊಭನವನ್ನು ಅರಿತು ಸ್ವಾಮಿಯೇ ಅಹಂಕಾರದಿಂದ ನಾನು ಏನನ್ನೂ ಕೇಳಲಾರೆ ಒಂದು ವೇಳೆ ನೀನು ವರಕೊಡುವದೇ ಆದರೆ ಕೇಳುವೆನು ಅದೇನೆಂದರೆ ಯಾವ ನಿನ್ನ ಮಾಯೆಯನ್ನು ತಿಳಿದು ನಾನು ಮುಕ್ತನಾಗುವೆನೋ ಅಂಥ ನಿನ್ನ ಮಾಯೆಯನ್ನು ತೋರಿಸು ಎಂದು ಬೇಡುವೆ ಎಂದು ಈ ಮೂರು ಶ್ಲೋಕಗಳಿಂದ ಹೇಳುವರು.*

**ಋಷಿರುವಾಚ-**

**ಜಿತಂ ತೇ ದೇವದೇವೇಶ ಪ್ರಪನ್ನಾರ್ತಿಹರಾಚ್ಯುತ ।**
**ವರೇಣೈತಾವತಾಽಲಂ ನೋ ಯದ್‌ಭವಾನ್ ಸಮದೃಶ್ಯತ ॥ ೪ ॥**

ಹೇ ದೇವದೇವ=ದೇವತೆಗಳಿಗೂ ದೇವನೇ ಈಶ=ನಿಯಾಮಕನೇ(ಅಥವಾ ದೇವದೇವೇಶ=ದೇವತೆಗಳಿಗೆ ದೇವತೆಗಳಾದ ಬ್ರಹ್ಮಾದಿಗಳಿಗೂ ಈಶನಾದವನೇ ಅಥವಾ ದೇವದೇವೇಶ=ದೇವತೆಗಳಿಂದ ಸ್ತುತ್ಯಳಾದ ಲಕ್ಷ್ಮೀನಿಯಮಾಕನೇ 'ದೇವೈಃ ದೇವಃ (ಸ್ತುತಿಃ) ಯಸ್ಯಾಃ ಸಾಃ ದೇವದೇವಾ, ಸಾ ಚ ಸಾ ಈ ಚ ದೇವದೇವೇ(ಲಕ್ಷ್ಮೀಃ) ತಸ್ಯಾಃ ಈಶ') ಪ್ರಪನ್ನಾರ್ತಿಹರ=ಶರಣಾಗತರ ದುಃಖ ಪರಿಹಾರಕನೇ ಅಚ್ಯುತ=ಚ್ಯುತಿರಹಿತನೇ ಯತ್ ಭವಾನ್=ಯಾವ ನೀವು ಸಮದೃಶ್ಯತ=ಕಾಣಿಸಿಕೊಂಡಿರೋ ಏತಾವತಾ ವರೇಣ ಅಲಂ=ಇಷ್ಟೇ ವರ ಸಾಕು. ಅಂದರೆ ತೇ=ನಿಮ್ಮ ದರ್ಶನಂ=ದರ್ಶನವು ಪ್ರಾಪ್ತವಾಯಿತು. ಅದೇ ಸಾಕು ಅಲಭ್ಯ ಲಾಭವಾದಾಗ ಬೇರೆ ಉಳಿದ ಯಾವುದನ್ನು ಇಚ್ಛಿಸಿಯೇನು. ನಿಮ್ಮದರ್ಶನದಿಂದಲೇ ಎಲ್ಲವರಗಳನ್ನೂ ಗೆದ್ದಂತಯೇ ಕಾರಣ ಏನು ಬೇಡ. ತೇ=ನಿನಗೆ ಜಿತಂ=ಜಯವು

**ವಿಶೇಷ-**ಅಚ್ಯುತ ಎಂಬ ವಿಶೇಷಣದಿಂದ ನೀನು ಮುಂದೆ ತೋರಿಸುವ ಮಾಯೆಯಿಂದ ನನಗೂ ಅಚ್ಯುತಿಯನ್ನು ಕೊಡು ಎಂದು ಸೂಚಿಸುವನು.

*ನಿನ್ನ ದರ್ಶನ ಇಷ್ಟು ದುರ್ಲಭವೇ ಎಂದರೆ ಹೇಳುವರು.*

**ವಾಂಛಂತ್ಯಜಾದಯೋ ಯಸ್ಯ ಶ್ರೀಮತ್ಪಾದಾಬ್ಜದರ್ಶನಮ್ ।**
**ಮನಸಾ ಯೋಗಪಕ್ವೇನ ಸ ಭವಾನ್ ಮೇಽಕ್ಷಗೋಚರಃ ॥ ೫ ॥**

ಯಸ್ಯ=ಯಾವ ನಿನ್ನ ಶ್ರೀಮತ್ಪಾದಾಬ್ಜದರ್ಶನಂ=ಕಾಂತಿಯುತವಾದ ಪಾದಕಮಲ ದರ್ಶನವನ್ನು ಅಜಾದಯಃ=ಬ್ರಹ್ಮಾದಿ ದೇವತೆಗಳು ಯೋಗಪಕ್ವೇನ ಮನಸಾ=ಸಮಾಧಿ ಮುಂತಾದ ಉಪಾಯಗಳಿಂದ ಫಲಸಿಗುವಂತೆ ಪರಿಪಕ್ವವಾದ, ಮನಸ್ಸಿನಿಂದ ವಾಂಛಂತಿ=ಇಚ್ಛಿಸುವರೋ ಸಃ ಭವಾನ್=ಅಂಥ ನೀನು ಮೇ ಅಕ್ಷಿಗೋಚರಃ=ನನ್ನ ದೃಷ್ಟಿಗೆ ವಿಷಯನಾಗಿರುವಿ

**ವಿಶೇಷ-** ನನ್ನ ದೃಷ್ಟಿಗೆ ಗೋಚರನಾಗಲು ಕಾರಣವನ್ನೂ ಅಜಾದಯಃ ಎಂಬುದರಿಂದ ಹೇಳುವರು. ಹೇಗೆಂದರೆ ಹೇ ಅಜ=ಜನ್ಮರಹಿತನೇ ಮೇ=ನನ್ನ ಮೇಲೆ ಆದಯಃ=ಚೆನ್ನಾಗಿ ದಯೆಯುಳ್ಳವನಾಗಿ ಅಕ್ಷಗೋಚರೋ ಭವ=ದರ್ಶನ ಕೊಡು.

*ನಿನ್ನ ಆಜ್ಞೆಯನ್ನು ಸರ್ವಥಾ ಮೀರುವಂತಿಲ್ಲವೆಂದು ಹೇಳುವರು -*

**ಅಥಾಪ್ಯಂಬುಜಪತ್ರಾಕ್ಷ ಪುಣ್ಯಶ್ಲೋಕಶಿಖಾಮಣೇ ।**
**ಈಕ್ಷೇ ಮಾಯಾಂ ಯಯಾ ಲೋಕಃ ಸಪಾಲೋ ವೇದಸದ್ಭಿದಾಮ್ ॥ ೬ ॥**

ಪುಣ್ಯಶ್ಲೋಕಶಿಖಾಮಣೇ=ಮಂಗಲ ಕೀರ್ತಿವುಳ್ಳವರಲ್ಲಿ ಶ್ರೇಷ್ಠನೇ ಅಥಾಪಿ=ಬೇರೆ ವರಗಳು ಬೇಡವಾಗಿದ್ದರೂ ನಿನ್ನ 'ವರಂ ಪ್ರತೀಚ್ಛ' ಎಂಬ ಆಜ್ಞೆಯನ್ನು ಉಲ್ಲಂಘಿಸಿದಂತಾಗುತ್ತದೆ ಆದ್ದರಿಂದ ಅಂಬುಜಪ್ರತ್ರಾಕ್ಷ=ಕಮಲದಲನಯನನೇ ಸಪಾಲಃ ಲೋಕಃ=ತಮಗಿಂತ ಉತ್ತಮರಾದವರಿಂದ ಸೇರಿದ ಜ್ಞಾನಿಯು ಯಯಾ=ಯಾವ ನಿನ್ನ ಅಘಟಿತಘಟಕ ಶಕ್ತಿರೂಪವಾದ ಮಹಾತ್ಮ್ಯದಿಂದ ಸದ್ಭಿದಾಂ ವೇದ=ಜಗತ್ತು ಮತ್ತು ಪರಮಾತ್ಮರ ಭೇದವನ್ನು ತಿಳಿದನೋ ಅಂಥ ಮಾಯಾಂ= ಮಾಯೆಯನ್ನು ಈಕ್ಷೇ=ನೋಡುವೆನು.

**ಸೂತ ಉವಾಚ**

**ಇತೀರಿತೋಽರ್ಚಿತಃ ಕಾಮಮೃಷಿಣಾ ಭಗವಾನ್ಮುನೇ ।**
**ತಥೇತಿ ಸ ಸ್ಮಯಂ ಪ್ರಾಗಾದ್ ಬದರ್ಯಾಶ್ರಮಮೀಶ್ವರಃ ॥ ೭ ॥**

ಮುನೇ=ಶೌನಕರೇ ಋಷಿಣಾ=ಮಾರ್ಕಂಡೇಯನಿಂದ ಕಾಮಂ ಅರ್ಚಿತಃ ಸನ್

=ಯಥೇಷ್ಟವಾಗಿ ಪೂಜಿತನಾಗಿ ಇತಿ ಈರಿತಃ=ಈ ರೀತಿ ನಿನ್ನ ಮಾಯೆಯನ್ನು ನೋಡುವೆನೆಂದು ಹೇಳಿಸಿಕೊಳ್ಳಲ್ಪಟ್ಟು ಈಶ್ವರಃ=ಭಗವಂತನು ತಥಾ ಇತಿ=ಹಾಗೆ ಆಗಲಿ (ಅಂದರೆ ತೋರಸುವೆನು ಎಂದು)ಎಂದು ಸಸ್ಮಯಂ ಉಕ್ತ್ವಾ=ಮುಗುಳು ನಗುತ್ತ ಹೇಳಿ ಬದರ್ಯಾಶ್ರಮಂ=ಬದರಿಕಾಶ್ರಮಕ್ಕೆ ಪ್ರಾಗಾತ್=ಹೋದನು.

**ತಮೇವ ಚಿಂತಯನ್ನರ್ಥಮೃಷಿಃ ಸ್ವಾಶ್ರಮ ಏವ ಸಃ ।**
**ವಸನ್ನಗ್ನ್ಯರ್ಕಸೋಮಾಂಬುಭೂವಾಯುವಿಯದಾತ್ಮಸು ॥ ೮ ॥**

**ಧ್ಯಾಯನ್ ಸರ್ವತ್ರ ಚ ಹರಿಂ ಭಾವದ್ರವ್ಯೈರಪೂಜಯತ್ ।**
**ಕ್ವಚಿತ್ ಪೂಜಾಂ ವಿಸಸ್ಮಾರ ಭಕ್ತಿಪ್ರಸರಸಂಪ್ಲುತಃ ॥ ೯ ॥**

ಸಃ ಋಷಿಃ=ಮಾರ್ಕಂಡೇಯನು ಸ್ವಾಶ್ರಮೇ ಏವ=ತನ್ನ ಆಶ್ರಮದಲ್ಲಿಯೇ ವಸನ್=ವಾಸಿಸುತ್ತ ಅಗ್ನ್ಯರ್ಕಸೋಮಾಂಬುಭೂವಾಯುವಿಯದಾತ್ಮಸು=ಅಗ್ನಿ-ಬೆಂಕಿ ಮತ್ತು ತದಭಿಮಾನಿದೇವತೆ, ಅರ್ಕ-ಸೂರ್ಯ, ಸೋಮ=ಚಂದ್ರ, ಅಂಬು=ನೀರು, ಭೂ=ಭೂಮಿ, ವಾಯು=ಗಾಳಿ, ವಿಯತ್=ಆಕಾಶ, ಆತ್ಮಸು=ದೇಹಗಳಲ್ಲಿ ಸರ್ವತ್ರ ಚ=ಎಲ್ಲ ಸ್ಥಳದಲ್ಲಿರುವ ಎಲ್ಲರ ರಕ್ಷಕನಾದ ಹರಿಂ=ಪರಮಾತ್ಮನನ್ನು ಧ್ಯಾಯನ್=ಧ್ಯಾನ ಮಾಡುತ್ತ ಭಾವದ್ರವ್ಯೈಃ=ಮಾನಸಿಕವಾದ ದ್ರವ್ಯಗಳಿಂದ ಅಪೂಜಯತ್=ಪೂಜಿಸಿದನು. ಕ್ವಚಿತ್=ಕೆಲವು ಸಲ ಭಕ್ತಿಪ್ರಸರಸಂಪ್ಲುತಃ=ಭಕ್ತಿಯ ಪ್ರವಾಹದಲ್ಲಿ ಮುಳುಗಿ ಪೂಜಾಂ ವಿಸಸ್ಮಾರ=ಮಾನಸಿಕ ಪೂಜೆಯನ್ನೂ ಮರೆತನು.

**ವಿಶೇಷ-** ಕೇವಲ ಅವನ ಅನುಭವೈಕವೇದ್ಯವಾದ ವಿಷಯವನ್ನು ಹೇಳಲು ಬೇಕಾದ ಗ್ರಂಥಕಾರರ ಸರ್ವಜ್ಞತ್ವವು ಇದರಿಂದ ಧ್ವನಿತವಾಗುತ್ತದೆ. ಉಳಿದವರಿಗೆ ಕೃತಿ ವ್ಯತ್ಯಾಸ ವಿಸ್ಮರಣ ಅಜ್ಞಾನ ಇವೆ ಎಂದು ತಿಳಿಯಬೇಕು.

**ತಸ್ಯೈಕದಾ ಭೃಗುಶ್ರೇಷ್ಠ ಪುಷ್ಪಭದ್ರಾತಟೇ ಮುನೇ ।**
**ಉಪಾಸೀನಸ್ಯ ಸಂಧ್ಯಾಯಾಂ ಬ್ರಹ್ಮನ್ ವಾಯುರಭೂನ್ಮಹಾನ್ ॥ ೧೦ ॥**

ಬ್ರಹ್ಮನ್=ಬ್ರಾಹ್ಮಣೋತ್ತಮರಾದ ಭೃಗುಶ್ರೇಷ್ಠ=ಭೃಗುಕುಲಶ್ರೇಷ್ಠರಾದ ಮುನೇ=ಶೌನಕರೇ ಏಕದಾ=ಒಂದು ಸಲ ಪುಷ್ಪಭದ್ರಾತಟೇ=ಪುಷ್ಪಭದ್ರಾ ನದಿತೀರದಲ್ಲಿ ಸಂಧ್ಯಾಯಾಂ=ಸಾಯಂಕಾಲದಲ್ಲಿ ಉಪಾಸೀನಸ್ಯ=ದೇವತೋಪಾಸನೆ ಮಾಡುತ್ತಿರುವ ತಸ್ಯ=ಆ ಋಷಿಯ ಆಶ್ರಮದಲ್ಲಿ ಮಹಾನ್ ವಾಯುಃ=ಭಾರಿ ಬಿರುಗಾಳಿಯು ಅಭೂತ್=ಬೀಸಿತು.

**ತಂ ಚಂಡಶಬ್ದಂ ಸಮುದೀರಯಂತಂ ಬಲಾಹಕಾ ಅನ್ವಭವನ್ ಕರಾಲಾಃ ।**
**ಅಕ್ಷಸ್ಥವಿಷ್ಠಾ ಮುಮುಚುಸ್ತಡಿದ್ಭಿಃ ಸ್ವನಂತ ಉಚ್ಚೈರಭಿವರ್ಷಧಾರಾಃ ॥ ೧೧ ॥**

ಚಂಡಶಬ್ದಂ=ಭೀಕರ ಶಬ್ದವನ್ನು ಸಮುದೀರಯಂತಮ್=ಹೊರಡಿಸುವ ತಂ=ಗಾಳಿಯನ್ನು ಅನು=ಹಿಂಬಾಲಿಸಿ ಕರಾಲಾಃ=ಕ್ರೂರಗಳಾದ ಬಲಾಹಕಾಃ=ಮೋಡಗಳು ಅಭವನ್=ಉಂಟಾದವು. ತಡಿದ್ಭಿಃ ಸಹ=ಮಿಂಚುಗಳೊಡನೆ ಉಚ್ಚೈಃ ಸ್ವನಂತಃ=ಗಟ್ಟಿಯಾಗಿ ಧ್ವನಿ ಮಾಡುತ್ತಾ(ಗುಡುಗುತ್ತ)ಅಕ್ಷಸ್ಥವಿಷ್ಠಾಃ=ಚಕ್ಕಡಿಯ ಅಚ್ಚಿನಂತೆ ಅಭಿವರ್ಷಧಾರಾಃ=ಓತಪ್ರೋತವಾಗಿ ಅತಿಸ್ಥೂಲವಾಗಿ ಮುಮುಚುಃ=ಮಳೆಗೈದವು.

**ತತೋ ವ್ಯದೃಶ್ಯಂತ ಚತುಸ್ಸಮುದ್ರಾಃ ಸಮಂತತಃ ಕ್ಷ್ಮಾತಲಮಾಗ್ರಸಂತಃ ।**
**ಸಮೀರವೇಗೋರ್ಮಿಭಿರುಗ್ರನಕ್ರಭಯಾನಕಾವರ್ತಗಭೀರಘೋಷಾಃ ॥ ೧೨ ॥**

ತತಃ=ಅನಂತರ ಸಮಂತತಃ=ಸುತ್ತಲೂ ಕ್ಷ್ಮಾತಲಂ=ಭೂಮಿಯನ್ನು ಅಗ್ರಸಂತಃ=ಮುಳುಗಿಸುತ್ತಿರುವ ಸಮೀರವೇಗೋರ್ಮಿಭಿಃ=ಗಾಳಿಯ ವೇಗದಿಂದುಂಟಾದ ಭಾರಿ ತೆರೆಗಳಿಂದ ಉಗ್ರನಕ್ರಭಯಾನಕಾವರ್ತಗಭೀರಘೋಷಾಃ=ಕ್ರೂರವಾದ ಮೊಸಳೆಗಳು, ಭಯಜನಕವಾದ ಸುಳಿಗಳು, ಗಂಭೀರವಾದ ಧ್ವನಿಯುಳ್ಳ ಚತುಸ್ಸಮುದ್ರಾಃ=ನಾಲ್ಕು ಸಮುದ್ರಗಳು ವ್ಯದೃಶ್ಯಂತ=ಕಾಣಿಸಿಕೊಂಡವು.

**ಅಂತರ್ಬಹಿಶ್ಚಾದ್ಭಿರಭಿದ್ಯುಭಿರ್ಘನೈಃ**
**ಶತಹ್ರದಾಭೀರುಪತಾಪಿತಂ ಜಗತ್ ।।**
**ಚತುರ್ವಿಧಂ ವೀಕ್ಷ್ಯ ಮಹಾಮನಾ ಮುನಿ-**
**ರ್ಜಲಪ್ಲುತಾಂ ಕ್ಷ್ಮಾಂ ವಿಮನಾ ಸಮತ್ರಸತ್ ॥ ೧೩ ॥**

ಅಭಿದ್ಯುಭಿಃ=ಸುತ್ತಲೂ ಪ್ರಕಾಶಿಸುವ ಘನೈಃ=ಮೋಡಗಳಿಂದ ಚ=ಮತ್ತು ಶತಹ್ರದಾಭಿಃ=ಮಿಂಚುಗಳಿಂದಲೂ ಅಂತಃ ಬಹಿಃ=ಒಳಗೂ ಹೊರಗೂ ಅದ್ಭಿಃ=ನೀರಿನಿಂದಲೂ ಸಹಿತಂ=ಕೂಡಿದ ಉಪತಾಪಿತಂ=ಸುಟ್ಟಂತಿರುವ ಜರಾಯುಜ-ಅಂಡಜ-ಸ್ವೇದಜ-ಉದ್ಭಿಜ್ಜ ಎಂಬ ನಾಲ್ಕು ರೀತಿಯ ಜಗತ್=ಪ್ರಪಂಚವನ್ನು ವೀಕ್ಷ್ಯ=ನೋಡಿ ಮಹಾಮನಾಃ ಮುನಿಃ=ಮಹಾಮುನಿಯಾಗಿದ್ದರೂ ಜಲಪ್ಲುತಾಂ ವೀಕ್ಷ್ಯ=ನೀರಿನಲ್ಲಿ ಮುಳಗಿದ್ದನ್ನು ಕಂಡು ಸಮತ್ರಸತ=ಭಯಗೊಂಡನು.

**ತಸ್ಯೈವಮುದ್ವೀಕ್ಷತ ಊರ್ಮಿಭೀಷಣಃ**
**ಪ್ರಭಂಜನಾಘೂರ್ಣಿತವಾರ್ಮಹಾರ್ಣವಃ ।।**

**ಆಪೂರ್ಯಮಾಣಃ ಪ್ರವೃಷದ್ಭಿರಂಬುದೈಃ**
**ಕ್ಷ್ಮಾಮಪ್ಯಧಾದ್ ದ್ವೀಪವರ್ಷಾದಿಭಿಃ ಸಮಮ್** ॥ ೧೪ ॥

ಏವಂ=ಈ ರೀತಿಯಾಗಿ ತಸ್ಯ=ಮಾರ್ಕಂಡೇಯನು ಉದ್ವೀಕ್ಷತಃ ಸತಃ= ನೋಡುತ್ತಿರಲು ಊರ್ಮಿಭೀಷಣಃ=ತೆರೆಗಳಿಂದ ಭಯಂಕರವಾದ ಪ್ರಭಂಜನಾ-ಘೂರ್ಣಿತವಾರ್ಮಹಾರ್ಣವಃ=ಗಾಳಿಯಿಂದ ತಡೆಯಲ್ಪಟ್ಟು ಇತ್ತ ಅತ್ತ ಚಲಿಸುವ ನೀರುಳ್ಳ ಸಮುದ್ರವು ಪ್ರವೃಕ್ಷದ್ಭಿಃ ಅಂಬುದೈಃ=ಮಳೆ ಸುರಿಸುತ್ತಿರುವ ಮೋಡಗಳಿಂದ ದ್ವೀಪವರ್ಷಾದಿಭಿಃ ಸಮಂ=ದ್ವೀಪಗಳು ವರ್ಷಗಳಿಂದ ಸಹಿತವಾಗಿ ಅಪಿ= ಭೂಮಿಯನ್ನೂ ಸಹ ಅಧಾತ್=ಮುಳುಗಿಸಿತು. (ವರ್ಷದ್ವೀಪದ ಒಂದು ಭಾಗ, ಜಂಬೂದ್ವೀಪದ ೯ನೇ ಒಂದು ಭಾಗ ಭಾರತವರ್ಷ.)

**ಸಕ್ಷ್ಮಾಂತರಿಕ್ಷಂ ಸದಿವಂ ಸಭಾಂಗಣಂ**
**ತ್ರೈಲೋಕ್ಯಮಾಸೀತ್ ಸಹಸಾಽದ್ಭಿರಾಪ್ಲುತಮ್ ॥**
**ಸ ಏಕ ಏವೋರ್ವರಿತೋ ಮಹಾಮುನಿಃ**
**ಬಭ್ರಾಮ ವಿಕ್ಷಿಪ್ತಜಟೋ ಜಡಾಂಧವತ್** ॥ ೧೫ ॥

ಸಕ್ಷ್ಮಾಂತರಿಕ್ಷಂ=ಭೂಮಿ ಮತ್ತು ಅಂತರಿಕ್ಷದಿಂದ ಸಹಿತವಾದ ಸದಿವಂ=ಸ್ವರ್ಗ ಸಹಿತವಾದ ಸಭಾಂಗಣಂ=ನಕ್ಷತ್ರಗಳ ಸಮೂಹದಿಂದ ಸಹಿತವಾದ ತ್ರೈಲೋಕ್ಯಂ= ಮೂರೂ ಲೋಕವು ಸಹಸಾ=ಅತರ್ಕಿತವಾಗಿ ಅದ್ಭಿಃ ಆಪ್ಲುತಂ ಆಸೀತ್=ನೀರಿನಿಂದ ಮುಳುಗಿ ಹೋಯಿತು. ಸಃ ಏಕಃ ಏವ ಊರ್ವರಿತಃ=ಆ ಮಾರ್ಕಂಡೇಯನೊಬ್ಬನೇ ಉಳಿದನು. ಮಹಾಮುನಿಃ=ಮಹಾಜ್ಞಾನಿಯಾದ ಇವನು ವಿಕ್ಷಿಪ್ತಜಟಃ=ಜಟೆಯನ್ನು ಹರಿವಿಕೊಂಡು ಜಡಾಂಧವತ್=ಅಜ್ಞನಂತೆ, ಕುರುಡನಂತೆ ಬಭ್ರಾಮ=ತಿರುಗಿದನು.

**ಕ್ಷುತ್ತೃಟ್‌ಪರೀತೋ ಮಕರೈಸ್ತಿಮಿಂಗಲೈಃ**
**ಉಪದ್ರುತೋ ವೀಚಿನಭಸ್ವತಾ ಹೃತಃ ।**
**ತಮಸ್ಯಪಾರೇ ಪತಿತೋ ಭ್ರಮದ್ದಿಶೋ**
**ನ ವೇದ ಖಂ ಗಾಂ ಚ ಪರಿಶ್ರಮೋಷಿತಃ** ॥ ೧೬ ॥

ಕ್ಷುತ್‌ತೃಟ್‌ಪರೀತಃ=ಹಸಿವೆ ನೀರಡಿಕೆಗಳಿಂದ ಬಳಲಿದವನಾಗಿ ಮಕರೈಃ= ಮೊಸಳೆಗಳಿಂದ ತಿಮಿಂಗಿಲೈಃ=ತಿಮಿಂಗಿಲಗಳಿಂದ ಉಪದ್ರುತಃ=ತೊಂದರೆಗೀಡಾಗಿ ವೀಚಿನಭಸ್ವತಾ=ತರಂಗಗಳ ಗಾಳಿಯಿಂದ ಹೃತಃ=ಇತ್ತ ಅತ್ತ ಒಯ್ಯಲ್ಪಟ್ಟ ಅಪಾರೇ

ತಮಸಿ ಪತಿತಃ=ವಿಪುಲಾಂಧಕಾರದಲ್ಲಿ ಮುಳುಗಿದವನಾಗಿ ಭ್ರಮದ್ದಿಶಃ=ದಿಕ್ಕು ತೋಚದೆ ಖಂ ಗಾಂ ಚ=ಆಕಾಶ-ಭೂಮಿಯನ್ನೂ ನ ವೇದ=ತಿಳಿಯಲಿಲ್ಲ ಪರಿಶ್ರಮೋಷಿತಃ=ಬಹಳ ಕಷ್ಟದಿಂದ ವಾಸಿಸಿದರು.

**ವಿಶೇಷ-** ನೀರಿನಿಂದ ಪೂರ್ಣವಾದ ಸಮುದ್ರದಲ್ಲಿರುವಾಗ ನಿರಡಿಸಿದುದು ತಿಮಿಂಗಿಲಾದಿಗಳ ಭಯದಿಂದ ಬಾಯಿ ತೆರೆಯದೇ ಇರುವದರಿಂದ ಸಂಭಾವಿತವೇ ಆಗಿದೆ. ಹೆದರಿಕೆಯಿಂದ ನೀರು ಕುಡಿಯಲೂ ತೋಚಲಿಲ್ಲ.

**ಕ್ವಚಿನ್ಮಗ್ನೋ ಮಹಾವರ್ತೇ ತರಲೈಸ್ತಾಡಿತಃ ಕ್ವಚಿತ್ ।**
**ಯಾದೋಭಿರ್ಭಕ್ಷಿತಃ ಕ್ವಾಪಿ ಸ್ವಯಮನ್ಯೋನ್ಯಘಾತಿಭಿಃ ॥ ೧೭ ॥**

ಕ್ವಚಿತ್=ಕೆಲವೊಮ್ಮೆ ಮಹಾವರ್ತೇ=ದೊಡ್ಡದಾದ ನೀರಿನ ಸುಳಿಯಲ್ಲಿ ಮಗ್ನಃ=ಮುಳುಗುವನು ಕ್ವಚಿತ್=ಹಲವು ಸಲ ತರಲೈಃ=ತೆರೆಗಳಿಂದ ತಾಡಿತಃ=ಏಟಿಗೆ ಗುರಿಯಾಗುವನು ಸ್ವಯಂ=ತಾವು ಅನ್ಯೋನ್ಯಘಾತಿಭಿಃ=ಪರಸ್ಪರ ಹಿಂಸಿಸುವ ಸ್ವಭಾವವುಳ್ಳ ಯಾದೋಭಿಃ=ಜಲಚರ ಪ್ರಾಣಿಗಳಿಂದ ಭಕ್ಷ್ಯತೇ=ತಿನ್ನಲ್ಪಡುವನು.

**ಕ್ವಚಿಚ್ಛೋಕಂ ಕ್ವಚಿನ್ಮೋಹಂ ಕ್ವಚಿದ್ ದುಃಖಂ ಸುಖಂ ಭಯಮ್ ।**
**ಕ್ವಚಿನ್ಮೃತ್ಯುಮವಾಪ್ನೋತಿ ವ್ಯಾಧ್ಯಾದಿಭಿರುಪದ್ರುತಃ ॥ ೧೮ ॥**

ಕ್ವಚಿಚ್ಛೋಕಂ=ಕೆಲವು ಸಲ ಮನೋಗ್ಲಾನಿಯನ್ನು ಕ್ವಚಿನ್ಮೋಹಂ=ಮೂರ್ಛೆಯನ್ನು ಕ್ವಚಿದ್ ದುಃಖಂ=ದುಃಖವನ್ನು ಭಯಂ=ಭಯವನ್ನು ಕ್ವಚಿತ್ಸುಖಂ=ಮಧ್ಯದಲ್ಲಿ ದ್ವೀಪಗಳು ಹುಟ್ಟಿಕೊಂಡಾಗ ಸುಖಪಡುವನು ಕ್ವಚಿತ್=ಕೆಲವೊಮ್ಮೆ ವ್ಯಾಧ್ಯಾದಿಭಿಃ= ರೋಗಾದಿಗಳಿಂದ ಉಪದ್ರುತಃ=ತೊಂದರೆಗೀಡಾಗಿ ಮೃತ್ಯುಂ=ಮರಣವನ್ನು ಅವಾಪ್ನೋತಿ=ಹೊಂದಿದಂತಾಗುವನು.

**ಅಯುತಾಯುತವರ್ಷಾಣಾಂ ಸಹಸ್ರಾಣಿ ಶತಾನಿ ಚ ।**
**ವ್ಯತೀಯುರ್ಭ್ರಮತಸ್ತಸ್ಮಿನ್ ವಿಷ್ಣುಮಾಯಾವೃತಾತ್ಮನಃ ॥ ೧೯ ॥**

ವಿಷ್ಣುಮಾಯಾವೃತಾತ್ಮನಃ=ಶ್ರೀಹರಿಯ ಮೋಹಕಶಕ್ತಿಯಿಂದ ಆವರಿಸಲ್ಪಟ್ಟ ಮನಸ್ಸುಳ್ಳ ತಸ್ಮಿನ್=ಪ್ರಲಯೋದಕದಲ್ಲಿ(ಸಮುದ್ರದಲ್ಲಿ) ಭ್ರಮತಃ=ಸಂಚರಿಸುವ ಮುನಿಗೆ ಅಯುತಾಯುತವರ್ಷಾಣಾಂ ಸಹಸ್ರಾಣಿ ಶತಾನಿ ಚ=ಹತ್ತುಕೋಟಿಸಾವಿರದ ನೂರು ವರ್ಷಗಳು ವ್ಯತೀಯುಃ=ಕಳೆದವು.

**ಸ ಕದಾಚಿದ್ ಭ್ರಮಂಸ್ತಸ್ಮಿನ್ ಪೃಥಿವ್ಯಾಃ ಕಕುದಿ ದ್ವಿಜಃ ।**
**ನ್ಯಗ್ರೋಧಪೋತಂ ದದೃಶೇ ಫಲಪಲ್ಲವಶೋಭಿತಮ್ ॥ ೨೦ ॥**

ಸಃ ದ್ವಿಜಃ=ಆ ಮುನಿಯು ಕದಾಚಿತ್=ಒಂದು ಸಲ ತಸ್ಮಿನ್=ಪ್ರಲಯಜಲಧಿಯಲ್ಲಿ ಭ್ರಮನ್=ತಿರುಗುತ್ತ ಪೃಥಿವ್ಯಾಃ ಕಕುದಿ=ಭೂಮಿಯ ಎತ್ತರ ಪ್ರದೇಶದಲ್ಲಿ ಫಲಪಲ್ಲವ-ಶೋಭಿತಂ=ಚಿಗುರು ಹಣ್ಣುಗಳಿಂದ ಶೋಭಿಸುವ ನ್ಯಗ್ರೋಧಪೋತಂ=ಚಿಕ್ಕವಟ ವೃಕ್ಷವನ್ನು ದದೃಶೇ=ನೋಡಿದನು.

**ಪ್ರಾಗುತ್ತರಸ್ಯಾಂ ಶಾಖಾಯಾಂ ತಸ್ಯಾಪಿ ದದೃಶೇ ಶಿಶುಮ್ ।**
**ಶಯಾನಂ ಪರ್ಣಪುಟಕೇ ಗ್ರಸಂತಂ ಪ್ರಭಯಾ ತಮಃ ॥ ೨೧ ॥**

ತಸ್ಯ=ವಟವೃಕ್ಷದ ಪ್ರಾಗುತ್ತರಸ್ಯಾಂ ಶಾಖಾಯಾಂ=ಪೂರ್ವಕ್ಕೆ ಉದಯಿಸಿ ಉತ್ತರಕ್ಕೆ ಪಸರಿಸಿದ ಟೊಂಗೆಯಲ್ಲಿ ಪರ್ಣಪುಟಕೇ=ಎಲೆಯ ಮಧ್ಯದಲ್ಲಿ ಶಯಾನಂ=ಮಲಗಿರುವ ಪ್ರಭಯಾ=ತನ್ನ ಕಾಂತಿಯಿಂದ ತಮಃ ಗ್ರಸಂತಂ=ಕತ್ತಲೆಯನ್ನು ಅಪಹರಿಸುವ ಶಿಶುಂ=ಮಗುವನ್ನು ದದೃಶೇ=ನೋಡಿದನು.

*ಪುಟ್ಟ ಮಗುವನ್ನು ಕೆಲವು ಶ್ಲೋಕಗಳಿಂದ ಸ್ತುತಿಸುವರು.*

**ಮಹಾಮರಕತಶ್ಯಾಮಂ ಶ್ರೀಮದ್ವದನಪಂಕಜಮ್ ।**
**ಕಂಬುಗ್ರೀವಂ ಮಹೋರಸ್ಕಂ ಸುನಾಸಂ ಸುಂದರಭ್ರುವಮ್ ॥ ೨೨ ॥**

ಮಹಾಮರಕತಶ್ಯಾಮಂ=ಇಂದ್ರನೀಲಮಣಿಯಂತೆ ಶ್ಯಾಮವರ್ಣವುಳ್ಳ ಶ್ರೀಮದ್ವದನ ಪಂಕಜಂ=ಕಾಂತಿಯುತವಾದ ಮುಖಕಮಲವುಳ್ಳ ಕಂಬುಗ್ರೀವಂ=ಶಂಖದಂತಿರುವ ಕುತ್ತಿಗೆಯುಳ್ಳ ಮಹೋರಸ್ಕಂ=ಎತ್ತರವಾದ ಭುಜಗಳುಳ್ಳ ಸುನಾಸಂ=ನೀಟಾದ ಮೂಗುಳ್ಳ ಸುಂದರಭ್ರುವಂ=ಅಂದವಾದ ಹುಬ್ಬುಗಳುಳ್ಳ

**ಶ್ವಾಸೈಜದಲಕವ್ರಾತಮಿಶ್ರಶ್ರೀಕರ್ಣದಾಡಿಮಮ್ ।**
**ವಿದ್ರುಮಾಧರಭಾಸೇಷಚ್ಛೋಣಾಯಿತಸುಧಾಸ್ಮಿತಮ್ ॥ ೨೩ ॥**

ಶ್ವಾಸೈಜದಲಕವ್ರಾತಮಿಶ್ರಶ್ರೀಕರ್ಣದಾಡಿಮಮ್=ತನ್ನ ಮುಖದ ಗಾಳಿಯಿಂದ ಚಲಿಸುವ ಗುಂಗುರು ಕೂದಲುಗಳ ಸಮೂಹದಿಂದ ಕೂಡಿದ ಶೊಭಾಯುತವಾದ ಕಿವಿಯ ಆಭರಣಉಳ್ಳ(ಕಿವಿಗಳಲ್ಲಿ ಮಾದಾಳ ಹೂವನ್ನಿರಿಸಿದ) ವಿದ್ರುಮಾಧರ ಭಾಸೇಷಚ್ಛೋಣಾಯಿತಸುಧಾಸ್ಮಿತಮ್=ಹವಳದಂತಿರುವ ತುಟಿಯ ಕಾಂತಿಯಿಂದ ಸಲ್ಪ ಕೆಂಪಾದ ಅಮೃತದಂತೆ ಶುಭ್ರವಾದ ಮಂದಹಾಸವುಳ್ಳ

**ಪದ್ಮಗರ್ಭಾರುಣಾಪಾಂಗಂ ಹೃದ್ಯಹಾಸಾವಲೋಕನಮ್ ।**
**ಶ್ವಾಸೈಜದ್ವಲಿಸಂವಿಗ್ನನಿಮ್ನನಾಭಿಚಲೋದರಮ್ ॥ ೨೪ ॥**

ಪದ್ಮಗರ್ಭಾರುಣಾಪಾಂಗಂ=ಕಮಲದ ಒಳಭಾಗದಂತೆ ಕೆಂಪಾದ ಕಣ್ಣಿನ ತುದಿಯ ಭಾಗವುಳ್ಳ ಹೃದ್ಯಹಾಸಾವಲೋಕನಂ=ಮನೋಹರವಾದ ಮಂದಹಾಸದಿಂದ ಕೂಡಿದ ನೋಟವುಳ್ಳ ಶ್ವಾಸೈಜದ್ವಲಿಸಂವಿಗ್ನನಿಮ್ನನಾಭಿಚಲೋದರಂ=ಮುಖವಾಯುವಿನಿಂದ ಚಲಿಸಿದ ಮೂರು ಗೆರೆಗಳಿಂದ ಸಂಬದ್ಧವಾದ ತೆಗ್ಗಾದ ಹೊಕ್ಕಳುಳ್ಳ ಸೂಕ್ಷ್ಮ-ವಾದುದರಿಂದ ಚಲಿಸುವ ಹೊಟ್ಟೆಯುಳ್ಳ

**ಚಾರ್ವಂಗುಲಿಭ್ಯಾಂ ಪಾಣಿಭ್ಯಾಮುನ್ನೀಯ ಚರಣಾಂಬುಜಮ್ ।**
**ಮುಖೇ ನಿಧಾಯ ವಿಪ್ರೇಂದ್ರ ಧಯಂತಂ ವೀಕ್ಷ್ಯ ವಿಸ್ಮಿತಃ ॥ ೨೫ ॥**

(ವಿಪ್ರೇಂದ್ರ=ಶೌನಕರೇ)ವಿಪ್ರೇಂದ್ರಃ=ಮಾರ್ಕಂಡೇಯನು ಚಾರ್ವಂಗುಲಿಭ್ಯಾಂ=ಸುಂದರವಾದ ಬೆರಳುಗಳುಳ್ಳ ಪಾಣಿಭ್ಯಾಂ=ಕೈಗಳಿಂದ ಚರಣಾಂಬುಜಂ=ಪಾದಕಮಲವನ್ನು ಉನ್ನೀಯ=ಮೇಲೆತ್ತಿ ಮುಖೇ ನಿಧಾಯ=ಬಾಯಿಯಲ್ಲಿ ಇಟ್ಟುಕೊಂಡು ಧಯಂತಂ=ಚೀಪುತ್ತಿರುವದನ್ನು ವೀಕ್ಷ್ಯ=ನೋಡಿ ವಿಸ್ಮಿತಃ=ಆಶ್ಚರ್ಯಗೊಂಡನು.

**ತದ್ದರ್ಶನಾದ್ ವೀತಪರಿಶ್ರಮೋ ಮುದಾ**
**ಪ್ರೋತ್ಫುಲ್ಲಹೃತ್ಪದ್ಮವಿಲೋಚನಾಂಬುಜಃ ।**
**ಪ್ರಹೃಷ್ಟರೋಮಾದ್ಭುತಭಾವಶಂಕಿತಃ**
**ಪ್ರಷ್ಟುಂ ಪುರಸ್ತಂ ಪ್ರಸಸಾರ ಬಾಲಕಮ್ ॥ ೨೬ ॥**

ತದ್ದರ್ಶನಾತ್=ಆ ಬಾಲಕನನ್ನು ನೋಡುದರಿಂದ ವೀತಪರಿಶ್ರಮಃ=ಶ್ರಮವನ್ನು ಕಳೆದುಕೊಂಡವನಾಗಿ ಮುದಾ=ಸಂತೋಷದಿಂದ ಪ್ರೋತ್ಫುಲ್ಲಹೃತ್ಪದ್ಮವಿಲೋಚ-ನಾಂಬುಜ=ವಿಕಸಿತಗಳಾದ ಹೃದಯಕಮಲ ಹಾಗು ಕಮಲದಂತಿರುವ ಕಣ್ಣುಳ್ಳ ಪ್ರಹೃಷ್ಟರೋಮಾದ್ಭುತಭಾವಶಂಕಿತಃ=ರೋಮಾಂಚಕಿತನಾದ ಅದ್ಭುತತ್ವಶಂಕೆಯಿಂದ (ಹಿಂದೆಂದು ತಾನು ನೋಡದ ವಸ್ತುವಾಗಿದ್ದರಿಂದ)ತಂ=ಬಾಲಕನನ್ನು ಪ್ರಷ್ಟುಂ=ನೀನಾರೆಂದು ಕೇಳಲು ಪುರಃ=ಮುಂದೆ ಪ್ರಸಸಾರ=ಬಂದನು.

**ತಾವಚ್ಛಿಶೋರ್ವೈ ಶ್ವಸಿತೇನ ಭಾರ್ಗವಃ**
**ಸೋಽಂತಃ ಶರೀರಂ ಮಶಕೋಯಥಾಽವಿಶತ್**

**ತತ್ರಾಪ್ಯದೋ ನ್ಯಸ್ತ ಮಚಷ್ಟ ಕೃತ್ಸ್ನಶೋ**
**ಯಥಾ ಪುರಾಽಮುಹ್ಯದತೀವ ವಿಸ್ಮಿತಃ** ॥ ೨೭ ॥

ತಾವತ್=ಅಷ್ಟರಲ್ಲಿ ಶಿಶೋಃ=ಬಾಲಕನ ಶ್ವಸಿತೇನ=ತತ್ಕಾಲದಲ್ಲಿ ಸೃಷ್ಟಿಸಿದ ಶ್ವಾಸಗಾಳಿಯಿಂದ ಸಃ ಭಾರ್ಗವಃ=ಆ ಮಾರ್ಕಂಡೇಯನು ಯಥಾ ಮಶಕಃ= ನೊರಜಿನಂತೆ ಅಂತಃಶರೀರಂ ಆವಿಶತ್=ದೇಹದಲ್ಲಿ ಪ್ರವೇಶಿಸಿದನು. ತತ್ರಾಪಿ=ಆ ಶರೀರದಲ್ಲಿಯೂ ಕೃತ್ಸ್ನಶಃ=ಸಂಪೂರ್ಣವಾಗಿ ನ್ಯಸ್ತಂ=ಇರುವ ಅದಃ=ಪ್ರಪಂಚವನ್ನು ಅಚಷ್ಟ=ನೋಡಿದನು ಪುರಾ ಯಥಾ=ಹೊರಗಿರುವಾಗ ಹೇಗೋ ಹಾಗೆ ಅತೀವ ವಿಸ್ಮಿತಃ=ಬಹಳ ಆಶ್ಚರ್ಯಪಟ್ಟು ಅಮುಹ್ಯತ್=ಮೋಹಗೊಂಡನು.

**ವಿಶೇಷ-** ಇಲ್ಲಿ ಮೋಹವೆಂದರೆ ವಿಮನಸ್ಕತೆ ಆಶ್ಚರ್ಯಬುದ್ಧಿ ಎಂದರ್ಥವೇ ಹೊರತು ಅನ್ಯಥಾಜ್ಞಾನವಲ್ಲ. ಇಲ್ಲವಾದರೆ ಇಷ್ಟು ದಿನ ಮಾಡಿದ ಪುಣ್ಯ ವ್ಯರ್ಥವಾಗಬೇಕಾಗುವುದು.

**ಖಂ ರೋದಸೀ ಭಗಣಾನದ್ರಿಸಾಗರಾನ್**
**ದ್ವೀಪಾನ್ ಸವರ್ಷಾನ್ ಕಕುಭಃ ಸುರಾಸುರಾನ್ ।**
**ವನಾನಿ ದೇಶಾನ್ ಸರಿತಃ ಪುರಾಕರಾನ್**
**ಖೇಟಾನ್ ವ್ರಜಾನಾಶ್ರಮವರ್ಣವೃತ್ತಯಃ** ॥ ೨೮ ॥

ಖಂ=ಆಕಾಶವನ್ನು ರೋದಸೀ=ದ್ಯಾವಾಪೃಥಿವಿಗಳನ್ನು ಭಗಣಾನ್=ನಕ್ಷತ್ರ ಸಮೂಹಗಳನ್ನು ಅದ್ರಿಸಾಗರಾನ್=ಪರ್ವತಗಳು ಮತ್ತು ಸಮುದ್ರಗಳನ್ನು ದ್ವೀಪಾನ್ ಸವರ್ಷಾನ್=ಖಂಡಗಳಿಂದ ಸಹಿತವಾದ ದ್ವೀಪಗಳನ್ನು ಕಕುಭಃ=ದಿಕ್ಕುಗಳನ್ನು ಸುರಾಸುರಾನ್=ದೇವದೈತ್ಯರನ್ನು ವನಾನಿ=ಅಡವಿಗಳನ್ನು ದೇಶಾನ್=ದೇಶಗಳನ್ನು ಸರಿತಃ=ನದಿಗಳನ್ನು ಪುರಾಕರಾನ್=ಪಟ್ಟಣಗಳನ್ನು ಮತ್ತು ಖನಿಗಳನ್ನು(ಗಣಿ) ಖೇಟಾನ್=ಹಳ್ಳಿಗಳನ್ನು ಆಶ್ರಮವರ್ಣವೃತ್ತಯಃ=ಬ್ರಹ್ಮಚರ್ಯಾದ್ಯಾಶ್ರಮಗಳು ಬ್ರಾಹ್ಮಣಾದಿವರ್ಣಗಳು ಅವುಗಳಿಗೆ ವಿಹಿತವಾದ ಜೀವಿಕೆಗಳನ್ನೂ

**ಮಹಾಂತಿ ಭೂತಾನ್ಯಥ ಭೌತಿಕಾನ್ಯಸೌ**
**ಕಾಲಂ ಚ ನಾನಾಯುಗಕಲ್ಪಕಲ್ಪನಮ್ ।**
**ಯತ್ಕಿಂಚಿದನ್ಯದ್ವ್ಯವಹಾರಕಾರಣಂ**
**ದದರ್ಶ ವಿಶ್ವಂ ಸದಿವಾವಭಾಸಿತಮ್** ॥ ೨೯ ॥

ಮಹಾಂತಿ ಭೂತಾನಿ=ಪಂಚಮಹಾಭೂತಗಳನ್ನು ಅಥ=ಮತ್ತು ಭೌತಿಕಾನಿ= ಭೂತಕಾರ್ಯವಾದ ವಸ್ತುಗಳನ್ನು ನಾನಾಯುಗಕಲ್ಪಕಲ್ಪನಂ=ಅನೇಕ ಯುಗಗಳ ಕಲ್ಪಗಳ ಕಲ್ಪನೆಗೆ ಕಾರಣವಾದ ಕಾಲಂ=ಕಾಲವನ್ನು ವ್ಯವಹಾರಕಾರಣಂ=ಪ್ರವೃತ್ತಿ ನಿವೃತ್ತಿಗೆ ಕಾರಣವಾದ ಹಾನೋಪಾದಾನ ಸಮರ್ಥವಾದ(ಸ್ವೀಕಾರ ಮಾಡುವುದು ಬಿಡುವುದಕ್ಕೆ ಉಪಯುಕ್ತವಾದ) ಯತ್ಕಿಂಚಿದನ್ಯತ್=ಏನೇನಿದೆಯೋ ಆ ಎಲ್ಲ ವಿಶ್ವಂ=ಜಗತ್ತನ್ನು ಸದಿವಾವಭಾಸಿತಂ=ಸತ್ಯವಾಗಿಯೇ ಕಾಣಿಸಿದ ವಿಶ್ವಂ=ಜಗತ್ತನ್ನು ದದರ್ಶ=ನೋಡಿದನು. (ಅಥವಾ ಅವಭಾಸಿತಂ ಸದೇವ=ತೋರಿದ್ದು ಸತ್ಯವೇ ಎಂದು ಅರ್ಥ. ಇವ ಶಬ್ದ ಏವ ಎಂಬರ್ಥದಲ್ಲಿದೆ.) 'ಸದಿವೋದರೇ ಚ ತತ್' ಎಂದು ಪಾಠವಿದ್ದಾಗ ಉದ್ಗತದೋಷೇ=ದೋಷರಹಿತವಾದ ಉದರೇ=ಹೊಟ್ಟೆಯಲ್ಲಿ ತದ್ವಿಶ್ವಂ ದದರ್ಶ= ಪ್ರಸಿದ್ಧವಾದ ಪ್ರಪಂಚವನ್ನು ಕಂಡನು.

**ವಿಶೇಷ-** ಮೊದಲನೇಯ ಪಾಠದಲ್ಲಿಯೇ ಇನ್ನೊಂದು ಅರ್ಥವನ್ನು ಹೀಗೆ ಕಾಣಬಹುದು. ಸಃ ದಿವಾ, ವಾ, ಭಾಸಿತಂ ಎಂದು ಪದಗಳನ್ನು ವಿಭಜಿಸಿಕೊಂಡು ಸಃ=ಮುನಿಯು ದಿವಾ (ವಾ ಇವ ಎಂದರ್ಥ)ವಾ=ಹಗಲಿನಲ್ಲಿ ತೋರಿದಂತೆ ಭಾಸಿತಂ=ತೋರಿದ್ದನ್ನು ದದರ್ಶ=ನೋಡಿದನು. ಸ್ಪಷ್ಟವಾಗಿ ನೋಡಿದನೆಂದರ್ಥ. (ಸ ದಿವಾಹನೀ ವಾ ಇವ ಭಾಸಿತಂ ದದರ್ಶ ಹೀಗಿರಬೇಕು ಸತ್ಯಧರ್ಮರ ಪಂಕ್ತಿ.) ಈ ರೀತಿ ಪದವ್ಯಾಖ್ಯಾನವನ್ನು ನೋಡಿದರೆ ಸತ್ಯಧರ್ಮತೀರ್ಥರ ಪಂಕ್ತಿಯು ಹೀಗಿರಬಹುದು 'ಸ ದಿವಾ ವಾ ಭಾಸಿತಂ ದದರ್ಶ' ಎಂದು.

*ಉದರದಲ್ಲಿ ಏನಿತ್ತೋ ಅದನ್ನು ಕುತೂಹಲದಿಂದ ನೋಡುತ್ತ ಅಲ್ಲಿಯೇ ನಿಂತನು. ಇದೇನು ಮಹಾ ಎಂದರೆ ಹೇಳುವರು.*

**ಹಿಮಾಲಯಂ ಪುಷ್ಪವಹಾಂ ಚ ತಾಂ ನದೀಂ ನಿಜಾಶ್ರಮಂ ಯತ್ರ ಋಷೀನಪಶ್ಯತ್ ।**
**ವಿಶ್ವಂ ವಿಪಶ್ಯನ್ ಶ್ವಸತಃ ಶಿಶೋರ್ವೈ ಬಹಿರ್ನಿರಸ್ತೋ ನ್ಯಪತಲ್ಲಯಾಬ್ಧೌ ॥ ೩೦ ॥**

ಹಿಮಾಲಯಂ=ಹಿಮವತ್ಪರ್ವತವನ್ನು ಪುಷ್ಪವಹಾಂ ತಾಂ ನದೀಂ=ತನ್ನ ಆಶ್ರಮದ ಹತ್ತಿರ ಹರಿಯುವ ಪುಷ್ಪಭದ್ರಾ ನದಿಯನ್ನೂ(ಪುಷ್ಪವಹಾ ಎಂದು ನಾಮಾಂತರ) ಯತ್ರ=ಎಲ್ಲಿ ಋಷಿಗಳಿದ್ದರೋ ಅಂಥ ನಿಜಾಶ್ರಮಂ=ತನ್ನ ಆಶ್ರಮವನ್ನು ಋಷೀನ್= ಋಷಿಗಳನ್ನೂ ಅಪಶ್ಯತ್=ನೋಡಿದನು. ಈ ರೀತಿ ವಿಶ್ವಂ=ಪ್ರಪಂಚವನ್ನು ವಿಪಶ್ಯನ್= ನೋಡುತ್ತ ಶಿಶೋಃ=ಮಗುವಿನ ಶ್ವಸತಃ=ನಿಶ್ವಾಸದಿಂದ ಬಹಿರ್ನಿರಸ್ತಃ=ಹೊರಗೆ ಹಾಕಲ್ಪಟ್ಟು ಲಯಾಬ್ಧೌ=ಪ್ರಲಯ ಸಮುದ್ರದಲ್ಲಿ ನ್ಯಪತತ್=ಬಿದ್ದನು.

**ತಸ್ಮಿನ್ ಪೃಥಿವ್ಯಾಃ ಕಕುದಿ ಪ್ರರೂಢಂ ವಟಂ ಚ ತತ್ಪತ್ರಪುಟೇ ಶಯಾನಮ್।**
**ತೋಕಂ ಚ ತತ್ಪ್ರೇಮಸುಧಾಸ್ಮಿತೇನ ನಿರೀಕ್ಷಿತೋಽಪಾಂಗನಿರೀಕ್ಷಣೇನ ॥ ೩೦ ॥**

ತಸ್ಮಿನ್=ಆ ಪೃಥಿವ್ಯಾಃ ಕಕುದಿ=ಭೂಮಿಯ ಎತ್ತರ ಪ್ರದೇಶದಲ್ಲಿ ಪ್ರರೂಢಂ=ಬಹಳ ವಿಸ್ತಾರವಾದ ವಟಂ=ಆಲದ ಮರವನ್ನು ತತ್ಪತ್ರಪುಟೇ=ಅದರ ಎಲೆಯ ಮಧ್ಯದಲ್ಲಿ ಶಯಾನಂ=ಮಲಗಿರುವ ತೋಕಂ=ಶಿಶುವನ್ನು ದದರ್ಶ=ನೋಡಿದನು. ತತ್ಪ್ರೇಮ-ಸುಧಾಸ್ಮಿತೇನ=ಆ ಮಗುವಿನ ಪ್ರೇಮಾಮೃತದಿಂದ ಕೂಡಿದ ಮಂದಹಾಸಯುತವಾದ ಅಪಾಂಗನಿರೀಕ್ಷಣೇನ=ಕಡೆಗಣ್ಣ ನೋಟದಿಂದ ನಿರೀಕ್ಷಿತಃ=ನೋಡಲ್ಪಟ್ಟನು.

**ಅಥ ತಂ ಬಾಲಕಂ ವೀಕ್ಷ್ಯ ನೇತ್ರಾಭ್ಯಾಂ ಧಿಷ್ಠಿತಂ ಹೃದಿ।**
**ಅಭ್ಯಗಾದತಿಸಂಹೃಷ್ಟಃ ಪರಿಷ್ವಕ್ತುಮಧೋಕ್ಷಜಮ್ ॥ ೩೧ ॥**

ಅಥ=ನಂತರ ತಂ ಬಾಲಕಂ=ಆ ಶಿಶುವನ್ನು ನೇತ್ರಾಭ್ಯಾಂ=ಕಣ್ಣುಗಳಿಂದ ವೀಕ್ಷ್ಯ=ನೋಡಿ ಹೃದಿ ಧಿಷ್ಠಿತಂ=ಹೃದಯದಲ್ಲಿ ನೆಲೆಸಿರುವ ಅಧೋಕ್ಷಜಂ=ಭಗವಂತನನ್ನು ಪರಿಷ್ವಕ್ತುಂ=ಆಲಿಂಗಿಸಲು ಅತಿಸಂಹೃಷ್ಟಃ=ಅತ್ಯಂತ ಸಂತೋಷದಿಂದ ಅಭ್ಯಗಾತ್=ಹೊರಟನು.

**ವಿಶೇಷ-** ಅಧೋಕ್ಷಜ ಎಂದದ್ದರಿಂದ ಇಂದ್ರಿಯಗಳಿಗೆ ಗೋಚರನಲ್ಲದ ಭಗವಂತನನ್ನು ಆಲಿಂಗಿಸುವುದೆಂತು? ಎಂದು ಅಪಹಾಸ ಮಾಡಿದುದು ಸೂಚಿತವಾಗುವುದು.

**ತಾವತ್ ಸ ಭಗವಾನ್ ಸಾಕ್ಷಾದ್ ಯೋಗಾಧೀಶೋ ಗುಹಾಶಯಃ।**
**ಅಂತರ್ದಧೇ ಋಷೇಃ ಸದ್ಯೋ ಯಥೇಹಾನೀಶನಿರ್ಮಿತಾ ॥ ೩೨ ॥**

ಗುಹಾಶಯಃ=ಹೃದಯಗುಹಾದಲ್ಲಿರುವ ಯೋಗಾಧೀಶಃ=ಸರ್ವೋಪಾಯಗಳಿಗೆ ನಿಯಾಮಕನಾದ ಸಾಕ್ಷಾತ್ ಭಗವಾನ್=ಶ್ರೀಹರಿಯು ಯಥಾ=ಹೇಗೆ ಅನೀಶನಿರ್ಮಿತಾ=ಅಸಮರ್ಥನಿಂದ ಸೃಷ್ಟಿಸಲ್ಪಟ್ಟ ಈಹಾ=ಇಂದ್ರಜಾಲಿಕ ಪದಾರ್ಥಗಳು ಅದೃಶ್ಯ-ವಾಗುವವೋ ಹಾಗೆ ತಾವತ್=ಮುನಿಯು ಆಲಿಂಗಿಸುವ ಮುಂಚೆಯೇ ಸದ್ಯಃ=ತಕ್ಷಣದಲ್ಲಿ ಋಷೇಃ=ಮುನಿಗೆ ಅಂತರ್ದಧೇ=ಕಾಣದಾದನು.

**ತಮನ್ವಥ ವಟೋ ಬ್ರಹನ್ ಸಲಿಲಂ ಲೋಕಸಂಪ್ಲವಮ್।**
**ತಿರೋಧಾಯಿ ಕ್ಷಣಾದಸ್ಯ ಸ್ವಾಶ್ರಮೇ ಪೂರ್ವವತ್‌ಸ್ಥಿತಃ ॥ ೩೪ ॥**

ತಂ ಅನು=ಬಾಲಕನು ಅದೃಶ್ಯನಾಗುತ್ತಿರಲು ಹಿಂದೆಯೇ ವಟಃ=ವಟವೃಕ್ಷವು ಲೋಕ ಸಂಪ್ಲವಂ=ಜಗತ್ತನ್ನೇ ಮುಳಿಗಿಸಿದ ಸಲಿಲಂ=ನೀರು ಕ್ಷಣಾತ್=ಒಂದೇ ಕ್ಷಣದಲ್ಲಿ ಅಸ್ಯ=ಈ ಮುನಿಗೆ ತಿರೋಧಾಯಿ=ಕಾಣದಾದವು ಸ್ವಾಶ್ರಮೇ=ತನ್ನ ಆಶ್ರಮದಲ್ಲಿ ಪೂರ್ವವತ್‌ಸ್ಥಿತಃ=ಮೊದಲಿನಂತೆ ಕುಳಿತಿದ್ದನು.

**ವಿಶೇಷ-** ಈ ಪ್ರಲಯದ ಸೃಷ್ಟಿಯು ಪ್ರಕೃತಿಯ ಸೂಕ್ಷ್ಮ ಉಪಾದಾನದಿಂದ ಭಗವದಿಚ್ಛೆಯನ್ನು ನಿಮಿತ್ತಮಾಡಿಕೊಂಡು ತಪಸ್ಸಿನ ಫಲರೂಪವಾಗಿ ಆಗುತ್ತದೆ. ಇದು ಸತ್ಯವಾದುದು ಎಂದು ತಿಳಿಯಬೇಕು. ಈ ವಿಷಯವನ್ನು ಮಹಾಭಾರತ ಹೀಗೆ ಹೇಳಿದೆ. 'ಪ್ರಭಾವಂ ಪದ್ಮನಾಭಸ್ಯ ಸ್ವಪತಃ ಸಾಗರಾಂಭಸಿ । ಪುಷ್ಕರೇ ವೈ ಯಥೋದ್ಭೂತಾ ದೇವಾ ಸರ್ಷಿಗಣಾಃ' ಎಂದಾರಂಭಿಸಿ 'ಭಗವನ್ ವಕ್ತುಮರ್ಹಸಿ' ಎನ್ನುವವರೆಗೆ ಜನಮೇಜಯ ಮಾಡಿದ ಪ್ರಶ್ನೆ ಹಾಗೂ 'ನಾರಾಯಣಯಶಃ' ಎಂದಾರಂಭಿಸಿ ಶ್ರೀಭಗವಾನುವಾಚ 'ಮಾಭೈರ್ವತ್ಸ ನ ಭೇತ್ತವ್ಯಂ ಇಹೈವಾಯಾಹಿ ಭೌತಿಕಮ್ । ಮಾರ್ಕಂಡೇಯ ಮಹಾಪ್ರಾಜ್ಞ ಬಾಲಸ್ತ್ವಂ ಶಮಪೀಡಿತಃ । ಎಂದಾಗ ಮಾರ್ಕಂಡೇಯನು ಕುಮಾರನಾಮ್ನಾ ಪೀಡಯತಿ ತಪಃ ಪರಿಭವನ್ಮಮ । ಬಹುವರ್ಷಸಹಸ್ರಾಖ್ಯಂ ಧರ್ಷಯಶ್ಚೈವಮೇವ ಯಃ । ನಹ್ಯೇಷ ಸಮುದಾಚಾರೋ ದೇವೇಷ್ವಪಿ ಸಮಾಹಿತಃ । ಮಾಂ ಬ್ರಹ್ಮಾಪಿ ಸವಿಶ್ವೇಶೋ ದೀರ್ಘಾಯುರಿತಿ ಭಾಷತೇ । ಕಸ್ತಪೋ ಘೋರಶಿರಸೋ ಮಮಾದ್ಯತ್ಯಕ್ತಜೀವಿತಃ । ಮಾರ್ಕಾಂಡೇಯೇತಿ ಮಾಂ ಪ್ರೋಕ್ತ್ವಾ ಮೃತ್ಯುಮೀಕ್ಷಿತುಮಿಚ್ಛತಿ । ಏವಮಾಭಾಷಿತೇ ಕ್ರೋಧಾತ್ ಮಾರ್ಕಂಡೇಯೋ ಮಹಾಮುನಿಃ । ತಥೈವ ಭಗವಾನ್ ಭೂಯಃ ಬಭಾಷೇ ತತ್ಪರಾಯಣಮ್ ।

ಶ್ರೀಭಗವಾನುವಾಚ - ಅಹಂ ತೇ ಜನಕೋ ವತ್ಸ ಹೃಷಿಕೇಶಃ ಪಿತಾಃ ಗುರುಃ । ಆಯುಃಪ್ರದಾತಾಃ'' ಮುಂತಾಗಿ ಹರಿವಂಶದಲ್ಲಿ ಹೇಳಿದ ನಾಭಿಪದ್ಮದಿಂದ ಪದ್ಮಸೃಷ್ಟಿ. ಅದರಲ್ಲಿ ಜಗತ್ಸೃಷ್ಟಿಯನ್ನು ಅನುಸಂಧಾನ ಮಾಡಬೇಕು. ಹಾಗೂ ವನಪರ್ವದಲ್ಲೂ ಧರ್ಮರಾಜನು ಮಾರ್ಕಂಡೇಯರನ್ನು ಕೇಳಿದಾಗ ತಾವು ನೋಡಿದ್ದನ್ನೆಲ್ಲ ಹೇಳಿ ಅವನೇ ಈ ಶ್ರೀಕೃಷ್ಣ ಇವನನ್ನು ಶರಣು ಹೋಗು ಎಂದು ಆಜ್ಞೆಮಾಡುತ್ತಾರೆ. ಇದನ್ನು ತಿಳಿದಾಗ ಈ ಮಾರ್ಕಂಡೇಯರ ಕಥಾ ಭಗವನ್ಮಹಿಮಾ ಉತ್ತೇಜಕವೆಂದು ತಿಳಿಯುವದು ಅದಕ್ಕಾಗಿ ಹೇಳಿರುವರು.

॥ ಇಲ್ಲಿಗೆ ಎಂಟನೇ ಅಧ್ಯಾಯವು ಸಮಾಪ್ತವಾಯಿತು ॥

# ಅಥ ನವಮೋಽಧ್ಯಾಯಃ

**ಸಾರಾಂಶ**

ಮಾರ್ಕಂಡೇಯರು ಶ್ರೀಹರಿಯ ಸ್ವರೂಪಶಕ್ತಿಯನ್ನು ಕಣ್ಣಾರೆ ಕಂಡು ಆ ಶ್ರೀ ಹರಿಯನ್ನೇ ಮೊರೆ ಹೋದರು. ಮಾರ್ಕಂಡೇಯರು ಆಚರಿಸಿದ ಘೋರವಾದ ತಪಸ್ಸನ್ನು ರುದ್ರದೇವರು ಚೆನ್ನಾಗಿ ಗಮನಿಸಿದರು. ನಂತರ ಪಾರ್ವತೀದೇವಿಯು ಆ ಮುನಿಯನ್ನು ನೋಡಿ ರುದ್ರದೇವರನ್ನು ಕುರಿತು 'ವರ್ಷಾಕಾಲದಲ್ಲಿ ಸಮುದ್ರವು ಹೇಗೆ ಪೂರ್ಣವಾಗಿರುವುದೋ ಹಾಗೆ ಮಾರ್ಕಂಡೇಯನು ಪೂರ್ಣನಷ್ಟೇ. ಫಲಪ್ರದನಾದ ನೀನು ಈ ಮುನಿಯ ತಪಸ್ಸಿಗೆ ಸರಿಯಾದ ಫಲವನ್ನು ಕೊಡು' ಎಂದಳು.

ನಾಶರಹಿತನಾದ ಸರ್ವಶರೀರಾಂತರ್ಗತನಾದ ಶ್ರೀಹರಿಯಲ್ಲಿ ಯಾವ ಕಾರಣ ಉತ್ತಮವಾದ ಭಕ್ತಿಯನ್ನು ಪಡೆದಿರುವನೋ ಆ ಕಾರಣ ಬ್ರಹ್ಮಜ್ಞಾನಿಯಾದ ಮುನಿಯು ಮೋಕ್ಷವನ್ನೂ ಅಪೇಕ್ಷಿಸುವುದಿಲ್ಲ. ಕಿಮುತ ಮಿಕ್ಕ ಐಹಿಕ ಕಾಮನೆಗಳನ್ನು ಇಚ್ಛಿಸುವುದಿಲ್ಲವೆಂದು ಬೇರೆ ಹೇಳಬೇಕೇ.

ಅವರು ನಿಸ್ಪೃಹರು ಹಾಗಿದ್ದರೂ ಅವರ ಜೊತೆಗೆ ಸ್ವಲ್ಪ ಮಾತನಾಡೋಣ. ಎಂದು ರುದ್ರದೇವರು ಮಾರ್ಕಂಡೇಯರನ್ನು ಸಮೀಪಿಸಿದರು. ಮುನಿಯು ಜಗನ್ನಿಯಾಮಕರಾದ ಶಿವ ಪಾರ್ವತಿಯರು ಬಂದದ್ದನ್ನು ತಿಳಿಯಲಿಲ್ಲ. ಪೂಜ್ಯರಾದ ರುದ್ರದೇವರು ಅಣಿಮಾದಿ ಸಾಮರ್ಥ್ಯದಿಂದ ಅವನು ಸಮಾಧಿಸ್ಥನಾದುದನ್ನರಿತು ಗಾಳಿಯು ರೋಮಕೂಪಗಳಲ್ಲಿ ಪ್ರವೇಶಿಸುವಂತೆ ಹೃದಯಾಕಾಶದಲ್ಲಿ ಪ್ರವೇಶಿಸಿದನು.

ಹೊರಗೆ ಮಾತ್ರವಲ್ಲ ತನ್ನ ಹೃದಯದಲ್ಲಿಯೂ ಬಂದಿರುವ ಮಿಂಚಿನಂತೆ ಬಣ್ಣವುಳ್ಳ ಜಟೆಯನ್ನು ಧರಿಸಿದ ಮೂರು ಕಣ್ಣುಗಳುಳ್ಳ ಎಂಟು ಕೈಗಳುಳ್ಳ ಉದಯಿಸುವ ಸೂರ್ಯನಂತಿರುವ ಮಂಗಳಕರನಾದ ರುದ್ರದೇವರನ್ನು ಹೃದಯದಲ್ಲಿ ನೋಡಿದನು.

ಆಶ್ಚರ್ಯಚಕಿತನಾದನು. ಪಾರ್ವತಿಸಹಿತನಾಗಿ ಬಂದಿರುವ ಮೂರು ಲೋಕಕ್ಕೆ ಮುಖ್ಯ ಗುರುವಾದ ರುದ್ರದೇವರನ್ನು ತಲೆಬಾಗಿ ನಮಸ್ಕರಿಸಿದನು. ಪಾರ್ವತಿ ಸಹಿತರಾದ ರುದ್ರದೇವರಿಗೆ ಸ್ವಾಗತವನ್ನು ಮಾಡಿ ಆಸನವನ್ನಿತ್ತು ಪಾದವನ್ನು ತೊಳೆದು ಅರ್ಘ್ಯವನ್ನಿತ್ತು ಗಂಧವನ್ನು ಹಚ್ಚಿ ಮಾಲಿಯನ್ನು ಹಾಕಿ ಧೂಪ-ಮಂಗಳಾರತಿಯನ್ನು ಮಾಡಿ ಪೂಜೆಯನ್ನು ಮಾಡಿದನು. ಪೂಜ್ಯರಾದ ಮಹರುದ್ರದೇವರು ಸಂತುಷ್ಟರಾಗಿ ಪ್ರಫುಲ್ಲಮನಸ್ಸಿನಿಂದ ನಗುತ್ತ ಅವನನ್ನು ಕುರಿತು ಮಾತನಾಡಿದರು. ಯಾವ ನಮ್ಮ ದರ್ಶನದಿಂದ ಮರಣಶೀಲನಾದ ಮನುಷ್ಯನು ಮುಕ್ತಿಯನ್ನು ಪಡೆಯುವನು ಅಂತಹ ನಮ್ಮ ದೆಶೆಯಿಂದ ಇಷ್ಟವಾದ ವರವನ್ನು ಯಥೇಚ್ಛವಾಗಿ ಕೇಳು.

ನಿನ್ನಿಂದ ಯಾವ ವರವನ್ನು ಕೇಳಲಿ. ಈ ವರವನ್ನು ಕೇಳುವೆ ಅದೇನೆಂದರೆ ಷಡ್ಗುಣಪೂರ್ಣನಾದ ಚ್ಯುತಿರಹಿತನಾದ ಶ್ರೀಹರಿಯಲ್ಲಿ ಭಕ್ತಿಯನ್ನು ತಥಾ ಹಾಗೆಯೇ ಆ ಭಗವಂತನಲ್ಲಿ ಆಸಕ್ತರಾದ ಬ್ರಹ್ಮ-ಸರಸ್ವತಿ, ವಾಯು-ಭಾರತಿಯರಲ್ಲಿ ನಿನ್ನಲ್ಲಿಯೂ ಭಕ್ತಿಯನ್ನು ಕೇಳುವೆನು ಎಂದ. ಮಾರ್ಕಂಡೇಯನಿಂದ ಚೆನ್ನಾಗಿ ಉಚ್ಚರಿಸಿದ ಮಾತುಗಳಿಂದ ಈ ರೀತಿ ಪ್ರಾರ್ಥಿತರಾದ ರುದ್ರದೇವರು ಮುನಿಯನ್ನು ಕುರಿತು ಹೀಗೆ ಹೇಳಿದರು. ಮಾರ್ಕಂಡೇಯನೇ ನೀನು ಶ್ರೀ ಹರಿಯಲ್ಲಿ ಭಕ್ತಿಯುಳ್ಳವನಾಗಿರುವಿ ಕಾರಣ ನಿನ್ನ ಸಂಕಲ್ಪವು ಇಚ್ಛೆಯು ವ್ಯರ್ಥವಾಗದು. ಒಂದು ಕಲ್ಪ ಪೂರ್ತಿಯಾಗುವವರೆಗೆ ಪುಣ್ಯವು ತನ್ನಿಮಿತ್ತವಾಗಿ ಕೀರ್ತಿಯು ಮುಪ್ಪು ಮರಣವಿಲ್ಲದಿರುವಿಕೆ ತಥಾ ಹಾಗೂ ಭೂತ-ಭವಿಷ್ಯತ್-ವರ್ತಮಾನಾರ್ಥವಿಷಯಕಜ್ಞಾನವು, ವೈರಾಗ್ಯಸಹಿತವಾದ ಶ್ರೀಹರಿಯ ಜ್ಞಾನವು ಬ್ರಹ್ಮವರ್ಚಸ್ಸು ನಿನ್ನಲ್ಲಿ ಸದಾಕಾಲ ಇರಲಿ. ರುದ್ರದೇವರು ಮಾರ್ಕಂಡೇಯನಿಗೆ ಈ ರೀತಿ ವರಗಳನ್ನು ಕೊಟ್ಟು ಪಾರ್ವತಿಗೆ ಅವನು ಮಾಡಿದ ಕಾರ್ಯಗಳನ್ನು ಹೇಳುತ್ತ ಕೈಲಾಸಪರ್ವತವನ್ನು ಕುರಿತು ಹೋದರು. ಮಾರ್ಕಂಡೇಯರು ತಮ್ಮ ಯೋಗಪ್ರಭಾವದಿಂದ ಪರಮಾತ್ಮನಲ್ಲಿ ನಿಯತವಾದ ಭಕ್ತಿಯನ್ನು ಹೊಂದಿ ಸಂಚರಿಸುವರು. ಹೀಗೆ ಮಾರ್ಕಂಡೇಯರ ಚರಿತ್ರೆಯು ನಿರೂಪಿತವಾಗಿದೆ.

*ಶ್ರೀಹರಿಯು ಮಾಯೆಯನ್ನು ತೋರಿಸಿ ಮಾಯೆಯೊಡನೆ ತಾನೂ ಸಹ ಅಂತರ್ಧಾನ ಹೊಂದಿದಾಗ ಮುನಿಯು ಏನು ಮಾಡಿದನೆಂಬ ಶೌನಕರ ಮನಸಿನ ಶಂಕೆಯನ್ನರಿತು ಸೂತರು ಹೇಳುತ್ತಾರೆ. ಮಾರ್ಕಂಡೇಯನು ಶ್ರೀಹರಿಯ ಪಾದಾರವಿಂದದಲ್ಲಿ ಭಕ್ತಿಯನ್ನು ಮಾಡಿ ಉದ್ಧಾರವನ್ನು ಹೊಂದಿದನು. ರುದ್ರದೇವರ ಅನುಗ್ರಹವನ್ನು ಮಾರ್ಕಂಡೇಯರು ಹೇಗೆ ಸಂಪಾದಿಸಿದರು ಎಂಬುದನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುವರು.*

ಸೂತ ಉವಾಚ -

**ಸ ಏವಮನುಭೂಯೇದಂ ನಾರಾಯಣವಿನಿರ್ಮಿತಮ್ ।**
**ವೈಭವಂ ಯೋಗಮಾಯಾಯಾಸ್ತಮೇವ ಶರಣಂ ಯಯೌ ॥ ೧ ॥**

ಸಃ=ಮಾರ್ಕಂಡೇಯರು ಏವಂ=ಈ ರೀತಿಯಾಗಿ ನಾರಾಯಣವಿನಿರ್ಮಿತಂ= ಶ್ರೀಹರಿಯಿಂದ ಸೃಷ್ಟವಾದ ಯೋಗಮಾಯಾಯಾಃ=ಸ್ವರೂಪಶಕ್ತಿಯ ವೈಭವಂ= ಪ್ರಭಾವವನ್ನು ಅನುಭೂಯ=ಕಣ್ಣಾರೆ ಕಂಡು ತಮೇವ=ಶ್ರೀ ಹರಿಯನ್ನೇ ಶರಣಂ ಯಯೌ=ಮೊರೆಹೋದರು.

ಋಷಿರುವಾಚ -

**ಪ್ರಪನ್ನೋಽಸ್ಮ್ಯಂಘ್ರಿಮೂಲಂ ತೇ ಪ್ರಪನ್ನಾಭಯದಂ ಹರೇ ।**
**ಯನ್ಮಾಯಯಾಽಪಿ ವಿಬುಧಾ ಮುಹ್ಯಂತ್ಯಜ್ಞಾನಕಾತರಾಃ ॥ ೨ ॥**

ಹೇ ಹರೇ=ಶ್ರೀಹರಿಯೇ ಯನ್ಮಾಯಯಾ=ಯಾವನ ಮೋಹಕ ಶಕ್ತಿಯಿಂದ ವಿಬುಧಾ ಅಪಿ=ದೇವತೆಗಳೂ ಸಹ ಅಜ್ಞಾನಕಾತರಾಃ=ಅಜ್ಞಾನದಿಂದ ಪೀಡಿತರಾಗಿ ಮುಹ್ಯಂತಿ=ಮೋಹಕ್ಕೊಳಗಾಗುವರೋ ತೇ=ಅಂಥಹ ನಿನ್ನ ಪ್ರಪನ್ನಾಭಯದಂ= ಶರಣಾಗತರಿಗೆ ಅಭಯಪ್ರದವಾದ ಅಂಘ್ರಿಮೂಲಂ=ಜ್ಞಾನಸಾಧನವಾದ ಪಾದ ಮೂಲವನ್ನು ಪ್ರಪನ್ನಃ ಅಸ್ಮಿ=ಶರಣು ಹೊಂದಿದ್ದೇನೆ.

ಸೂತ ಉವಾಚ -

**ತಮಿತ್ಥಂ ನಿಭೃತಾತ್ಮಾನಂ ವೃಷೇಣ ದಿವಿ ಪರ್ಯಟನ್ ।**
**ರುದ್ರಾಣ್ಯಾ ಭಗವಾನ್ ರುದ್ರೋ ದದರ್ಶ ಸ್ವಗಣೈರ್ವೃತಃ ॥ ೩ ॥**

ಇತ್ಥಂ=ಈ ರೀತಿ ನಿಭೃತಾತ್ಮಾನಂ=ಪೂರ್ಣವಾಗಿ ಶ್ರೀಹರಿಯಲ್ಲಿ ಇರಿಸಿದ ಮನಸ್ಸುಳ್ಳ ಅಥವಾ ಪೂರ್ಣವಾದ ಮನಸ್ಸುಳ್ಳ ಮುನಿಯನ್ನು ಸ್ವಗಣೈಃ ವೃತಃ=ತನ್ನ ಪ್ರಮಥ ಗಣದಿಂದ ಸುತ್ತುವರೆಯಲ್ಪಟ್ಟು ರುದ್ರಾಣ್ಯಾ=ಪಾರ್ವತಿಯಿಂದ ಸಹಿತನಾಗಿ ವೃಷೇಣ=ನಂದಿಯಿಂದ ದಿವಿ=ಆಕಾಶದಲ್ಲಿ ಪರ್ಯಟನ್=ಸಂಚರಿಸುತ್ತ ಭಗವಾನ್ ರುದ್ರಃ=ಪೂಜ್ಯರಾದ ರುದ್ರದೇವರು ದದರ್ಶ=ನೋಡಿದರು.

**ಅಥೋಮಾ ತಮೃಷಿಂ ವೀಕ್ಷ್ಯ ಗಿರೀಶಂ ಸಮಭಾಷತ ।**
**ಪಶ್ಯೇಮಂ ಭಗವನ್ ವಿಪ್ರಂ ನಿಭೃತಾತ್ಮೇಂದ್ರಿಯಾಶಯಮ್ ॥ ೪ ॥**

ಅಥ=ನಂತರ ಉಮಾ=ಪಾರ್ವತೀದೇವಿಯು ತಂ ಋಷಿಂ=ಆ ಮುನಿಯನ್ನು ವೀಕ್ಷ್ಯ=ನೋಡಿ ಗಿರೀಶಂ=ರುದ್ರದೇವರನ್ನು ಕುರಿತು ನಿಭೃತಾತ್ಮೇಂದ್ರಿಯಾಶಯಂ =ಪೂರ್ಣವಾದ ಮನಸ್ಸು ಇಂದ್ರಿಯಗಳುಳ್ಳ ಇಮಂ ವಿಪ್ರಂ=ಈ ಬ್ರಾಹ್ಮಣನನ್ನು ಪಶ್ಯ=ನೋಡು ಎಂದು ಸಮಭಾಷತ=ಹೇಳಿದಳು.

**ವಿಶೇಷ-** ಇಮಂ 'ಇಃ ಮಾ ಯಸ್ಯ ಸಃ ತಂ' ಅಂದರೆ ಕಾಮ ಅಥವಾ ಇಚ್ಛಾ ಇಲ್ಲದಿರುವ ಋಷಿಯನ್ನು ಎಂದರ್ಥ.

**ನಿಭೃತೋನನ್ವೃಷಿವ್ರಾತಸ್ತಪಾಪಾಯೇ ಯಥಾರ್ಣವಃ ।**
**ಕುರ್ವಸ್ಯ ತಪಸಃ ಸಾಕ್ಷಾತ್ ಸಂಸಿದ್ಧಿಂ ಸಿದ್ಧಿದೋ ಭವಾನ್ ॥ ೫ ॥**

ತಪಾಪಾಯೇ=ಗ್ರೀಷ್ಮಕಾಲ ಕಳೆದ ಮೇಲೆ ಅರ್ಥಾತ್ ವರ್ಷಾಕಾಲದಲ್ಲಿ ಅರ್ಣವಃ ಯಥಾ=ಸಮುದ್ರವು ಹೇಗೆ ಪೂರ್ಣವಾಗಿರುವುದೋ ಹಾಗೆ ಋಷಿವ್ರಾತಃ=ಋಷಿಗಳ ಸಮೂಹವುಳ್ಳ (ಅವರಿಗೆ ಸ್ವಾಮಿಯಾದ) ಋಷಿಃ=ಮಾರ್ಕಂಡೇಯನು ನಿಭೃತಃ ನನು=ಪೂರ್ಣನಷ್ಟೇ. ಸಿದ್ಧಿದಃ ಭವಾನ್=ಫಲಪ್ರದನಾದ ನೀನು ಅಸ್ಯ=ಈ ಮುನಿಯ ತಪಸಃ=ತಪಸ್ಸಿಗೆ ಸಂಸಿದ್ಧಿಂ ಕುರು=ಸರಿಯಾದ ಫಲವನ್ನು ಕೊಡು ಎಂದಳು.

**ವಿಶೇಷ -** 'ಭಾಃ ಅಸ್ಯ ಅಸ್ತೀತಿ ಭವಾನ್' ಕಾಂತಿಯುತನಾದ ನೀನು ಎಂದರ್ಥ. ಅಥವಾ ಮುನಿಗೆ ವಿಶೇಷಣ ಎಂದು ಹೇಳಬಹುದು.

*ಸತಿಯು ಈ ರೀತಿ ಹೇಳುತ್ತಿರಲು ಪತಿಯು ಏನು ಮಾಡಿದನೆಂದು ಹೇಳುವರು*

ಮಹಾದೇವ ಉವಾಚ -

**ನೈವೇಚ್ಛತ್ಯಾಶಿಷಃ ಕ್ವಾಪಿ ಬ್ರಹರ್ಷಿರ್ಮೋಕ್ಷಮಪ್ಯುತ ।**
**ಭಕ್ತಿಂ ಪರಾಂ ಭಗವತಿ ಲಬ್ಧವಾನ್ ಪುರುಷೇಽವ್ಯಯೇ ॥ ೬ ॥**

ಅವ್ಯಯೇ=ನಾಶರಹಿತನಾದ ಪುರುಷೇ=ಸರ್ವಶರೀರಾಂತರ್ಗತನಾದ ಭಗವತಿ= ಶ್ರೀಹರಿಯಲ್ಲಿ ಯತಃ=ಯಾವ ಕಾರಣ ಪರಾಂ ಭಕ್ತಿಂ ಲಬ್ಧವಾನ್=ಉತ್ತಮವಾದ ಭಕ್ತಿಯನ್ನು ಪಡೆದಿರುವನೋ ಆ ಕಾರಣ ಬ್ರಹ್ಮರ್ಷಿಃ=ಬ್ರಹ್ಮಜ್ಞಾನಿಯಾದ ಮುನಿಯು ಮೋಕ್ಷಮಪಿ=ಮೋಕ್ಷವನ್ನೂ ನ ಇಚ್ಛಂತಿ=ಅಪೇಕ್ಷಿಸುವುದಿಲ್ಲ ಕಿಮುತ ಮಿಕ್ಕ ಐಹಿಕ ಕಾಮನೆಗಳನ್ನು ಇಚ್ಛಿಸುವುದಿಲ್ಲವೆಂದು ಬೇರೆ ಹೇಳಬೇಕೇ.

**ಅಥಾಪಿ ಸಂವದಿಷ್ಯಾಮೋ ಭವಾನ್ಯೇತೇನ ಸಾಧುನಾ ।**
**ಅಯಂ ಹಿ ಪರಮೋ ಲಾಭೋ ನೃಣಾಂ ಸಾಧುಸಮಾಗಮಃ ॥ ೭ ॥**

ಅಥಾಪಿ=ಅವರು ನಿಸ್ಪೃಹರಾಗಿದ್ದರೂ ಹೇ ಭವಾನಿ=ಪಾರ್ವತಿಯೇ ಏತೇನ ಸಾಧುನಾ=ಈ ಸಜ್ಜನನೊಡನೆ ಸಂವದಿಷ್ಯಾಮಃ=ಮಾತನಾಡೋಣ. ಏಕೆಂದರೆ ನೃಣಾಂ=ಜನರಿಗೆ ಸಾಧುಸಮಾಗಮಃ=ಸಜ್ಜನರ ಸಮಾಗಮವು ಏನಿದೆಯೋ ಅಯಂ=ಇದು ಪರಮಃ ಲಾಭಃ=ಅತ್ಯಂತ ಪ್ರಯೋಜನರೂಪವು.

**ಇತ್ಯುಕ್ತ್ವಾ ಸಮುಪೇಯಾಯ ಭಗವಾನ್ ಸ ಸತಾಂಗತಿಃ ।**
**ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವದೇಹಿನಾಮ್ ॥ ೮ ॥**

ಇತಿ=ಈ ರೀತಿ ಉಕ್ತ್ವಾ=ಹೇಳಿ ಸತಾಂಗತಿಃ=ಸಜ್ಜನರಿಗೆ ಆಶ್ರಯರಾದ ಸರ್ವ-ವಿದ್ಯಾನಾಂ=ಎಲ್ಲ ವಿದ್ಯೆಗಳಿಗೆ ಈಶಾನಃ=ಪ್ರೇರಕರಾದ ಸರ್ವದೇಹಿನಾಂ ಈಶ್ವರಃ=ಎಲ್ಲ ಜೀವರಿಗೆ ನಿಯಾಮಕರಾದ ಭಗವಾನ್=ರುದ್ರದೇವರು ಸಮುಪೇಯಾಯ=ಮುನಿಯನ್ನು ಸಮೀಪಿಸಿದನು.

**ತಯೋರಾಗಮನಂ ಸಾಕ್ಷಾದೀಶಯೋರ್ಜಗದಾತ್ಮನೋಃ ।**
**ನ ವೇದರುದ್ಧಧೀವೃತ್ತಿರಾತ್ಮಾನಂ ವಿಶ್ವಮೇವ ಚ ॥ ೯ ॥**

ರುದ್ಧಧೀವೃತ್ತಿಃ=ತಡೆಯಲ್ಪಟ್ಟ ಬುದ್ಧಿಯ ವ್ಯಾಪಾರವುಳ್ಳ ಮುನಿಯು ಜಗದಾತ್ಮನೋಃ=ಜಗತ್ತನ್ನು ವ್ಯಾಪಿಸಿರುವ(ಅಹಂಕಾರತತ್ವ ಪರ್ಯಂತ)ಈಶಯೋಃ=ನಿಯಾಮಕರಾದ ತಯೋಃ=ಶಿವ ಪಾರ್ವತಿಯರ ಸಾಕ್ಷಾತ್ ಆಗಮನಂ=ಸ್ವತಃ ಬಂದದ್ದನ್ನು ಆತ್ಮಾನಂ=ತನ್ನನ್ನೂ ವಿಶ್ವಂ ಏವ ಚ=ಪ್ರಪಂಚವನ್ನೂ ನ ವೇದ=ತಿಳಿಯಲಿಲ್ಲ

**ವಿಶೇಷ-** ಬುದ್ಧಿಯೇ ಎಲ್ಲದಕ್ಕೂ ಮೂಲವಾದದ್ದು. ಅದನ್ನು ತಡೆದರೆ ಉಳಿದ ಯಾವ ಇಂದ್ರಿಯಗಳ ವೃತ್ತಿಯು ನಡೆಯಲಾರದೆಂದು ಈ ರೀತಿ ಹೇಳಿದ್ದು

**ಭಗವಾಂಸ್ತದಭಿಜ್ಞಾಯ ಗಿರಿಶೋ ಯೋಗಮಾಯಯಾ ।**
**ಆವಿಶತ್ ತದ್ಗುಹಾಕಾಶಂ ವಾಯುಶ್ಛಿದ್ರಮಿವೇಶ್ವರಃ ॥ ೧೦ ॥**

ಭಗವಾನ್=ಪೂಜ್ಯರಾದ ಗಿರಿಶಃ=ರುದ್ರದೇವರು ಯೋಗಮಾಯಯಾ=ಅಣಿಮಾದಿ ಸಾಮರ್ಥ್ಯದಿಂದ ತದಭಿಜ್ಞಾಯ=ಅವನು ಸಮಾಧಿಸ್ಥನಾದುದನ್ನರಿತು ವಾಯುಃ=ಗಾಳಿಯು ಛಿದ್ರಂ ಇವ=ಇಂದ್ರಿಯಗಳಲ್ಲಿ ರೋಮಕೂಪಗಳಲ್ಲಿ ಪ್ರವೇಶಿಸುವಂತೆ ತದ್ಗುಹಾಕಾಶಂ=ಹೃದಯಾಕಾಶದಲ್ಲಿ ಆವಿಶತ್=ಪ್ರವೇಶಿಸಿದನು.

**ಆತ್ಮನ್ಯಪಿ ಶಿವಂ ಪ್ರಾಪ್ತಂ ತಡಿತ್ಪಿಂಗಜಟಾಧರಮ್ ।**
**ತ್ರ್ಯಕ್ಷಮಷ್ಟಭುಜಂ ಶಂಭುಮುದ್ಯಂತಮಿವ ಭಾಸ್ಕರಮ್ ॥ ೧೧ ॥**

ಆತ್ಮನ್ಯಪಿ=ಹೊರಗೆ ಮಾತ್ರವಲ್ಲ ತನ್ನ ಹೃದಯದಲ್ಲಿಯೂ ಪ್ರಾಪ್ತಂ=ಬಂದಿರುವ (ಇದರಿಂದ ಒಂದು ಅಂಶದಿಂದ ಹೃದಯಪ್ರವೇಶ ಸೂಚಿತವಾಗುವುದು) ತಡಿತ್ಪಿಂಗ-ಜಟಾಧರಂ=ಮಿಂಚಿನಂತೆ ಬಣ್ಣವುಳ್ಳ ಜಟೆಯನ್ನು ಧರಿಸಿದ ತ್ರ್ಯಕ್ಷಂ=ಮೂರು ಕಣ್ಣುಗಳುಳ್ಳ ಅಷ್ಟಭುಜಂ=ಎಂಟು ಕೈಗಳುಳ್ಳ ಉದ್ಯಂತಂ ಭಾಸ್ಕರಂ ಇವ=ಉದಯಿಸುತ್ತಿರುವ ಸೂರ್ಯನಂತಿರುವ ಶಿವಂ=ಮಂಗಳಕರನಾದ ಶಂಭುಂ=ರುದ್ರದೇವರನ್ನು

**ವ್ಯಾಘ್ರಚರ್ಮಾಂಬರಂ ಶೂಲಧನುರಿಷ್ವಸಿಚರ್ಮಭಿಃ ।**
**ಅಕ್ಷಮಾಲಾಂ ಡಮರುಕಂ ಕಪಾಲಂ ಪರಶುಂ ಸಹ ॥ ೧೨ ॥**

ವ್ಯಾಘ್ರಚರ್ಮಾಂಬರಂ=ಹುಲಿಯ ಚರ್ಮವೆಂಬ ಬಟ್ಟೆಯನ್ನುಟ್ಟ ಶೂಲಧನುರಿಷ್ವಸಿ-ಚರ್ಮಭಿಃ=ತ್ರಿಶೂಲ, ಬಿಲ್ಲು, ಬಾಣ, ಖಡ್ಗ ಢಾಲುಗಳಿಂದ ಸಹ ಕೂಡಿಕೊಂಡು ಅಕ್ಷಮಾಲಾಂ=ಕಮಲಾಕ್ಷ ಮಾಲೆಯನ್ನು ಡಮರುಕಂ=ಡಮರನ್ನು ಕಪಾಲಂ=ಕಪಾಲವನ್ನು ಪರಶುಂ=ಕೊಡಲಿಯನ್ನು(ಬಿಭ್ರಾಣಂ=ಧರಿಸಿರುವ ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ.)

**ಬಿಭ್ರಾಣಂ ಸಹಸಾ ಭಾಂತಂ ವ್ಯಚಷ್ಟ ಹೃದಿ ವಿಸ್ಮಿತಃ ।**
**ಕಿಮಿದಂ ಕುತ ಏವೇತಿ ಸಮಾಧೇರ್ವಿರತೋ ಮುನಿಃ ॥ ೧೩ ॥**

ಬಿಭ್ರಾಣಂ=ಧರಿಸಿರುವ ಹೃದಿ=ಹೃದಯದಲ್ಲಿ ಸಹಸಾ ಭಾಂತಂ=ಒಮ್ಮೆಲೇ ಪ್ರಕಾಶಿಸಿದ್ದನ್ನು ವ್ಯಚಷ್ಟ=ನೋಡಿದನು ವಿಸ್ಮಿತಃ=ಆಶ್ಚರ್ಯಚಕಿತನಾದನು. ಕಿಮಿದಂ=ಏನಿದು ಕುತಃ ಏವ ಇತಿ=ಯಾವ ಕಾರಣ (ಎಲ್ಲಿಂದ)ಎಂದು ನಂತರ ಸಮಾಧೇಃ ವಿರತಃ ಮುನಿಃ=ಅಸಂಪ್ರಜ್ಞಾತ ಸಮಾಧಿಯಿಂದ ಎಚ್ಚೆತ್ತವನಾಗಿ,

**ನೇತ್ರೇ ಉನ್ಮೀಲ್ಯ ದದೃಶೇ ಸಗಣಂ ಸೋಮಯಾಗತಮ್ ।**
**ರುದ್ರಂ ತ್ರಿಲೋಕೈಕಗುರುಂ ನನಾಮ ಶಿರಸಾ ಮುನಿಃ ॥ ೧೪ ॥**

ನೇತ್ರೇ=ಕಣ್ಣುಗಳನ್ನು ಉನ್ಮೀಲ್ಯ=ತೆರೆದು ಸಗಣಂ=ಪ್ರಮಥಗಣಸಹಿತನಾದ ಸೋಮಯಾಗತಂ=ಪಾರ್ವತಿಯೊಡನೆ ಬಂದಿರುವ ತ್ರಿಲೋಕೈಕಗುರುಂ=ಮೂರು ಲೋಕಕ್ಕೆ ಮುಖ್ಯ ಗುರುವಾದ ರುದ್ರಂ=ರುದ್ರದೇವರನ್ನು ಶಿರಸಾ ನನಾಮ=ತಲೆಬಾಗಿ ನಮಸ್ಕರಿಸಿದನು.

**ವಿಶೇಷ-** ಸೋಮಯಾಗತಂ=ಸಃ ಉಮಯಾ ಸಹ ಆಗತಂ ಎಂದು ಪದಗಳನ್ನು ವಿಭಜಿಸಬೇಕು. 'ಸೊಷಾಮವಿಂದತ್' ಎಂಬಲ್ಲಿಯಂತೆ (ಛಾಂದಸ) ಗುಣವಾದದ್ದು

ಅಥವಾ ಸೋಽಚಿಲೋಪೇ ಚೇತ್ ಪಾದಪೂರಣ ಎಂಬ ವಾರ್ತಿಕ ಪ್ರಕಾರ ಸುಲೋಪವಾಗಿ ಸೋಮವೆಂದಾಗಿದೆ. ಉಮಾ ಎಂದರೆ ಪ್ರಮಥಾದಿಪ್ರಜಾ ಅದರ ಜೊತೆ ಬಂದ ಎಂದು ಹೀಗೂ ಅರ್ಥ.(ಸೊಮೋ ಹಿನೋತಿ ಮರ್ತ್ಯಂ ಎಂಬ ಋಗ್ಭಾಷ್ಯದಲ್ಲಿ ಉಮಾ ಶಬ್ದಕ್ಕೆ ಪ್ರಜಾ ಎಂಬರ್ಥವನ್ನು ಮಾಡಿದ್ದಾರೆ. ಅದರ ಟೀಕೆಯಲ್ಲಿ 'ಭೂತಾನಿ ವೈ ವಿಶ್ವ ಉಮ:' ಎಂದು ಶ್ರುತಿ ಇದೆ ಎಂದೂ ಹೇಳಿರುವರು. ಸೋಮಸ್ಯ=ಚಂದ್ರನ ಶೋಭೆ ತಯಾ=ಅದರಿಂದ ಸಹಿತನಾಗಿ ಚಂದ್ರನ ಶೋಭೆಯಿಂದ ಕೂಡಿ ಅರ್ಥಾತ್ ಚಂದ್ರಶೇಖರನಾಗಿ ಬಂದ ಎಂದರ್ಥ. ಕೊನೆಗೆ 'ಇತಿ ಚಂದ್ರಲಲಾಮಸ್ಯ' ಎಂದು ಹೇಳುವರು

**ತಸ್ಮೈ ಸಪರ್ಯಾಂ ವ್ಯದಧಾತ್ ಸಗಣಾಯ ಸಹೋಮಯಾ ।**
**ಸ್ವಾಗತಾಸನಪಾದ್ಯಾರ್ಘ್ಯಗಂಧಸ್ರಗ್ಧೂಪದೀಪಕೈಃ ॥ ೧೫ ॥**

ಉಮಯಾ ಸಹ=ಪಾರ್ವತಿಯಿಂದ ಕೂಡಿದ ಸಗಣಾಯ=ತನ್ನ ಗಣಸಹಿತನಾದ ತಸ್ಮೈ=ರುದ್ರದೇವರಿಗೆ ಸ್ವಾಗತಾಸನಪಾದ್ಯಾರ್ಘ್ಯಗಂಧಸ್ರಗ್ಧೂಪದೀಪಕೈಃ=ಸ್ವಾಗತವನ್ನು ಮಾಡಿ, ಆಸನವನ್ನಿತ್ತು, ಪಾದವನ್ನು ತೊಳೆದು, ಅರ್ಘ್ಯವನ್ನಿತ್ತು, ಗಂಧವನ್ನು ಹಚ್ಚಿ ಮಾಲಿಯನ್ನು ಹಾಕಿ, ಧೂಪವನ್ನು ಬೆಳಗಿ, ಮಂಗಳಾರತಿಯನ್ನು ಮಾಡಿ ಸಪರ್ಯಾಂ ವ್ಯದಧಾತ್=(ಸೇವೆಯನ್ನು)ಪೂಜೆಯನ್ನು ಮಾಡಿದನು.

**ವಿಶೇಷ-** ಇಲ್ಲಿ ಉಮಯಾ ಎಂಬುವದು ಸಗಣ ಎಂಬುವದು ಇವೆರಡು ಸಗಣದಿಂದ ಕೂಡಿದ ಪದಗಳು ಅದರಿಂದ ಗಮನವೇ ಅದರ ಫಲ. ಪ್ರಕೃತದಲ್ಲಿ ರುದ್ರದೇವರ ಗಮನ ಧ್ವನಿತವಾಗುವದು.(ಅಲಂಕಾರ ಚಂದ್ರಿಕೆಯಲ್ಲಿ ಸಗಣೋ ಗಮನಪ್ರದಃ ವಿನೀಲಃ ಶನಿವಾಯುಗ್ರಹದೇವತೋತ್ಯಗುಶ್ಚ ಎಂದು ಹೇಳಿದೆ.

**ಆಹ ಚಾತ್ಮಾನುಭಾವೇನ ಪೂರ್ಣಕಾಮಸ್ಯ ತೇ ವಿಭೋ ।**
**ಕರವಾಮ ಕಿಮೀಶಾನ ಯೇನೇದಂ ನಿರ್ವೃತಂ ಜಗತ್ ॥ ೧೬ ॥**

ಯೇನ=ಯಾರಿಂದ ಇದಂ ಜಗತ್=ಈ ಜಗತ್ತು ನಿರ್ವೃತಂ=ಸುಖವನ್ನು ಪಡೆದಿದೆಯೋ ಮತ್ತು ಆತ್ಮಾನುಭಾವೇನ=ಸ್ವಸಾಮರ್ಥ್ಯದಿಂದ ಪೂರ್ಣಕಾಮಸ್ಯ= ಸರ್ವಾಭೀಷ್ಟವನ್ನೂ ಪಡೆದ ವಿಭೋ=ಸಮರ್ಥನಾದ ಈಶಾನ=ಸ್ವಾಮಿಯೇ ತೇ=ನಿನಗೆ ಕಿಂ ಕರವಾಮ=ಏನು ಮಾಡಬಲ್ಲೆವು ಎಂದು ಆಹ ಚ=ಹೇಳಿದನೂ ಕೂಡ.

**ನಮಃ ಶಿವಾಯ ಶಾಂತಾಯ ಸತ್ವಾಯ ಪ್ರಮೃಡಾಯ ಚ ।**
**ರಜೋಜುಷೇಽಥ ಘೋರಾಯ ನಮಸ್ತುಭ್ಯಂ ತಮೋಜುಷೇ ॥ ೧೭ ॥**

ಶಿವಾಯ=ಮಂಗಲಾಂಗನಾದ ಶಾಂತಾಯ=ಸಮಾಧಾನಮೂರ್ತಿಯಾದ ಸತ್ವಾಯ=ಬಲಿಷ್ಠನಾದ ಅಥವಾ ಸತ್=ಬ್ರಹ್ಮನನ್ನು ವಾತಿ=ಶರಣು ಹೋಗುವುದರಿಂದ ಸತ್ವನೆನಿಸಿದ ಪ್ರಮೃಡಾಯ=ಪ್ರಮೃಡನಾಮಕನಾದ ಅಥವಾ ಪ್ರಕೃಷ್ಟ ಪಾಲಕನಾದ ಅಥವಾ ಜ್ಞಾನಿಗಳಿಂದ ವಿಚಾರ್ಯವಾದ ಚರ್ಯೆಯುಳ್ಳ ಅಘೋರಾಯ=ಸಜ್ಜನರಿಗೆ ಭಯಂಕರನಲ್ಲದ ಘೋರಾಯ=ಶತ್ರುಗಳಿಗೆ ಭಯಂಕರನಾದ ರಜೊಜುಷೇ=ರಜೋಗುಣಪ್ರವರ್ತಕನಾದ ತಮೋಜುಷೇ=ತಮೋಗುಣಪ್ರವರ್ತಕನಾದ ಸತ್ವಾಯ=ಸತ್ವಗುಣಪ್ರವರ್ತಕನಾದ ಆ ಆ ಕಾರ್ಯಗಳಿಗೆ ಅನುಗುಣವಾಗಿ ಗುಣತ್ರಯಗಳ ಪ್ರವರ್ತಕನಾದ ತುಭ್ಯಂ=ನಿನಗೆ ನಮಃ=ನಮನವು

**ಸೂತ ಉವಾಚ -**

**ಏವಂ ಸ್ತುತಃ ಸ ಭಗವಾನ್ ಮಹಾದೇವಃ ಸತಾಂ ಪತಿಃ ।**
**ಪರಿತುಷ್ಟಃ ಪ್ರಸನ್ನಾತ್ಮಾ ಪ್ರಹಸಂಸ್ತಮಭಾಷತ ॥ ೧೮ ॥**

ಏವಂ=ಈ ರೀತಿ ಸ್ತುತಃ=ಸ್ತುತಿಸಲ್ಪಟ್ಟ ಸತಾಂ ಪತಿಃ=ಸಜ್ಜನಪಾಲಕನಾದ ಭಗವಾನ್=ಪೂಜ್ಯರಾದ ಮಹಾದೇವಃ=ರುದ್ರದೇವರು ಪರಿತುಷ್ಟಃ=ಸಂತುಷ್ಟರಾಗಿ ಪ್ರಸನ್ನಾತ್ಮಾ=ಪ್ರಫುಲ್ಲಮನಸ್ಸಿನಿಂದ ಪ್ರಹಸನ್=ನಗುತ್ತ ತಂ ಅಭಾಷತ=ಅವನನ್ನು ಕುರಿತು ಮಾತನಾಡಿದರು.

**ಶ್ರೀಮಹಾದೇವ ಉವಾಚ -**

**ವರಂ ವೃಣೀಷ್ವ ನಃ ಕಾಮಂ ವರದೇಶಾ ವಯಂ ತ್ರಯಃ ।**
**ಅಮೋಘಂ ದರ್ಶನಂ ಯೇಷಾಂ ಮರ್ತ್ಯೋ ಯದ್ ವಿಂದತೇಽಮೃತಮ್॥ ೧೯ ॥**

ವಯಂ ತ್ರಯಃ=ಹರಿ-ಹಿರಣ್ಯಗರ್ಭ-ಹರನಾದ ನಾವು ಮೂವರು ವರದೇಶಾಃ=ವರ ಕೊಡುವವರಲ್ಲಿ ಶ್ರೇಷ್ಠರು ಯೇಷಾಂ=ಯಾವ ಈ ಮೂವರ ದರ್ಶನಂ=ದರ್ಶನವು ಅಮೋಘಂ=ವ್ಯರ್ಥವಲ್ಲ ಸಫಲವಾದುದು ಯದ್=ಯಾವನ ದರ್ಶನದಿಂದ ಅಮೃತಂ ವಿಂದತೇ=ಮರಣಶೀಲನಾದ ಮನುಷ್ಯನು ಮುಕ್ತಿಯನ್ನು ಪಡೆಯುವನು. ಅಂತಹ ನಃ=ನಮ್ಮ ದೆಶೆಯಿಂದ ಕಾಮಂ ವರಂ ವೃಣೀಷ್ವ=ಇಷ್ಟವಾದ ವರವನ್ನು ಯಥೇಚ್ಛವಾಗಿ ಕೇಳು.

**ಬ್ರಾಹ್ಮಣಾಃ ಸಾಧವಃ ಶಾಂತಾ ನಿಸ್ಸಂಗಾ ಭೂತವತ್ಸಲಾಃ ।**
**ಏಕಾಂತಭಕ್ತಾ ಅಸ್ಮಾಸು ನಿರ್ವೈರಾಃ ಸಮದರ್ಶನಾಃ ॥ ೨೦ ॥**

ಬ್ರಾಹ್ಮಣಾಃ=ಬ್ರಹ್ಮಜ್ಞಾನಿಗಳು ಸಾಧವಾಃ=ರಾಗಾದಿ ದೋಷರಹಿತರಾದ ಶಾಂತಾಃ= ಭಗವನ್ನಿಷ್ಠರಾದ ನಿಸ್ಸಂಗಾಃ=(ದುಷ್ಟಸಂಗವಿಲ್ಲದ) ಹೆಂಡತಿ ಮೊದಲಾದ ಕಾರ್ಯಾನುಪಯುಕ್ತಸಂಗರಹಿತರಾದ ಭೂತವತ್ಸಲಾಃ=ಪ್ರಾಣಿಗಳಲ್ಲಿ ಪ್ರೀತಿಯುಳ್ಳ ಅಸ್ಮಾಸು=ನಮ್ಮ ಮೂರು ಮಂದಿಯಲ್ಲಿ ಏಕಾಂತಭಕ್ತಾಃ=ಯೋಗ್ಯತಾನುಸಾರ ತರತಮಭಾವದಿಂದ ಸ್ನೇಹಮಾಡುವ ನಿರ್ವೈರಾಃ=ಯೋಗ್ಯತೆ ಮೀರಿ ವೈರವನ್ನು ಮಾಡದಿರುವ ಸಮದರ್ಶನಾಃ=ಗೀತೋಕ್ತರೀತ್ಯಾ ಎಲ್ಲೆಡೆ ಇರುವ ಭಗವಂತನಿಗೆ ಏಕರೂಪತೆಯನ್ನು ಕಾಣುವ ಅಥವಾ ನಿರ್ದೋಷನಾದ ಹರಿಯ ಜ್ಞಾನಿಗಳು ಯಾರೋ ತಾನ್=ಅವರನ್ನು

**ಸಲೋಕಾ ಲೋಕಪಾಲಾಸ್ತಾನ್ ವದಂತ್ಯರ್ಚಂತ್ಯುಪಾಸತೇ ।**
**ಅಹಂ ಚ ನ ಭಗವಾನ್ ಬ್ರಹ್ಮಾ ಸ್ವಯಂ ಚ ಹರಿರೀಶ್ವರಃ ॥ ೨೧ ॥**

ಸಲೋಕಾಃ=ಎಲ್ಲ ಲೋಕಸ್ಥಜನರಿಂದ ಸಹಿತರಾದ ಲೋಕಪಾಲಾಃ=ಲೋಕಪಾಲಕರು ವಂದಂತಿ=ನಮಸ್ಕರಿಸುವರು ಅರ್ಚಂತಿ=ಪೂಜಿಸುವರು ಉಪಾಸತೇ ಚ=ಉಪಾಸನೆ-ಮಾಡುವವರೂ ಕೂಡ(ಈಗ ವಯಂ ತ್ರಯಃ ಎಂಬುದರಿಂದ ಸೂಚಿತವಾಗುವ ಸಾಮ್ಯವನ್ನು ನಿಷೇಧಿಸುವರು)ಅಹಂ=ನಾನು ಬ್ರಹ್ಮಾ ಚ=ಚತುರ್ಮುಖನೂ ಪೃಥಕ್ ನ=ಶ್ರೀಹರಿಯನ್ನು ಬಿಟ್ಟು ಬೇರೆಯಲ್ಲ ಅಂದರೆ ಸ್ವತಂತ್ರರಲ್ಲ ಸ್ವಯಂ ಹರಿರೇವ ಈಶ್ವರಃ=ಶ್ರೀಹರಿಯೊಬ್ಬನೇ(ಈಶೊಭ್ಯೋಽಪಿ ವರಃ 'ಈ' ಲಕ್ಷ್ಮೀದೇವಿ, 'ಶಂ' ಶತಾನಂದಉಳ್ಳ ಬ್ರಹ್ಮಾ ಇವರೀರ್ವರಿಗಿಂತ ವರ ಶ್ರೇಷ್ಠನು) ಶ್ರೇಷ್ಠನು. ಸ್ವತಂತ್ರನು.

**ವಿಶೇಷ-** ಹರಿಸ್ವಯಂ ಎಂದದ್ದರಿಂದ ಅವನಿಗಿರುವ ಸ್ವಾತಂತ್ರ್ಯ ನಮಗಿಲ್ಲ, ಅವನ ಅಧೀನರು ತಾವು ಎಂದು ಸ್ಪಷ್ಟ ಹೇಳಿದಂತಾಯಿತು.

*ಬ್ರಾಹ್ಮಣರೇ ಪ್ರಾಯಃ ಸರಿಯಾದ ತತ್ವ ತಿಳಿದವರಾದ್ದರಿಂದ ವಂದನೀಯರು ಎಂದು ಹೇಳುವರು.*

**ನ ತೇ ಮಯ್ಯಚ್ಯುತೇಽಜೇ ಚ ಭಿದಾಮಣ್ವಪಿ ಚಕ್ಷತೇ ।**
**ನಾತ್ಮನಶ್ಚ ಜನಸ್ಯಾಪಿ ತದ್ಯುಷ್ಮಾನ್ವಯಮೀಮಹಿ ॥ ೨೨ ॥**

ತೇ=ಆ ಬ್ರಾಹ್ಮಣರು ಮಯಿ=ನನ್ನಲ್ಲಿರುವುದರಿಂದ ಮಯಿ ಎನಿಸಿಕೊಳ್ಳುವ (ರುದ್ರಾಂತರ್ಯಾಮಿಯಾದ)ಅಜೇ=ಅಕಾರವಾಚ್ಯನಾದ ಹರಿಯಿಂದ ಜನಿಸಿದ್ದರಿಂದ,

ಅಜನೆನಿಸಿದ ಚತುರ್ಮುಖನಲ್ಲಿರುವುದರಿಂದ, ಜನ್ಮರಹಿತನಾದುದರಿಂದಲೂ ಅಜಶಬ್ದವಾಚ್ಯನಾದ ಹರಿಯಲ್ಲಿ ಅಚ್ಯುತೇ ಚ=ನಮ್ಮ ಅಂತರ್ಯಾಮಿಯಾಗಿರದೇ ಪ್ರತ್ಯೇಕವಾಗಿರುವ ಶ್ರೀಹರಿಯಲ್ಲಿಯೂ ಭಿದಾಂ=ಭೇದವನ್ನು ಅಣ್ವಪಿ=ಸ್ವಲ್ಪವೂ ನ ಚಕ್ಷತೇ=ತಿಳಿಯಲಾರರು. ಚ=ಮತ್ತು ಜನಸ್ಯ=ಜನನವುಳ್ಳ ಸ್ಥಾವರಜಂಗಮಾತ್ಮಕಪ್ರಪಂಚದ ಆತ್ಮನಃ=ಅಂತರ್ಯಾಮಿಗೂ ಭಿದಾಂ ನ ಪಶ್ಯಂತಿ=ಭೇದವನ್ನು ಕಾಣುವದಿಲ್ಲ. ತತ್=ಆದ್ದರಿಂದ ವಯಂ=ನಾವು ಯುಷ್ಮಾನ್=ಎಲ್ಲರಿಂದ ಪೂಜ್ಯರಾದ ನಿಮ್ಮನ್ನು ಈಮಹಿ=ಈ ಪರಿ ತಿಳಿಯುವೆವು.

**ವಿಶೇಷಾರ್ಥಗಳು-** ಮಯಿ=ನನಲ್ಲಿ ಭಿದಾಂ=ವಿಷ್ಣುವೇ ಇವನು ಎಂದಾಗಲಿ, ಕಿಂಚಿತ್ ಸಾಮ್ಯವಿದೆ ಎಂದಾಗಲಿ ಅನ್ಯಥಾಜ್ಞಾನವನ್ನು ಮಾಡಿಕೊಳ್ಳಲಾರರು. ಅಷ್ಟೇ ಅಲ್ಲ ಶ್ರೀಹರಿಯಿಂದ ವಿಲಕ್ಷಣನು ಅವನ ಅನುಗ್ರಹದಿಂದ ಪಡೆದ ಶಕ್ತಿಯಿಂದ ಜಗತ್ಸಂಹಾರಕನು ಅವನಿಗಿಂತ ಅನಂತಾಂಶಹೀನನು ಎಂದೇ ನನ್ನ ನಿಜವಾದ ಸ್ವರೂಪವನ್ನು ತಿಳಿಯುವರು. ಇದರಂತೆ ಚತುರ್ಮುಖವನನ್ನೂ ಶ್ರೀಹರಿಯನ್ನೂ ಯಥಾಸ್ಥಿತವಾಗಿಯೇ ತಿಳಿಯುವರು. ಅದರಂತೆ ಜನಸ್ಯ=ಜನಿಸುವ ದೇಹ ಮೊದಲಾದ ಜಡಗಳನ್ನೂ ಆತ್ಮನಃ=ಚೇತನರ ತತ್ವವನ್ನೂ ಸರಿಯಾಗಿಯೇ ತಿಳಿಯುವರು.

ನತೇ=ನನ್ನಿಂದ, ಬ್ರಹ್ಮ ಮುಂತಾದವರಿಂದ ನಮಸ್ಕೃತನಾದ ಅಚ್ಯುತೇ ಏವ= ಶ್ರೀಹರಿಯಲ್ಲಿಯೇ ಸ್ವಾತಂತ್ರ್ಯವನ್ನು ತಿಳಿಯುವರು. ಆದಕ್ಕೆ ಕಾರಣ ಕ್ಷತೇ ಚ ಎಂಬುದು ಅಂದರೆ ಪ್ರಳಯಕಾಲದಲ್ಲಿಯೂ 'ಬ್ರಹ್ಮಚರ್ಮಶಿರಃಪಟ್ಟಿ ದಿಕ್ಪಾಲೋರ್ಧ್ವಾಂಗಭೂಷಣಃ' ಎಂದಿರುವುದರಿಂದ ಬ್ರಹ್ಮದೇವರಲ್ಲಿ, ಕೈಮುತ್ಯದಿಂದ ನನ್ನಲ್ಲಿಯೂ ಅಸ್ವಾತಂತ್ರ್ಯವು ಸಿದ್ಧವಾಗುವುದು. ಆಚಾರ್ಯರು ಹಿಂದೆಯೇ ಈ ರೀತಿ ಅರ್ಥಕೊಡುವ ಪ್ರಮಾಣಗಳನ್ನು ಅನೇಕ ಕಡೆ ಉದಾಹರಿಸಿರುವರು. ಕಾರಣ ಇಲ್ಲಿ ಮತ್ತೆ ಹೇಳಲಿಲ್ಲ. ಮತ್ತು ಆಜಶಬ್ದಕ್ಕೆ ಬೇರೆ ಅರ್ಥ ಆಗಬಹುದು. ಕಾರಣ ಮೂಲಕಾರರು ಭಗವಂತನಲ್ಲಿ ಅಚ್ಯುತೇ ಮಯಿ ಭಕ್ತಿಂ ಎಂದು ಹೇಳಿದ್ದರಿಂದ ಬೇರೆ ಅರ್ಥಕ್ಕೆ ಅವಕಾಶವನ್ನು ನೀಡಿಲ್ಲ ಎಂದು ತಿಳಿಯಬೇಕು. ಜನಸ್ಯ=ಚೇತನರಿಗೆ ನಾತ್ಮನಃ=ಜಡಕ್ಕೆ ಭಿದಾಂ=ಹಿಂದೆ ಹೇಳಿದ ಅನ್ಯಥಾಜ್ಞಾನವನ್ನು ಮಾಡಿಕೊಳ್ಳುವುದಿಲ್ಲ. ನನ್ನಲ್ಲಿ ಚೇತನರಲ್ಲಿ ಜಡದಲ್ಲಿ ಇರುವ ಅಚ್ಯುತೇ=ಶ್ರೀಹರಿಯಲ್ಲಿ ಅಣು ಅಪಿ ಭೇದಃ ನ ಚಕ್ಷತೇ=ಭೇದವನ್ನು ತಿಳಿಯುವದಿಲ್ಲ. ಕಾರಣ ನಾವಾಗಿಯೇ ನಿಮ್ಮನ್ನು ಕುರಿತು ಬರುವೆವು. (ಸ್ವಯಮೇವ ಇಮಹಿ)

*ನಿಮ್ಮಂಥವರ ದರ್ಶನದಿಂದ ಶುದ್ಧಿ ಆಗುವದೆಂದು ರುದ್ರದೇವರು ಹೇಳುವರು.*

**ನ ಹ್ಯಮ್ಮಯಾನಿ ತೀರ್ಥಾನಿ ನ ದೇವಾ ಮೃಚ್ಛಿಲಾಮಯಾಃ ।**
**ತೇ ಪುನಂತ್ಯುರುಕಾಲೇನ ಯೂಯಂ ದರ್ಶನಮಾತ್ರತಃ ॥ ೨೩ ॥**

ಅಮ್ಮಯಾನಿ=ಕೇವಲ ಜಡವಾದ ನೀರುಗಳೇ ತೀರ್ಥಾನಿ ನ ಹಿ=ತೀರ್ಥಗಳಲ್ಲ. ಮೃಚ್ಛಿಲಾಮಯಾಃ=ಮಣ್ಣಿನ ಶಿಲೆಯ ಪ್ರತಿಮೆಗಳೇ ದೇವಾಃ ನ=ದೇವತೆಗಳಲ್ಲ. ಕಿಂತು ಜಡವಾದ ಆ ನೀರು ಹಾಗೂ ಪ್ರತಿಮೆಗಳಲ್ಲಿ ಅದರ ಅಭಿಮಾನಿದೇವತೆಗಳು ಇರುತ್ತಾರೆ. ಆ ಅಭಿಮಾನಿದೇವತೆಗಳೂ ಸಹ ಶೀಘ್ರ ಫಲಪ್ರದರಲ್ಲ. ತೇ=ತೀರ್ಥಾಭಿಮಾನಿ-ಗಳಾಗಲಿ, ಪ್ರತಿಮಾಂತರ್ಗತರಾದ ದೈವಗಳಾಗಲಿ ಉರುಕಾಲೇನ ಪುನಂತಿ=ಅಂತಃಕರಣ ಶುದ್ಧಿಯನ್ನಿತ್ತು, ಆ ಪುಣ್ಯದಿಂದ ಗುರ್ವಾದಿಪ್ರಾಪ್ತಿಯಾಗಿ, ಶಾಸ್ತ್ರ ಉಪದೇಶವಾಗಿ, ಬಹುಕಾಲದಿಂದ ಪಾವನಗೊಳಿಸುವವು. ಯೂಯಂ=ನೀವು ದರ್ಶನಮಾತ್ರತಃ=ಕೇವಲ ದರ್ಶನವಾದ ಕ್ಷಣ ಉಪದೇಶ ಮಾಡಿ ಶೀಘ್ರ ಪಾವನ ಮಾಡುತ್ತೀರಿ.

*ನಮ್ಮಿಂದ ಸಮ್ಮಾನಿತರಾದ ಬ್ರಾಹ್ಮಣರು ಎಲ್ಲ ಬುದ್ಧಿವಂತರಿಂದಲೂ ಪೂಜ್ಯರು ಎಂದು ಹೇಳುವರು.*

**ಬ್ರಾಹ್ಮಣೇಭ್ಯೋ ನಮಸ್ಯಾಮೋ ಯೇಽಸ್ಮದ್ರೂಪಂ ತ್ರಯೀಮಯಮ್ ।**
**ಬಿಭ್ರತ್ಯಾತ್ಮಸಮಾಧಾನಂ ತಪಃಸ್ವಾಧ್ಯಾಯಸಂಯಮೈಃ ॥ ೨೪ ॥**

ಯೇ=ಯಾರು ತಪಃಸ್ವಾಧ್ಯಾಯಸಂಯಮೈಃ=ತಪಸ್ಸು,ವೇದಾಧ್ಯಯನ ಹಾಗು ಇಂದ್ರಿಯನಿಗ್ರಹಗಳಿಂದ ತ್ರಯೀಮಯಂ=ವೇದಪ್ರತಿಪಾದ್ಯನಾದ ಅಸ್ಮದ್ರೂಪಂ=ನಮ್ಮನ್ನು ನಿರ್ಮಿಸುವ ಅಥವಾ ನಮಗೆ ಸ್ವರೂಪಾನಂದಪ್ರದನೂ ಆದ ಆತ್ಮಸಮಾಧಾನಂ= ಮನಸ್ಸಿನಲ್ಲಿ ಇರುವ ಶ್ರೀಹರಿಯನ್ನು ಬಿಭ್ರತಿ=ಶಿಷ್ಯ ಪ್ರಶಿಷ್ಯರಿಗೆ ಉಪದೇಶ ಮಾಡುವ ಮೂಲಕ ಭರಿಸುವರೋ ಅಂತಹ ಬ್ರಾಹ್ಮಣೇಭ್ಯಃ=ಬ್ರಾಹ್ಮಣರಿಗೆ ನಮಸ್ಯಾಮಃ= ನಮಸ್ಕರಿಸುವೆವು.

**ವಿಶೇಷ-** 'ಆತ್ಮಸಮಂ=ತಮಗೆ ಯೋಗ್ಯವಾದ ಆಧಾನಂ ಯಸ್ಯ' ಹೀಗೂ ವಿಗ್ರಹ ಮಾಡಬಹುದು.

*ನಮ್ಮ ದರ್ಶನವಾಯಿತಲ್ಲ ಹೊರಡಲಿಲ್ಲವೇಕೆ ಎಂದರೆ ದರ್ಶನ ಹೇಗೋ ಹಾಗೆಯೇ ಶ್ರವಣಾದಿಗಳಿಂದಲೂ ಶುದ್ಧಿಯಾಗುವುದು ಎಂದು ಹೇಳುವರು.*

**ಶ್ರವಣಾದ್ ದರ್ಶನಾದ್ವಾಪಿ ಮಹಾಪಾತಕಿನೋಽಪಿ ವಃ ।**
**ಶುದ್ಧ್ಯೇರನ್ನಂತ್ಯಜಾಶ್ಚಾಪಿ ಕಿಮು ಸಂಭಾಷಣಾದಿಭಿಃ ॥ ೨೫ ॥**

ಮಹಾಪಾತಕಿನಃ ಅಪಿ=ಬಹಳ ಪಾಪಿಗಳೂ ಕೂಡ ವಃ=ನಿಮ್ಮ ಚರಿತ್ರೆಯನ್ನು ಶ್ರವಣಾತ್=ಕೇಳುವುದರಿಂದ ದರ್ಶನಾತ್=ನೋಡುವುದರಿಂದ ಶುದ್ಧ್ಯೇರನ್=ಪವಿತ್ರರಾಗುವರು ವೇದಾನಧಿಕಾರಿಗಳಾದ ಅಂತ್ಯಜಾಃ ಅಪಿ=ವರ್ಣಬಾಹ್ಯರೂ ಶುದ್ಧರಾಗುವರು ಕಿಮು ಸಂಭಾಷಣಾದಿಭಿಃ=ನಿಮ್ಮೊಡನೆ ಮಾತಾಡುವುದು ಆದಿ ಪದದಿಂದ ನಮಸ್ಕರಿಸುವುದು, ನಾಮಸ್ಮರಣಗಳಿಂದ ಪವಿತ್ರರಾಗುವುದು ಕೈಮುತ್ಯಸಿದ್ಧ ಆದ್ದರಿಂದ ನಿಮ್ಮನ್ನು ಮಾತಾಡಿಸಲು ನಾನು ನಿಂತಿರುವೆನು ಎಂದು ಭಾವ.

**ಇತಿ ಚಂದ್ರಲಲಾಮಸ್ಯ ಧರ್ಮಗುಹ್ಯೋಪಬೃಂಹಿತಮ್ ।**
**ವಚೋಽಮೃತಾಯನಮೃಷಿರ್ನಾತೃಪ್ಯತ್ ಕರ್ಣಯೋಃ ಪಿಬನ್ ॥ ೨೬ ॥**

ಋಷಿಃ=ಮಾರ್ಕಂಡೇಯನು ಇತಿ=ಈ ರೀತಿಯಾದ ಚಂದ್ರಲಲಾಮಸ್ಯ=ಚಂದಶೇಖರನಾದ ರುದ್ರದೇವರ ಧರ್ಮಗುಹ್ಯೋಪಬೃಂಹಿತಂ=ಧರ್ಮರಹಸ್ಯದಿಂದ ಕೂಡಿದ ಅಮೃತಾಯನಂ=ಮೋಕ್ಷ ಸಾಧನವಾದ್ದರಿಂದ ಮೋಕ್ಷಕ್ಕೆ ಆಶ್ರಯವೆನಿಸಿದ ಅಮೃತದಂತೆ ತೃಪ್ತಿ ಜನಕವಾದ ವಚಃ=ಮಾತುಗಳನ್ನು ಕರ್ಣಯೋಃ=ಕಿವಿಗಳಿಂದ ಪಿಬನ್=ಪಾನಮಾಡಿ ನ ಅತೃಪ್ಯತ್=ತೃಪ್ತಿ ಹೊಂದಲಿಲ್ಲ.

**ಸ ಚಿರಂ ಮಾಯಯಾ ವಿಷ್ಣೋರ್ಭ್ರಾಮಿತಃ ಕರ್ಶಿತೋ ಭೃಶಮ್ ।**
**ಶಿವವಾಗಮೃತಧ್ವಸ್ತಕ್ಲೇಶಪುಂಜಸ್ತಮಬ್ರವೀತ್ ॥ ೨೭ ॥**

ಸಃ=ಮುನಿಯು ಚಿರಂ=ಬಹುಕಾಲ ವಿಷ್ಣೋಃ ಮಾಯಯಾ=ಭಗವಂತನ ಇಚ್ಛೆಯಿಂದ ಭ್ರಾಮಿತಃ=ಸಮಾಧಿಯಿಂದ ಚಲಿತನಾಗಿ ಭೃಶಂ ಕರ್ಶಿತಃ=ಬಹಳ ಕಷ್ಟಪಟ್ಟನು (ಇದರಿಂದ ಸಂಯಮಿಗಳಿಗೆ ಸಮಾಧಿಗಿಂತ ಹೆಚ್ಚಿನ ಸುಖ ಮತ್ತೊಂದಿಲ್ಲವೆಂದು ಸೂಚಿತವಾಗುವುದು.) ಶಿವವಾಗಮೃತಧ್ವಸ್ತಕ್ಲೇಶಪುಂಜಃ= ರುದ್ರದೇವರ ಮಾತುಗಳೆಂಬ ಅಮೃತದಿಂದ ನಾಶವಾದ ಕಷ್ಟ ಪರಂಪರೆಯುಳ್ಳವನಾಗಿ ತಂ=ರುದ್ರದೇವರನ್ನು ಕುರಿತು ಅಬ್ರವೀತ್=ಮಾತನಾಡಿದನು.

**ವಿಶೇಷ-** ಯದ್ಯಪಿ ಹಿಂದೆ ಎಂಟನೆಯ ಅಧ್ಯಾಯದ ೨೬ ನೇ ಶ್ಲೋಕದಲ್ಲಿ 'ತದ್ದರ್ಶನಾತ್ ವೀತಪರಿಶ್ರಮೋ ಮುದಾ' ಎಂದು ಹೇಳಿದ್ದರಿಂದ ದಾನವಾರಿಯಾದ ಶ್ರೀಹರಿಯ ಶಿಶುರೂಪ ನೋಡಿದಾಗ ಅದರಿಂದಲೇ ಕಷ್ಟ ನಾಶವಾಗಿದೆ. ಆದರೂ

ಅದು ಕೇವಲ ಇಬ್ಬರಿಗೆ ಮಾತ್ರ ಗೊತ್ತು.(ಶ್ರೀಹರಿಗೆ ಮುನಿಗೆ ಮಾತ್ರ) ಈಗ ಆದದ್ದು ಬಹಳ ಜನರಿಗೆ ತಿಳಿಯುವಂತಹದ್ದು ಎಂದು ಸೂಚಿಸಲು ಲೋಕರೀತಿಯಿಂದ ಬೇರೆ ಕಡೆ (ಶ್ರೀಹರಿಯಲ್ಲಿ) ಅನ್ವಯಿಸಲಾಗದ ರುದ್ರಾದಿಪದವನ್ನು ಪ್ರಯೋಗಿಸದೇ 'ಶಿವವಾಕ್' ಎಂದು ಪ್ರಯೋಗಿಸಿದ್ದರಿಂದ ಶಿವ=ಮಂಗಲಕರವಾದ (ವಾಕ್ । ತಯಾ) ಮಾತುಗಳಿಂದ ಎಂದರ್ಥ ಮಾಡಿ ಶ್ರೀಹರಿಯ ಮಾತನ್ನೂ ಸಂಗ್ರಹಿಸುವ ಅಭಿಪ್ರಾಯವಿದೆ ಎಂದು ತಿಳಿಯಬೇಕು.

*ರುದ್ರದೇವರ ಮಾತು ಭಕ್ತರ ಭಕ್ತಿಗನುಸಾರವಾಗಿಯೇ ಹೊರತು ವಾಸ್ತವಿಕವಲ್ಲ ಎಂದು ಮನಸ್ಸಿನಲ್ಲಿ ಚಿತ್ರಿಸುತ್ತ , ಅಪರೋಕ್ಷವಾಗಿ ಸ್ಥಿತಿಯನ್ನು ಹೇಳಿ ಪರ್ಯವಸಾನಗೊಳಿಸುವನು.*

**ಋಷಿರುವಾಚ -**

**ಅಹೋ ಈಶ್ವರ ಚರ್ಯೇಯಂ ದುರ್ವಿಭಾವ್ಯಾಶರೀರಿಣಾಮ್ ।**
**ಯನ್ನಮಂತೀಶಿತವ್ಯಾನಿ ಸ್ತುವಂತಿ ಜಗದೀಶ್ವರಾಃ ॥ ೨೮ ॥**

ಶರೀರಿಣಾಂ=ನಿಂದಿತವಾದ ಶರೀರಧಾರಣ ಮಾಡಿದ ಜನರಿಗೆ ಈಶ್ವರಚರ್ಯಾ= ಶ್ರೀಹರಿಯ ಹಾಗು ರುದ್ರದೇವರ ವ್ಯಾಪಾರವು ದುರ್ವಿಭಾವ್ಯಾ=ತಿಳಿಯಲಾರದ್ದು ಯತ್=ಯಾವಕಾರಣ ಜಗದೀಶ್ವರಾಃ=ಜಗನ್ನಿಯಾಮಕರಾದವರು ಈಶಿತವ್ಯಾನಿ= ತಮ್ಮಿಂದ ನಿಯಮ್ಯರಾದವರನ್ನು ನಮಂತಿ=ನಮಸ್ಕರಿಸುವರು ಸ್ತುವಂತಿ=ಸ್ತೋತ್ರ ಮಾಡುವರು ಅಹೋ=ಆಶ್ಚರ್ಯ.

**ವಿಶೇಷ-** ಇಲ್ಲಿ ಈಶ್ವರಪದದಿಂದ ತಾನು ಕಂಡ ಶ್ರೀಹರಿಯನ್ನೂ ಕಟಾಕ್ಷಿಕರಿಸುವನು ಇಲ್ಲವಾದರೆ ರುದ್ರನಲ್ಲಿ ಅಸಂಭಾವಿತವಾದ ಗುಣಗಳನ್ನು ಹೇಳುವುದು ಅಸಂಗತವಾಗುವುದು.

*ಹಾಗಾದರೆ ರುದ್ರದೇವರು ಹೇಳಿದ್ದು ವ್ಯರ್ಥವೇ ಎನ್ನುವ ಸಮಸ್ಯೆಗೆ ಪರಿಹಾರವನ್ನು ಮಾರ್ಕಂಡೇಯರು ಹೀಗೆ ಹೇಳುತ್ತಾರೆ-*

**ಧರ್ಮಂ ಗ್ರಾಹಯಿತುಂ ಪ್ರಾಯಃ ಪ್ರವಕ್ತಾರಶ್ಚ ದೇಹಿನಾಮ್ ।**
**ಆಚರಂತ್ಯನುಮೋದಂತೇ ಕ್ರಿಯಮಾಣಸ್ತುವಂತಿ ಚ ॥ ೨೯ ॥**

ದೇಹಿನಾಂ=ಜನರಿಗೆ ಧರ್ಮಂ ಗ್ರಾಹಯಿತುಂ=ಈ ರೀತಿ ಧರ್ಮವನ್ನು ನೀನೂ ಅನುಷ್ಠಾನ ಮಾಡಬೇಕೆಂದು ತಿಳಿಸಲು ಪ್ರವಕ್ತಾರಃ=ಧರ್ಮವನ್ನು ಹೇಳುವರು ಅಲ್ಲದೆ

ಪ್ರಾಯಃ=ಬಹಳವಾಗಿ ಆಚರಂತಿ=ತಾವು ಮಾಡುವರು ಕ್ರಿಯಮಾಣಂ ಅನುಮೋದಂತೇ=ಧರ್ಮಾನುಷ್ಠಾನ ಮಾಡುವವನನ್ನು ಅನುಮೋದಿಸುವರು. ಪ್ರೋತ್ಸಾಹಿಸುವರು. ಸ್ತುವಂತಿ ನೀನು ಮಹಾತ್ಮನು ಎಂದು ಸ್ತುತಿಸುವರು. ಅಥವಾ ತಂ= ಅವನು ಅನುಷ್ಠಾನಮಾಡಿದ ಧರ್ಮವನ್ನು ಸ್ತುವಂತಿ=ಸ್ತುತಿಸುವರು.

*ವಿಧಿಬಂಧರಹಿತರಾದವರು ಧರ್ಮಾಚರಣೆ ಮಾಡಿದರೆ ತೇಜಸ್ಸಿಗೆ ಭಂಗವಾಗುವುದು ಎಂದರೆ ಹೇಳುವನು.*

**ನೈತಾವತಾ ಭಗವತಃ ಸ್ವಮಾಯಾಮಯವೃತ್ತಿಭಿಃ ।**
**ಪ್ರದುಷ್ಯೇತಾನುಭಾವಸ್ತೇ ಮಾಯಿನಃ ಕುಹಕೈರ್ಯಥಾ ॥ ೩೦ ॥**

ಸ್ವಮಾಯಾಮಯವೃತ್ತಿಭಿಃ=ತನ್ನ ಇಚ್ಛೆಯೇ ಪ್ರಧಾನವಾಗಿವುಳ್ಳ ಧರ್ಮಾದ್ಯಾ-ಚಾರಗಳಿಂದ ತೇ=ನಿಮ್ಮ ಅನುಭಾವಃ=ಸಾಮರ್ಥ್ಯವು ನ ಪ್ರದೂಷ್ಯೇತ=ಕಡಿಮೆ ಎಂದೇನಾಗಲಾರದು ದೂಷಿತವಾಗದು. ಏತಾವತಾ=ಸ್ತುತಿಮಾಡುವ ಮಾತ್ರದಿಂದಲೂ ದೂಷಿತವಾಗದು ಅದಕ್ಕೆ ದೃಷ್ಟಾಂತ ಅಮಾಯಿನಃ=ಕಪಟವಿಲ್ಲದವನು ಕುಹಕೈಃ= ವಿನೋದಕ್ಕಾಗಿ ಮಾಡಿದ ವೇಷಗಳಿಂದ ಅನುಭಾವಃ=ಸ್ವಾಭಾವಿಕ ರೂಪವು ಯಥಾ ನ ಪ್ರದೂಷ್ಯತಿ=ದೂಷಿತವಾಗುವುದಿಲ್ಲವೋ ಹಾಗೆ ಅಥವಾ ಮಾಯಿನಃ=ಇಂದ್ರಜಾಲ ವಿದ್ಯೆಬಲ್ಲವನಿಗೆ ಕುಹಕೈಃ=ತನ್ನಿಂದ ಕಲ್ಪಿತವಾದ ಇಂದ್ರಜಾಲಿಕ ವ್ಯಾಪಾರದಿಂದ ಅನುಭಾವಃ=ಯಥಾರ್ಥಜ್ಞಾನವು ನ ಪ್ರದೂಷ್ಯತಿ=ಹೋಗಲಾರದು. ಅಂದರೆ ಉಸಕನ್ನು ಅಕ್ಕಿ ಮಾಡಿ ಹಗ್ಗವನ್ನೇ ಕುಂಡಲವನ್ನಾಗಿ ಮಾಡಿ ಜನರಿಗೆ ತೋರಿಸುವಾಗ ಅವನಿಗೆ ಇವು ಉಸುಕಿನ ಕಣಗಳು ಇದು ಹಗ್ಗ ಎನ್ನುವ ಜ್ಞಾನ ಹೋಗಿರುವುದಿಲ್ಲ ಹಾಗೆ. ಅಥವಾ ನಿನ್ನ ದಾಸರಿಂದ ಭಿನ್ನರಾದ ಬೇರೆಯವರಿಗೆ ಕುಹಕೈಃ ಇಂದ್ರಜಾಲದಿಂದ ಹೇಗೋ ಹಾಗೆ ನ ಪ್ರದೂಷ್ಯತಿ । ತೇಜೀಯಸಾಂ ನೈವ ದೋಷಃ ಎಂದಿರುವದರಿಂದ ಅಧರ್ಮಾಚರಣೆಯೇ ದೋಷವಲ್ಲ ಎಂದ ಮೇಲೆ ಧರ್ಮಾಚರಣೆಯು ದೋಷವಲ್ಲ ಎಂಬುದು ಕೈಮುತ್ಯಸಿದ್ಧ. ಮತ್ತು 'ನ ಚ ಮಾಯಾವಿನಾ ಮಾಯಾ ದೃಶ್ಯತೇ' ಎಂದಿರುವುದರಿಂದ(ಭಗವಂತ ತಾನು ಮಾಡಿದ ನಾಟಕವನ್ನು ತಾನು ನೋಡಲಾರನು ಎಂದು ಅಭಿಪ್ರಾಯ) ಯಾವ ಮಾಯಾವಿಯೂ ತಾನು ನಿರ್ಮಿಸಿದ ಮಾಯೆಯನ್ನು ತಾನು ನೋಡಲಾರನು ಎಂದು ಭಾವ.

*ಬೇರೆ ರೀತಿಯಿಂದ ದೋಷಾಭಾವವನ್ನು ಹೇಳುವರು.*

**ಸೃಷ್ಟ್ವೇದಂ ಮನಸಾ ವಿಶ್ವಂ ಸ್ವಾತ್ಮನಾಽನುಪ್ರವಿಶ್ಯ ಯಃ ।**
**ಗುಣೈರ್ಕುರ್ವದ್ಭಿರಾಭಾತಿ ಕರ್ತೇವ ಸ್ವಪ್ನದೃಗ್ಯಥಾ ॥ ೩೧ ॥**

ಯಃ=ಯಾವ ಪರಮಾತ್ಮನು ಮನಸಾ=ಸ್ವೇಚ್ಛೆಯಿಂದ ಇದಂ ವಿಶ್ವಂ=ಈ ಪ್ರಪಂಚವನ್ನು ಸೃಷ್ಟ್ವಾ=ನಿರ್ಮಿಸಿ ಸ್ವಾತ್ಮನಾ=ಅಂತರ್ಯಾಮಿ ರೂಪದಿಂದ ಅನುಪ್ರವಿಶ್ಯ= ಪ್ರವೇಶಮಾಡಿ(ತತ್ಸೃಷ್ಟ್ವಾ ತದೇವಾನುಪ್ರಾವಿಶತ್ ಎಂದು ಶ್ರುತಿ ಇದೆ.) ಕುರ್ವದ್ಭಿಃ= ಶ್ರವಣದರ್ಶನಾದಿಗಳನ್ನು ಮಾಡುವ(ಕರಣೇ ಕರ್ತೃತ್ವೋಪಚಾರ)ಗುಣೈಃ=ಪ್ರಾಣನಿಗಿಂತ ಅಪ್ರಧಾನವಾದ ಇಂದ್ರಿಯಗಳಿಂದ ಕರ್ತಾ ಇವ ಆಭಾತಿ=ನಾನೇ ಕರ್ತಾ ಎಂಬ ದುರಭಿಮಾನವುಳ್ಳ ಜೀವನಂತೆ ತೋರುವನು. ಆದರೆ ಇಂದ್ರಿಯಗುಣ ದೋಷಗಳಿಂದ ಲಿಪ್ತನಾಗುವುದಿಲ್ಲ. ಯಥಾ ಸ್ವಪ್ನದೃಕ್=ಹೇಗೆ ಕನಸು ಕಾಣುವವನು. ಶ್ರೀಹರಿಯು ತನ್ನ ಇಚ್ಛೆಯಿಂದ ಜೀವನ ವಾಸನಾವನ್ನು ಉಪಾದಾನವನ್ನಾಗಿ ಮಾಡಿ ದೇಹದಲ್ಲಿ ಸೃಷ್ಟಿಸಿದ ಆನೆ ಕುದುರೆ ಮುಂತಾದವನ್ನು ನೋಡುವ ಜೀವನು ನಂತರ ಆ ಆನೆ ಮುಂತಾದವುಗಳ ಸಂಬಂಧವುಳ್ಳವನಾಗುವದಿಲ್ಲವೋ ಹಾಗೆ ಅಥವಾ ಯಥಾ ಸ್ವಪ್ನದೃಕ್ ಎಂದರೆ ಶ್ರೀಹರಿಯು ಜೀವನವಾಸನೋಪಾದಾನಕವಾದ ವಿಚಿತ್ರ ಸೃಷ್ಟಿಯನ್ನು ಮಾಡಿ ಆ ಸ್ವಾಪ್ನಪದಾರ್ಥಗಳನ್ನು ನೋಡಿದರೂ ಅವುಗಳಿಂದ ಅಸಂಬದ್ಧನೋ ಹಾಗೆಂದರ್ಥ.

**ತಸ್ಮೈ ನಮೋ ಭಗವತೇ ತ್ರಿಗುಣಾಯ ಗುಣಾತ್ಮನೇ ।**
**ಕೇವಲಾಯಾದ್ವಿತೀಯಾಯ ಗುರವೇ ಬ್ರಹ್ಮಮೂರ್ತಯೇ ॥ ೩೨ ॥**

ತ್ರಿಗುಣಾಯ=ಸತ್ವರಜಸ್ತಮೋಗುಣಗಳಿಗೆ ನಿಯಾಮಕನಾದ ಗುಣಾತ್ಮನೇ= ಜ್ಞಾನಾನಂದಾದಿಗುಣಸ್ವರೂಪನಾದ ಕೇವಲಾಯ=ಜಡಾಮಿಶ್ರನಾದ ಅದ್ವಿತೀಯಾಯ= ಸಮಾಧಿಕರಹಿತನಾದ ಗುರವೇ=ಚತುರ್ಮುಖಾದಿಗಳಿಗೆ ವೇದೋಪದೇಶಮಾಡುವ ಬ್ರಹ್ಮಮೂರ್ತಯೇ=ಬ್ರಹ್ಮರೂಪನಾಗಿರುವ ತಸ್ಮೈ=ಅಂತಹ ಭಗವತೇ=ಭಗವಂತನಿಗೆ ನಮಃ=ನಮಸ್ಕಾರವು.

**ವಿಶೇಷ-** ತಸ್ಮೈ ಎಂದದ್ದರಿಂದ ಎದುರಿಗೆ ಇರುವ ರುದ್ರದೇವರನ್ನೂ ಬಿಟ್ಟು ಮುಖ್ಯನಾದವನೊಬ್ಬ ಪರೋಕ್ಷವಾಗಿರುವನು ಎಂದು ಸೂಚಿಸುವರು.

**ಕಂ ವೃಣೇಽತಃ ಪರಂ ಭೂಮನ್ ವರಂ ತ್ವತ್ವರದರ್ಶನಾತ್ ।**
**ಯದ್ದರ್ಶನಾತ್ ಪೂರ್ಣಕಾಮಃ ಸತ್ಯಕಾಮಃ ಪುಮಾನ್ ಭವೇತ್ ॥ ೩೩ ॥**

ಭೂಮನ್=ಪೂರ್ಣನೇ ಅತಃಪರಂ=ಭಗವಂತನ ದರ್ಶನವಾದ ಮೇಲೆ ಪುಮಾನ್ =ಮನುಷ್ಯನು ಯದ್ದರ್ಶನಾತ್=ಯಾವ ಶ್ರೀಹರಿಯ ದರ್ಶನದಿಂದ ಪೂರ್ಣಕಾಮಃ= ಸರ್ವಾಭೀಷ್ಟಗಳನ್ನು ಪಡೆದವನು ಮತ್ತು ಸತ್ಯಕಾಮಃ=ಸತ್ಯನಾಮಕಹರಿಯ ಕಾಮಕ್ಕೆ ಅನುಗುಣವಾದ ಕಾಮವುಳ್ಳವನಾಗುವನು ಅಂಥ ಪರದರ್ಶನಾತ್=ಶ್ರೇಷ್ಠರಾದವರನ್ನು ತೋರಿಸುವ(ಪರಾನ್ ದರ್ಶಯತೀತಿ ಪರದರ್ಶನಃ ತಸ್ಮಾತ್) ತ್ವತ್ತಃ=ನಿನ್ನಿಂದ ಪರಂ ಕಂ ವರಂ ವೃಣೇ=ಮೊದಲು ಸಿಗದಿರುವ ಯಾವ ಬೇರೆಯ ವರವನ್ನು ಕೇಳಲಿ.

**ವಿಶೇಷ-** ಮೋಕ್ಷಪ್ರದವಾದ ಭಗಂವತನ ದರ್ಶನವಾದ ಮೇಲೆ ಅದಕ್ಕಿಂತ ಹೆಚ್ಚಿನ ವರ ಯಾವುದಿದೆ ಅದರಿಂದಲೇ ಎಲ್ಲ ಪೂರ್ತಿಯಾಗಿದೆ ಎಂದು ಭಾವ.

*ಹಾಗಾದರೆ ವರಂ ವೃಣೀಷ್ವ ಎಂಬ ನನ್ನ ಆಜ್ಞೆಯನ್ನು ಉಲ್ಲಂಘಿಸುವೆಯಾ ಎಂದರೆ ಹೇಳುವನು*

**ವರಮೇತಂ ವೃಣೇಽಥಾಪಿ ಪೂರ್ಣಕಾಮಾಭಿವರ್ಷಣಾತ್ ।**
**ಭಗವತ್ಯಚ್ಯುತೇ ಭಕ್ತಿಂ ತತ್ಪರೇಷು ತಥಾ ತ್ವಯಿ ॥ ೩೪ ॥**

ಅಥಾಪಿ=ವರವನ್ನು ಬೇಡಬಾರದು ಆದರೂ ನಿಮ್ಮ ಮಾತು ಮೀರಬಾರದೆಂದು ಏತಂ=ಈ ವರಂ=ವರವನ್ನು ವೃಣೇ=ಕೇಳುವೆ ಅದೇನೆಂದರೆ ಪೂರ್ಣಕಾಮಾ-ಭಿವರ್ಷಣಾತ್=ಪೂರ್ಣಾಭೀಷ್ಟಪ್ರದನಾದ ತ್ವತ್ತಃ=ನಿನ್ನಿಂದ ಭಗವತಿ=ಷಡ್ಗುಣಪೂರ್ಣ ನಾದ ಅಚ್ಯುತೇ=ಚ್ಯುತಿರಹಿತನಾದ ಶ್ರೀಹರಿಯಲ್ಲಿ ಭಕ್ತಿಂ=ಭಕ್ತಿಯನ್ನು ತಥಾ ಹಾಗೆಯೇ ತತ್ಪರೇಷು=ಆ ಭಗವಂತನಲ್ಲಿ ಆಸಕ್ತರಾದ ಬ್ರಹ್ಮ-ಸರಸ್ವತಿ, ವಾಯು-ಭಾರತಿಯರಲ್ಲಿ ತ್ವಯಿ ಚ=ನಿನ್ನಲ್ಲಿಯೂ ಭಕ್ತಿಂ=ಭಕ್ತಿಯನ್ನು ಕೇಳುವೆನು ಎಂದು ಹೇಳಿದನು.

**ಸೂತ ಉವಾಚ-**

**ಇತ್ಯರ್ಥಿತೋಽಭಿಷ್ಟುತಶ್ಚ ಮುನಿನಾ ಸೂಕ್ತಯಾ ಗಿರಾ ।**
**ತಮಾಹ ಭಗವಾನ್ ಶರ್ವಃ ಶರ್ವಯಾ ಚಾಭಿನಂದಿತಃ ॥ ೩೫ ॥**

ಮುನಿನಾ=ಮಾರ್ಕಂಡೇಯನಿಂದ ಸೂಕ್ತಯಾ ಗಿರಾ=ಚೆನ್ನಾಗಿ ಉಚ್ಚರಿಸಿದ ಮಾತುಗಳಿಂದ ಇತಿ=ಈ ರೀತಿ ಅರ್ಥಿತಃ=ಪ್ರಾರ್ಥಿತನಾಗಿ ಅಭಿಷ್ಟುತಃ=ಸ್ತುತಿಸಲ್ಪಟ್ಟು ಶರ್ವಃ=ರುದ್ರದೇವರು ಶರ್ವಯಾ ಚ=ಪಾರ್ವತಿಯಿಂದ ಸಹಿತರಾಗಿ ಅಭಿನಂದಿತಃ= ಅಭಿನಂದಿಸಲ್ಪಟ್ಟು ತಂ ಆಹ=ಮುನಿಯನ್ನು ಕುರಿತು ಹೇಳಿದರು.

**ಕಾಮಸ್ತೇಽಸ್ತು ಮಹರ್ಷೇ ಸತ್ಯೋ(ಅಸ್ತು)ಭಕ್ತಿಮಾಂಸ್ತ್ವಮಧೋಕ್ಷಜೇ ।**
**ಆಕಲ್ಪಾಂತಂ ಯಶಃ ಪುಣ್ಯಮಜರಾಮರತಾ ತಥಾ ॥ ೩೬ ॥**

**ಜ್ಞಾನಂ ತ್ರೈಕಾಲಿಕಂ ಬ್ರಹ್ಮನ್ ವಿಜ್ಞಾನಂ ಚ ವಿರಕ್ತಿಮತ್ ।**
**ಬ್ರಹ್ಮವರ್ಚಸ್ವಿತಾ ಭೂಯಾತ್ ಪುರಾಣಾಚಾರ್ಯತಾಽಸ್ತು ತೇ ॥ ೩೭ ॥**

ಹೇ ಮಹರ್ಷೇ=ಮಾರ್ಕಂಡೇಯನೇ ತ್ವಂ=ನೀನು ಅಧೋಕ್ಷಜೇ=ಶ್ರೀ ಹರಿಯಲ್ಲಿ ಭಕ್ತಿಮಾನ್=ಭಕ್ತಿಯುಳ್ಳವನಾಗಿರುವಿ(ವಿಜಯಧ್ವಜೀಯ ಪ್ರಕಾರ ಭೂಯಾಃ ಎಂದು ಶೇಷಮಾಡಿ ಭಕ್ತಿವಂತನಾಗು ಎಂದೂ ಅರ್ಥ)ಕಾರಣ ತೇ=ನಿನ್ನ ಕಾಮಃ=ಸಂಕಲ್ಪವು, ಇಚ್ಛೆಯು ಸತ್ಯಃ=ವ್ಯರ್ಥವಾಗದು.(ನಿಜವಾಗುವುದು)ಆಕಲ್ಪಾಂತಂ=ಒಂದು ಕಲ್ಪ ಪೂರ್ತಿಯಾಗುವವರೆಗೆ ಪುಣ್ಯಂ=ಪುಣ್ಯವು ತನ್ನಿಮಿತ್ತವಾಗಿ ಯಶಃ=ಕೀರ್ತಿಯು ಅಜರಾಮರತಾ=ಮುಪ್ಪು ಮರಣವಿಲ್ಲದಿರುವಿಕೆ ತಥಾ ಹಾಗೂ ತ್ರೈಕಾಲಿಕಂ ಜ್ಞಾನಂ= ಭೂತಭವಿಷ್ಯದ್ವರ್ತಮಾನಾರ್ಥವಿಷಯಕಜ್ಞಾನವು ವಿರಕ್ತಿಮತ್=ವೈರಾಗ್ಯಸಹಿತವಾದ ವಿಜ್ಞಾನಂ=ಶ್ರೀಹರಿಯ ಜ್ಞಾನವು ಬ್ರಹ್ಮನ್=ಮುನಿಯೇ ಬ್ರಹ್ಮವರ್ಚಸ್ವಿತಾ=ಬ್ರಹ್ಮವರ್ಚಸ್ಸು ಇರುವಿಕೆಯು ಭೂಯಾತ್=ಆಗಲಿ(ಬರಲಿ)ಪುರಾಣಾಚಾರ್ಯತಾ ಅಸ್ತು ತೇ=ನಿನಗೆ ಪುರಾಣಾಚಾರ್ಯತೆಯು ಇರಲಿ ಎಂದು ಹರಸಿದನು ಹರನು.

**ವಿಶೇಷ-** 'ಸತ್ಯೋ ಮಹರ್ಷೇ ತೇ ಕಾಮಃ' ಎಂದು ಸರಳವಾಗಿ ಹೇಳಲು ಬರುತ್ತಿರಲು 'ಕಾಮಸ್ತೇ ಮಹರ್ಷೇ ಸತ್ಯಃ' ಎಂದು ಹೇಳಿ ಮಹಾಶಾಸ್ತ್ರದಲ್ಲಿ ವೃತ್ತವಿಚ್ಛಿತ್ತಿಯು ದೋಷವಲ್ಲ ಎಂದು ಸೂಚಿಸುವರು.(೨)ತಥಾ ಪುರಾಣಾಚಾರ್ಯತಾ ಭೂಯಾತ್ ಎಂದು ಅನ್ವಯ ಮಾಡಲು ಬರುತ್ತಿದ್ದರೂ ಅಸ್ತು ಎಂದು ರುದ್ರದೇವರು ಹೇಳಿದರು. ಆದರಿಂದ ಇದು ಒಂದು ಹೊಸತು ಎಂದು ಧ್ವನಿತವಾಗುವದು. ಅಥವಾ ಅಸ್ತು ತೇ ಚೆನ್ನಾಗಿ ಸ್ತುತಿ ಮಾಡಿದವನೇ ಅಥವಾ ಜನರು ಮಾಡಿದ ಸ್ತುತಿಗೆ ಪಾತ್ರನೇ ಎಂದೂ ಅರ್ಥ ಮಾಡಬಹುದು. ಈ ಪಕ್ಷದಲ್ಲಿ ತ್ವಯಿ ಪುರಾಣಾಚಾರ್ಯತಾ ಕಿಯತೀತಿ ಏನು ಮಹಾ ಎಂದು ಪ್ರತ್ಯೇಕ ತೇ ಎಂದು ಹೇಳಲಿಲ್ಲ ಎಂದು ತಿಳಿಯಬೇಕು.

**ಏವಂ ವರಾನ್ ಸ ಮುನಯೇ ದತ್ವಾಽಗಾತ್ ತ್ರ್ಯಕ್ಷ ಈಶ್ವರಃ ।**
**ದೇವ್ಯೈ ತತ್ ಕರ್ಮ ಕಥಯನ್ನನುಭೂತಂ ಪುರಾಮುನಾ ॥ ೩೮ ॥**

ಸಃ ತ್ರ್ಯಕ್ಷಃ ಈಶ್ವರಃ=ಆ ಮುಕ್ಕಣ್ಣಿನ ಶಿವನು ಮುನಯೇ=ಮಾರ್ಕಂಡೇಯನಿಗೆ ಏವಂ=ಈ ರೀತಿ ವರಾನ್=ವರಗಳನ್ನು ದತ್ವಾ=ಕೊಟ್ಟು ದೇವ್ಯೈ=ಪಾರ್ವತಿಗೆ ಅಮುನಾ=

ಮಾರ್ಕಂಡೇಯನಿಂದ ಅನುಭೂತಂ=ಅನುಭವಿಸಿದ ತತ್ಕರ್ಮ=ಅವನು ಮಾಡಿದ ಕಾರ್ಯಗಳನ್ನು ಕಥಯನ್=ಹೇಳುತ್ತ ಅಗಾತ್=(ಲ್ಯಬ್‌ಲೋಪನಿಮಿತ್ತಪಂಚಮಿ ಅಗಂ ಉದ್ದಿಶ್ಯ=ಕೈಲಾಸಪರ್ವತವನ್ನು ಕುರಿತು)ಅಗಾತ್=ಹೋದನು.

**ಸೋಽಪ್ಯವಾಪ್ತಮಹಾಯೋಗಮಹಿಮಾ ಭಾರ್ಗವೋತ್ತಮಃ ।**
**ವಿಚರತ್ಯಧುನಾಪ್ಯದ್ಧಾ ಹರಾವೇಕಾಂತಿತಾಂ ಗತಃ ॥ ೩೯ ॥**

ಸಃ ಭಾರ್ಗವೋತ್ತಮಃ=ಮಾರ್ಕಂಡೇಯನು ಅವಾಪ್ತಮಹಾಯೋಗಮಹಿಮಾ= ಹೊಂದಲ್ಪಟ್ಟ ಯೋಗಪ್ರಭಾವಲಬ್ಧ ಅತಿಶಯವುಳ್ಳವನಾಗಿ ಅಧುನಾಪಿ=ಈಗಲೂ ಹರೌ=ಪರಮಾತ್ಮನಲ್ಲಿ ಏಕಾಂತತಾಂ ಗತಃ=ನಿಯತವಾದ ಭಕ್ತಿಯನ್ನು ಹೊಂದಿ ವಿಚರತಿ=ಸಂಚರಿಸುವನು ಅದ್ಧಾ=ನಿಶ್ಚಯವು. ಮಹಾತ್ಮರಿಗೆ ಈಗಲೂ ಮಾರ್ಕಂಡೇಯರ ದರ್ಶನವಾಗುವುದು ಎಂದು 'ಅದ್ಧಾ' ಪದದಿಂದ ಸೂಚಿತವಾಗಿದೆ.

**ಅನುವರ್ಣಿತಮೇ ತತ್ತೇ ಮಾರ್ಕಂಡೇಯಸ್ಯ ಧೀಮತಃ ।**
**ಅನುಭೂತಂ ಭಗವತೋ ಮಾಯಾವೈಭವಮದ್ಭುತಮ್ ॥ ೪೦ ॥**

ಯತ್ ಅದ್ಭುತಂ=ಯಾವ ಆಶ್ಚರ್ಯಕರವಾದ ಭಗವತಃ=ಪರಮಾತ್ಮನ ಮಾಯಾ ವೈಭವಂ=ಮಾಹಾತ್ಮ್ಯದ ವೈಭವವನ್ನು ಧೀಮತಃ=ಜ್ಞಾನಿಯಾದ ಮಾರ್ಕಂಡೇಯಸ್ಯ ಅನುಭೂತಂ=ಮಾರ್ಕಾಂಡೇಯನ ಅನುಭವಕ್ಕೆ ಗೋಚರಿಸಿದ್ದು ತೇ=ನಿನಗೆ ಏತತ್ ಅನುವರ್ಣಿತಮ್=ಈ ಚರಿತ್ರೆಯು ಹೇಳಲ್ಪಟ್ಟಿದೆ.

*ಅಕಾಲದಲ್ಲಿ ತೋರಿಸಿದ್ದರಿಂದ ಈ ಲೀಲೆಯು ಅನಿತ್ಯವಾದ್ದರಿಂದ ಐಂದ್ರಜಾಲಿಕದಂತೆ ಯಾಕಾಗಬಾರದು ಎನ್ನುವವರು ಬಾಲಿಶರು. ಅದು ಅನಾದಿಕಾಲದಿಂದ ಭಗವಂತನಲ್ಲಿ ಸತ್ಯವಾಗಿದೆ. ಶ್ರದ್ಧೆ ಇಡಬೇಕೆಂದು ಹೇಳುವರು.*

**ಏತತ್ ಕೇಚಿದವಿದ್ವಾಂಸೋ ಮಾಯಾಪ್ರಸೃತಿಮಾತ್ಮನಃ ।**
**ಅನಾದ್ಯಾವರ್ತಿತಂ ನೃಣಾಂ ಕಾದಾಚಿತ್ಕಂ ಪ್ರಚಕ್ಷತೇ ॥ ೪೧ ॥**

ಕೇಚಿತ್=ಕೆಲವು ಅವಿದ್ವಾಂಸಃ=ಅಜ್ಞಾನಿಗಳು ಆತ್ಮನಃ=ಭಗವಂತನ ಮಾಯಾಪ್ರಸೃತಿಂ =ಸಾಮರ್ಥ್ಯವಿಸ್ತಾರವನ್ನು ಅನಾದ್ಯಾವರ್ತಿತಂ=ಅನಾದಿಕಾಲದಿಂದ ನಡೆದು ಬಂದದ್ದನ್ನು ಕಾದಾಚಿತ್ಕಂ ಪ್ರಚಕ್ಷತೇ=ತ್ರೈವಿಕ್ರಮಾದಿ ವಿಕ್ರಮಗಳಂತೆ ನಿತ್ಯವಾದ ಸಾಮರ್ಥ್ಯದಲ್ಲಿ ಸೇರಿದ್ದಲ್ಲ ಸ್ವತಂತ್ರನಾದ ಶ್ರೀಹರಿಯಲ್ಲಿ ಅನಂತವಾಗಿ ಉಪಸಂಹರಿಣೀಯವಾದುದು.

ಲಕ್ಷ್ಮೀದೇವಿಯಿಂದ ಬ್ರಹ್ಮದೇವರಿಂದಲೂ ಸ್ವಾತಂತ್ರ್ಯೇಣ ಉಪಸಂಹಾರ್ಯವಲ್ಲ ಎಂದು ಅಜ್ಞಾನಿಗಳು ಹೇಳುವರು.

*ಯೋಗ್ಯರಾದ ಶ್ರದ್ಧಾಳುಗಳನ್ನು ಅನುಗ್ರಹ ಮಾಡಲು ಫಲವನ್ನು ಹೇಳುವರು.*

**ಯ ಏವಮೇತದ್ ಭೃಗುವರ್ಯವರ್ಣಿತಂ**
**ರಥಾಂಗಪಾಣೇರನುಭಾವಭಾವಿತಂ ।**
**ಸಂಶ್ರಾವಯೇತ್‌ಸಂಶೃಣುಯಾದುತೋಭಯೋ**
**ಸ್ತಯೋರ್ನಕರ್ಮಾಶಯಸಂಸೃತಿರ್ಭವೇತ್ ॥ ೪೨ ॥**

ಹೇ ಭೃಗುವರ್ಯ=ಶೌನಕರೇ ರಥಾಂಗಪಾಣೇಃ=ಚಕ್ರಪಾಣಿಯಾದ ಶ್ರೀಹರಿಯ ಅನುಭಾವಭಾವಿತಂ=ಮಾಹಾತ್ಮ್ಯದಿಂದ ಸಂವರ್ಧಿತವಾದ ಏತತ್=ಮಾರ್ಕಂಡೇಯ ಚರಿತ್ರೆಯನ್ನು ಯಃ=ಯಾವನು ಸಂಶ್ರಾವಯೇತ್=ಕೇಳಿಸುವನು ಉತ=ಮತ್ತು ಯಃ ಶೃಣುಯಾತ್=ಕೇಳುವನು ತಯೋಃ ಉಭಯೋಃ=ಅವರೀರ್ವರಿಗೂ ಕರ್ಮಾಶಯ-ಸಂಸೃತಿಃ ನ ಭವೇತ್=ಪುಣ್ಯಪಾಪಗಳಿಗೆ ಆಶ್ರಯವಾದ ದೇಹನಿಮಿತ್ತಕ ಸಂಸಾರವು ಬರಲಾರದು ಆದ್ದರಿಂದ ಅವಶ್ಯ ಕೇಳಬೇಕಾದುದು. ಶ್ರೀಹರಿಯಲ್ಲಿ ಭಕ್ತ್ಯುತ್ಪಾದಕವಾದ್ದರಿಂದ ಸಂಸಾರನಾಶಕ್ಕೆ ಕಾರಣವೆಂದು ಎಂದು ಭಾವ.

॥ ಇಲ್ಲಿಗೆ ಒಂಬತ್ತನೇ ಅಧ್ಯಾಯವು ಸಮಾಪ್ತವಾಯಿತು ॥



# ಅಥ ದಶಮೋಽಧ್ಯಾಯಃ

**ಸಾರಾಂಶ**

ಪ್ರಕೃತಿಮಹತ್ತತ್ವ-ಅಹಂಕಾರತತ್ವ-ಮನಸ್ತತ್ವ-ಪಂಚಮಹಾಭೂತಗಳು ಹೀಗೆ ೮ ತತ್ತ್ವಗಳಿಂದ ಬ್ರಹ್ಮಾಂಡವು ನಿರ್ಮಾಣಗೊಂಡಿದೆ. ಈ ಬ್ರಹ್ಮಾಂಡವು ಭಗವಂತನ ಪ್ರತಿಮಾರೂಪವಾಗಿದೆ. ಇದನ್ನು ಆಶ್ರಯಿಸಿದ ಉಪಾಂಗಗಳನ್ನು ಧ್ಯಾನ ಸೌಕರ್ಯಕ್ಕಾಗಿ ಇಲ್ಲಿ ಹೇಳಿರುತ್ತಾರೆ.

ಈ ಬ್ರಹ್ಮಾಂಡವೆಂಬ ಪುರುಷನು ಲೋಕಾಕಾರವಿಶೇಷದಿಂದ ಎಷ್ಟು ಪರಿಮಿತಿಯಿಂದ ಕೂಡಿದವನೋ ಅದರ ಕೆಳಗಿರುವ ಭಗವಂತನೂ ಅಷ್ಟೇ ಪರಿಮಾಣವುಳ್ಳವನು. ಬ್ರಹ್ಮಾಂಡಕ್ಕಿಂತ ಮಹತ್‌ಪರಿಮಾಣವುಳ್ಳವನೂ ಆಗಿದ್ದಾನೆ. ಶ್ರೀಹರಿಯು ಕೌಸ್ತುಭಮಣಿಯ ನಿಮಿತ್ತದಿಂದ ತನ್ನ ಸ್ವರೂಪಭೂತಕಾಂತಿಯನ್ನು ಧರಿಸುವನು. ಹೃದಯದಿಂದ ಶ್ರೀವತ್ಸವನ್ನು ಧರಿಸುವನು. ಶ್ರೀವತ್ಸದ ಕಾಂತಿಯನ್ನು ವ್ಯಾಪಿಸುವವಳು ಸಾಕ್ಷಾತ್ ಲಕ್ಷ್ಮೀದೇವಿಯು. ಜಗದ್ವಂದ್ಯವಾದ ಬ್ರಹ್ಮದೇವರ ಪದವಿಯನ್ನು ಕಿರೀಟವನ್ನಾಗಿ ಧರಿಸುವನು. ಹೀಗೆ ಅನೇಕ ಆಭರಣಗಳನ್ನು ಧರಿಸಿದ ಭಗವಂತನ ವರ್ಣನೆ ಈ ಅಧ್ಯಾಯದಲ್ಲಿ ವಿಶೇಷವಾಗಿ ಮೂಡಿಬಂದಿದೆ.

ಭಗವಂತನು ಅರ್ಥಜ್ಞಾನವೃತ್ತಿಯಿಂದ ಜಾಗ್ರದವಸ್ಥೆಯಲ್ಲಿ ಪದಾರ್ಥಜ್ಞಾನ ಮಾಡಿಸುವುದರಿಂದ ವಿಶ್ವನೆಂದು, ಸ್ವಪ್ನಾವಸ್ಥಾ ಪ್ರೇರಣೆಯಿಂದ ತೈಜಸನೆಂದು, ಸುಷುಪ್ತ್ಯವಸ್ಥಾ ಜ್ಞಾನವೃತ್ತಿಯಿಂದ ಪ್ರಾಜ್ಞನೆಂದು, ಮುಕ್ತರ ಸರ್ವವ್ಯಾಪಾರ ಕಾರಣನಾದವನು ತುರೀಯನೆಂದು ಕರೆಯಿಸಿಕೊಳ್ಳುವನು.

ಪುರುಷನಾಮಕ ಶ್ರೀಹರಿಯು ವೇದಗಳಿಂದ ಗಮ್ಯನು. ಎಲ್ಲರಿಗಿಂತ ಪೂರ್ವದಲ್ಲಿ ಇದ್ದವನು. ತನ್ನ ಸ್ವರೂಪಭೂತಶಕ್ತಿಯಿಂದ ಈ ಪ್ರಪಂಚವನ್ನು ಸೃಷ್ಟಿಸುವನು,

ಸಂಹರಿಸುವನು, ರಕ್ಷಿಸುವನು. ಆವರಣರಹಿತವಾದ ಇಂದ್ರಿಯವುಳ್ಳವನು. ಉಪಾಸನೆ ಮಾಡುವ ಅವನ ಭಕ್ತರಿಗೆ ಮನಸ್ಸಿನಲ್ಲಿ ತೋರುವನು.

ಸಾಧಕನು ಉಷಃಕಾಲದಲ್ಲಿ ಎದ್ದು ಈ ವಿಧವಾದ ಭಗವಂತನ ವಿರಾಟ್ ಪುರುಷರೂಪವನ್ನು ಪ್ರಯತ್ನಪೂರ್ವಕವಾಗಿ ಜಪಿಸಿ ಹೃದಯಗುಹಾದಲ್ಲಿರುವ ಶ್ರೀಹರಿಯನ್ನು ಧರಿಸುವನು.

*ಶ್ರೀಹರಿಯನ್ನು ಯಾವರೀತಿ ಧ್ಯಾನಮಾಡಬೇಕೆಂಬ ಶೌನಕರು ಕೇಳುವ ಪ್ರಶ್ನೆಗೆ ಯದ್ಯಪಿ ಎರಡನೆಯ ಸ್ಕಂಧದಲ್ಲಿ ಹೇಳಿದ ವಿರಾಡ್‌ರೂಪದ ಅಂಗೋಪಾಂಗಧ್ಯಾನ ಹೇಳಿದ್ದೆ ಸಾಕು. ಆದರೂ ಉಪಕ್ರಮ ಉಪಸಂಹಾರಗಳಲ್ಲಿ ಸಂಪುಟೀಕರಣ ಮಾಡುವುದು ಯೋಗ್ಯವೆಂದು ತಿಳಿದು ಆ ರೂಪವನ್ನು ನಿರೂಪಿಸಿ ಅವನು ಧರಿಸುವ ಆಭರಣಾದಿಗಳನ್ನು ಹೇಳುವುದರಿಂದ ತಿಳಿಯಲು ಸುಲಭವಾಗುವುದು ಎಂದು ಅವುಗಳನ್ನು ಇಲ್ಲಿ ಹೇಳುತ್ತಿದ್ದಾರೆ.*

ಶೌನಕ ಉವಾಚ

**ಅಥೇಮಮರ್ಥಂ ಪೃಚ್ಛಾಮೋ ಭವಂತಂ ಬಹುವಿತ್ತಮಮ್ ।**
**ಸಮಸ್ತತಂತ್ರರಾದ್ಧಾಂತೇ ಭವಾನ್ ಭಾಗವತತತ್ತ್ವವಿತ್ ॥ ೧ ॥**

ಅಥ=ಮಂಗಲವು ಬಹುವಿತ್ತಮಂ=ಯಾವುದನ್ನು ತಿಳಿಯುವುದರಿಂದ ಬಹಳವನ್ನು ತಿಳಿದಂತಾಗುವುದೋ ಅಂಥ ಇಮಂ=ಬುದ್ಧಿಸನ್ನಿಹಿತವಾದ ಅರ್ಥಂ=ವಿಷಯವನ್ನು ಭವಂತಂ=ನಿಮ್ಮನ್ನು ಪೃಚ್ಛಾಮಃ=ಕೇಳುವೆವು ನನ್ನನ್ನೇ ಏಕೆ ಕೇಳುವಿರಿ ಎಂದರೆ ಭವಾನ್=ತಾವು ಸಮಸ್ತತಂತ್ರರಾದ್ಧಾಂತೇ=ಪಂಚರಾತ್ರಾದಿಸಿದ್ಧಾಂತಗಳಲ್ಲಿ ಭಾಗವತ-ತತ್ತ್ವವಿತ್=ಭಗವಂತನ ರಹಸ್ಯವನ್ನೆಲ್ಲ ತಿಳಿದಿದ್ದೀರಿ. ಆದ್ದರಿಂದ ಪ್ರಶ್ನಿಸುವೆ.

**ತಾಂತ್ರಿಕಾಃ ಪರಿಚರ್ಯಾಯಾಂ ಕೇಶವಸ್ಯ ಶ್ರಿಯಃ ಪತೇಃ ।**
**ಅಂಗೋಪಾಂಗಾಯುಧಾಕಲ್ಪಂ ಕಲ್ಪಯಂತಿ ಯಥೈವ ಯೈಃ ॥ ೨ ॥**

ತಾಂತ್ರಿಕಾಃ=(ಪೂಜಾವಿಧಾಯಕ ಶಾಸ್ತ್ರವನ್ನು ತಿಳಿದವರು)ಪಾಂಚರಾತ್ರಿಕರು ಶ್ರಿಯಃ ಪತೇಃ=ಲಕ್ಷ್ಮಿಪತಿಯಾದ ಕೇಶವಸ್ಯ=ಶ್ರೀಹರಿಯ ಪರಿಚರ್ಯಾಯಾಂ=ಸೇವಾವಿಷಯದಲ್ಲಿ ಅಂಗೋಪಾಂಗಾಯುಧಾಕಲ್ಪಂ=ದೇಹಪಾದಾದಿಅವಯವಗಳು, ಚಕ್ರಾದಿ ಆಯುಧಗಳು ಅವುಗಳಿಂದ ಸಹಿತವಾದ ಆಭರಣಗಳು ಯಥಾ=ಹೇಗೆ ಯೈಃ=ಯಾವಪದಾರ್ಥಗಳಿಂದ ಕಲ್ಪಯಂತಿ=ರಚಿಸುವರು(ಹೇಳುವರು.)

**ತಾನ್ ನೋ ವರ್ಣಯ ಭದ್ರಂ ತೇ ಕ್ರಿಯಾಯೋಗಂ ಬುಭುತ್ಸತಾಮ್ ।**
**ಯೇನ ಕ್ರಿಯಾನೈಪುಣೇನ ಮರ್ತ್ಯೋ ಯಾಯಾದಮರ್ತ್ಯತಾಮ್ ॥ ೩ ॥**

ಕ್ರಿಯಾಯೋಗಬುಭುತ್ಸತಾಂ=ಪೂಜೆ ಮುಂತಾದ ಕ್ರಿಯೆಗಳ ಉಪಾಯವನ್ನು ತಿಳಿಯಲಿಚ್ಛಿಸುವ ನಃ=ನಮಗೆ ತಾನ್=ಅಂಗೋಪಾಂಗಾದಿಗಳನ್ನು ಆಯುಧಾಭರಣಗಳನ್ನು ವರ್ಣಯ=ಹೇಳಿರಿ ಯೇನ ಕ್ರಿಯಾನೈಪುಣೇನ=ಯಾವುದನ್ನು ಕೇಳುವುದರಿಂದ ಮರ್ತ್ಯಃ=ಮನುಷ್ಯನು ಅಮರ್ತ್ಯತಾಂ=ಮುಕ್ತಿಯನ್ನು ಯಾಯಾತ್=ಪಡೆಯುವನು ತೇ=ನಿನಗೆ ಭದ್ರಂ ಅಸ್ತು=ಮಂಗಳವಾಗಲಿ.

*ಸೂತರು ಮಹಾಪ್ರಮೇಯವನ್ನು ಮಂಗಳವಿಲ್ಲದೆ ಹೇಳಬಾರದೆಂದು ತಿಳಿದು ಯಾವನ ಅನುಗ್ರಹದಿಂದ ಜ್ಞಾನವು ಬಂದಿತೋ ಅವನಿಗೆ ನಮನ ರೂಪ ಮಂಗಲ ಮಾಡುವರು*

**ಸೂತ ಉವಾಚ**

**ನಮಸ್ಕೃತ್ವಾ ಗುರೂನ್ ವಕ್ಷ್ಯೇ ವಿಭೂತೀರ್ವೈಷ್ಣವೀರಪಿ ।**
**ಯಾ ವೇದಾಗಮತಂತ್ರಾಭ್ಯಾಮಾಚಾರ್ಯೈಃಪದ್ಮಜಾದಿಭಿಃ ॥ ೪ ॥**

ಗುರೂನ್=ಗುರುಗಳನ್ನು ನಮಸ್ಕೃತ್ವಾ=ನಮಸ್ಕಾರಮಾಡಿ ಪದ್ಮಜಾದಿಭಿಃ ಆಚಾರ್ಯೈಃ= ಬ್ರಹ್ಮದೇವರೆ ಮೊದಲಾದ ಮುಖ್ಯೋಪದೇಶಕರಿಂದ ಆಗಮತಂತ್ರಾಭ್ಯಾಂ=ವೇದ-ಪಂಚರಾತ್ರಾದಿಗಳಿಂದ ಪ್ರತಿಪಾದಿತವಾದ ಯಾಃ=ಯಾವ ರೂಪಗಳನ್ನು ವೇದಃ=-ತಿಳಿದಿರುವೆನೋ ತಾಃ ವೈಷ್ಣವೀಃ=ಆ ವಿಷ್ಣು ಸಂಬಂಧಿಯಾದ ವಿಭೂತೀಃ= ವಿಶಿಷ್ಟರೂಪಗಳನ್ನು ವಕ್ಷ್ಯೇ=ಹೇಳುವೆನು.

**ಮಾಯಾದ್ಯೈರ್ನವಭಿಸ್ತತ್ತ್ವೈಃ ಸವಿಕಾರೈರಯಂ ವಿರಾಟ್ ।**
**ನಿರ್ಮಿತೋ ದೃಶ್ಯತೇ ಯಸ್ಮಿನ್ ಸಚಿತ್ಕೇ ಭುವನತ್ರಯಮ್ ॥ ೫ ॥**

ಮಾಯಾದ್ಯೈಃ=ಪ್ರಕೃತಿಯೇ ಮೊದಲಾದ ನವಭಿಃ=ಪ್ರಕೃತಿ-ಮಹತ್ತತ್ವ-ಅಹಂಕಾರತತ್ವ-ಮನಸ್ತತ್ವ ಪಂಚಮಹಾಭೂತಗಳು ಹೀಗೆ ಒಂಭತ್ತು ತತ್ತ್ವಗಳಿಂದ ಸವಿಕಾರೈಃ=ಇಂದ್ರಿಯಾದಿಗಳಿಂದ ಸಹಿತವಾದ ಅಯಂ ವಿರಾಟ್=ಈ ವಿರಾಟ್‌ದೇಹವು ಅಂದರೆ ಬ್ರಹ್ಮಾಂಡವು ನಿರ್ಮಿತಃ=ನಿರ್ಮಿಸಲ್ಪಟ್ಟಿತು. ಯಸ್ಮಿನ್ ಸಚಿತ್ಕೇ=ಯಾವ ಚೇತನಸಹಿತವಾದ ಬ್ರಹ್ಮಾಂಡದಲ್ಲಿ ಭುವನತ್ರಯಂ ದೃಶ್ಯತೇ=ಮೂರು ಲೋಕಗಳು ಕಾಣುವುವು.

**ಏತದ್ ವೈ ಪೌರುಷಂ ರೂಪಂ ಭೂಃ ಪಾದೌ ದ್ಯೌಃ ಶಿರೋ ನಭಃ ।**
**ನಾಭಿಃ ಸೂರ್ಯೋಽಕ್ಷಣೀ ನಾಸೇ ವಾಯುಃ ಕರ್ಣೌ ದಿಶಃ ಪ್ರಭೋಃ ॥ ೬ ॥**

ಏತತ್=ಬ್ರಹ್ಮಾಂಡವು ಪೌರುಷಂ ರೂಪಂ=ಪುರುಷನಾಮಕ ಭಗವತ್ಸನ್ನಿಧಾನ ಪಾತ್ರವಾದ್ದರಿಂದ ಪ್ರತಿಮಾರೂಪವಾಗಿದೆ ಇದನ್ನು ಆಶ್ರಯಿಸಿದ ಉಪಾಂಗಗಳನ್ನು ಧ್ಯಾನ ಸೌಕರ್ಯಕ್ಕಾಗಿ ಹೇಳುವರು. ಭೂಃ=ಭೂಲೋಕವು ಪ್ರಭೋಃ=ಪರಮಾತ್ಮನ ಪಾದೌ= ಪಾದಸ್ಥಾನೀಯವು ದ್ಯೌಃ=ದ್ಯುಲೋಕವು ಶಿರಃ=ಶಿರಸ್ಸು ನಭಃ=ಆಕಾಶವು ನಾಭಿಃ=ಹೊಕ್ಕುಳು ಅಕ್ಷಣೀ=ಕಣ್ಣುಗಳು ಸೂರ್ಯಃ=ಸೂರ್ಯನು ನಾಸೇ=ಘ್ರಾಣೇಂದ್ರಿಯವು ವಾಯುಃ= ವಾಯುದೇವನು ಕರ್ಣೌ=ಕಿವಿಗಳು ದಿಶಃ=ದಿಕ್ಕುಗಳು ಎಂದರ್ಥ.

**ವಿಶೇಷ-** 'ವಿರಾಜೋ ಅಧಿಪೂರುಷಃ' ಮುಂತಾದ ಪುರುಷಸೂಕ್ತವ್ಯಾಖ್ಯಾನ-ರೂಪದ ಈ ಶ್ಲೋಕಗಳ ಅರ್ಥವನ್ನು ದ್ವಿತೀಯಸ್ಕಂಧತಾತ್ಪರ್ಯದಲ್ಲಿ ಆಚಾರ್ಯರು ಹೇಳಿದ ಪ್ರಕಾರ ತಿಳಿಯಬೇಕು. ಆಯಾ ದೇವತೆಗಳು ಭಗವಂತನ ಆಯಾ ಇಂದ್ರಿಯಗಳಿಂದ ಜನಿಸಿ ಅವನನ್ನೇ ಆಶ್ರಯಿಸಿ ಆಯಾ ನಾಮಗಳಿಂದ ಕರಿಸಿಕೊಳ್ಳುವರು ಎಂದು ಸ್ಥೂಲ ಅಭಿಪ್ರಾಯ.

**ಪ್ರಜಾಪತಿಃ ಪ್ರಜನನಮಪಾನೋ ಮೃತ್ಯುರೀಶಿತುಃ ।**
**ತದ್ಬಾಹವೋ ಲೋಕಪಾಲಾ ಮನಶ್ಚಂದ್ರೋ ಭ್ರುವೋಽರ್ಯಮಾ ॥ ೭ ॥**

ಈಶಿತುಃ=ಸ್ವಾಮಿಯಾದ ಶ್ರೀಹರಿಯ ಪ್ರಜನನಂ=ಗುಹ್ಯೇಂದ್ರಿಯವು ಪ್ರಜಾಪತಿಃ= ದಕ್ಷನು ಅಪಾನಃ=ಅಪಾನವಾಯುವು ಅಥವಾ ಇಂದ್ರಿಯವು ಮೃತ್ಯುಃ=ಯಮನು (ಜನನೇಂದ್ರಿಯನು),ತದ್ಬಾಹವಃ=ಅವನ ಕೈಗಳು ಲೋಕಪಾಲಾಃ=ಲೋಕಪಾಲಕರು ಮನಃ=ಮನಸ್ಸು ಚಂದ್ರಃ=ಚಂದ್ರನು ಭ್ರುವೋಃ=ಹುಬ್ಬುಗಳಿಂದ ಯಮಃ=ಯಮನು ಜನಿಸಿದನು.

**ವಿಶೇಷ-**ಇಲ್ಲಿ ಭ್ರುವೋಃ ಯಮಃ ಎಂದು ಹೇಳಿ ಹಿಂದೆಯಲ್ಲ ಸಾಮಾನಾಧಿಕರಣ್ಯ ಅಂದರೆ ಒಂದೇ ವಿಭಕ್ತಿಯಿಂದ ಮನಃ ಚಂದ್ರಃ ಮುಂತಾಗಿ ಹೇಳಿದ್ದರಿಂದ ಬಂದ ಅಭೇದಜ್ಞಾನದ ನಿಷೇಧವನ್ನು ಸೂಚಿಸುವರು. ಅಲ್ಲದೆ ಆ ರೀತಿ ಅಭೇದವನ್ನು ತಿಳಿದರೆ ಯಮನಿಂದ ಭಯವನ್ನೂ ಸೂಚಿಸುವರು.

**ಲಜ್ಜೋತ್ತರೋಽಧರೋ ಲೋಭೋ ದ್ಯುತಿರ್ಜ್ಯೋತ್ಸ್ನಾ ಸ್ಮಯೋ ಭ್ರಮಃ ।**
**ರೋಮಾಣಿ ಭೂರುಹಾ ಭೂಮ್ನೋ ಮೇಘಾಃ ಪುರುಷಮೂರ್ಧಜಾಃ ॥ ೮ ॥**

ಉತ್ತರಃ=ಮೇಲ್ತುಟಿಯು ಲಜ್ಜಾ=ನಾಚಿಕೆಯು, ಅಧರಃ=ಕೆಳದುಟಿಯು ಲೋಭಃ= ಲೋಭವು, ದ್ಯುತಿಃ=ಸ್ವರೂಪಕಾಂತಿಯು ಜ್ಯೋತ್ಸ್ನಾ=ಬೆಳದಿಂಗಳು, ಸ್ಮಯಃ= ದರ್ಪವಿಶೇಷವು(ಭಗವಂತನ ನಗೆಯಿಂದ ಜನಿಸಿದ್ದು ಎನ್ನುತ್ತಾರೆ ಸತ್ಯಧರ್ಮ-ತೀರ್ಥರು.) ಭ್ರಮಃ=ಭ್ರಾಂತಿಯು,(ಜನಮೋಹಕವು) ರೋಮಾಣಿ=ಕೂದಲುಗಳು ಭೂರುಹಾಃ=ಗಿಡಗಳು, ಪುರುಷಮೂರ್ಧಜಾಃ=ಶ್ರೀಹರಿಯ ತಲೆಯ ಮೇಲಿನ ಕೂದಲುಗಳು ಮೇಘಾಃ=ಮೋಡಗಳು

**ವಿಶೇಷ-** ಕಣ್ಣಿನಲ್ಲಿರುವ ಚಂದ್ರಪ್ರಕಾಶವೇ ಇಲ್ಲಿ ಜೋತ್ಸ್ನಾಪದಾರ್ಥವು ಆದ್ದರಿಂದ ಅಮರಕೋಶದ ವಿರೋಧವಿಲ್ಲ. ಇಲ್ಲಿ ಕಾಂತಿವಾಚಕ ದ್ಯುತಿ ಶಬ್ದವಿದೆ. ಭ್ರಮ ಎಂದರೆ ಇತರ ಮೋಹಕವಾದ ಹಾಸವು. ಜನೋನ್ಮಾದಕ ಮಾಯಾ ಎಂದು ದ್ವಿತೀಯ ಸ್ಕಂಧದಲ್ಲಿ ಹೇಳಿದ್ದಾರೆ. ಸ್ಮಯ ಎಂದರೆ ಹಾಸ ಎಂಬುದು ಸತ್ಯಧರ್ಮರ ಅಭಿಪ್ರಾಯ. ಭ್ರಮ ಎಂದರೆ ಭ್ರೂಪಕ್ಷೇಪ, ಸ್ಮಯ ಎಂದರೆ ಹಾಸ ಹೀಗೂ ಅರ್ಥ ಮಾಡಿರುವರು

**ಯಾವಾನಯಂ ಸ ಪುರುಷೋ ಯಾವತ್ಯಾ ಸಂಸ್ಥಯಾ ಮಿತಃ ।**
**ತಾವಾನಸಾವಪಿ ಮಹಾನ್ ಪುರುಷೋ ಲೋಕಸಂಸ್ಥಯಾ ॥ ೯ ॥**

ಅಯಂ ಪುರುಷಃ=ಈ ಬ್ರಹ್ಮಾಂಡವೆಂಬ ಪುರುಷನು ಲೋಕಸಂಸ್ಥಯಾ= ಲೋಕಾಕಾರ ವಿಶೇಷದಿಂದ ಯಾವತ್ಯಾ ಸಂಸ್ಥಯಾ=ಎಷ್ಟು ಪರಿಮಿತಿಯಿಂದ ಕೂಡಿದವನೋ ಅಸೌ ಅಪಿ ಪುರುಷಃ=ಅದರೊಳಗಿರುವ ಭಗವಂತನೂ ಸಹ ತಾವಾನ್= ಅಷ್ಟು ಪರಿಮಾಣವುಳ್ಳವನು ಮಹಾನ್ ಅಪಿ=ಬ್ರಹ್ಮಾಂಡಾಪೇಕ್ಷಯಾ ಮಹತ್ ಪರಿಮಾಣವುಳ್ಳವನೂ ಅಹುದು.

**ಕೌಸ್ತುಭವ್ಯಪದೇಶೇನ ಸ್ವಾತ್ಮಜ್ಯೋತಿರ್ಬಿಭರ್ತ್ಯಜಃ ।**
**ತತ್ಪ್ರಭಾವ್ಯಾಪಿನೀ ಸಾಕ್ಷಾತ್ ಶ್ರೀವತ್ಸಮುರಸಾ ವಿಭುಃ ॥ ೧೦ ॥**

ಅಜಃ=ಶ್ರೀಹರಿಯು ಕೌಸ್ತುಭವ್ಯಪದೇಶೇನ=ಕೌಸ್ತುಭಮಣಿಯ ನೆಪದಿಂದ ಸ್ವಾತ್ಮಜ್ಯೋತಿಃ=ತನ್ನ ಸ್ವರೂಪಭೂತಕಾಂತಿಯನ್ನು ಅಥವಾ ತನ್ನ ಅಧೀನವಾದ ಚತುರ್ಮುಖನೆಂಬ ಜ್ಯೋತಿಯನ್ನು ಬಿಭರ್ತಿ=ಧರಿಸುವನು. ವಿಭುಃ=ಸಮರ್ಥನಾದ ಶ್ರೀಹರಿಯು ಉರಸಾ=ಹೃದಯದಿಂದ ಶ್ರೀವತ್ಸಂ=ಶ್ರೀವತ್ಸವನ್ನು ಬಿಭರ್ತಿ=ಧರಿಸುವನು. ಸಾ=ಲಕ್ಷ್ಮೀದೇವಿಯು ತತ್ಪ್ರಭಾವ್ಯಾಪಿನೀ=ಶ್ರೀವತ್ಸದ ಕಾಂತಿಯನ್ನು ವ್ಯಾಪಿಸುವವಳು (ಸಾ ಅಕ್ಷಾತ್ ಎಂದು ವಿಭಾಗಮಾಡಿ (ಲ್ಯಬ್ ಲೋಪನಿಮಿತ್ತಾ ಪಂಚಮೀ)

ಅಕ್ಷಾತ್=ಉಳಿದ ಇಂದ್ರಿಯಗಳನ್ನು ಪರಿತ್ಯಜ್ಯ=ಬಿಟ್ಟು ಭೃಗುವು ತನ್ನ ಮೂಲಪುರುಷನಾದ್ದರಿಂದ ಅವನ ಪಾದ ಚಿನ್ಹಿತವಾದ ಶ್ರೀವತ್ಸದ ಪ್ರಭೆಯನ್ನು ಸಾ=ಆ ಲಕ್ಷ್ಮೀದೇವಿಯು ವ್ಯಾಪಿಸಿರುವಳು.

**ವಿಶೇಷ-** ಸಾಕ್ಷಾತ್ ಎಂಬಲ್ಲಿ ಸಾ ಅಕ್ಷಾತ್ ಎಂದು ವಿಭಾಗಮಾಡಿ (ಲ್ಯಬ್ ಲೋಪನಿಮಿತ್ತಾ ಪಂಚಮೀ) ಅಕ್ಷಾತ್=ಉಳಿದ ಇಂದ್ರಿಯಗಳನ್ನು ಪರಿತ್ಯಜ್ಯ=ಬಿಟ್ಟು ಭೃಗುವು ತನ್ನ ಮೂಲಪುರುಷನಾದ್ದರಿಂದ ಅವನ ಪಾದ ಚಿನ್ಹಿತವಾದ ಶ್ರೀವತ್ಸದ ಪ್ರಭೆಯನ್ನು ಸಾ=ಆ ಲಕ್ಷ್ಮೀದೇವಿಯು ವ್ಯಾಪಿಸಿರುವಳು. ಶ್ರೀವತ್ಸವನ್ನು ಉರಸಾ ಬಿಭರ್ತಿ ಎಂದದ್ದರಿಂದ ಲೋಕದಲ್ಲಿ ಹೆಂಡತಿಯನ್ನು ಹೃದಯದಲ್ಲಿ ಇಟ್ಟುಕೊಂಡು ಶೋಭಿಸುವನು ಎಂಬ ಗಾದೆಮಾತಿಗೆ ಇದೇ ಮೂಲವಿರಬೇಕು ಎಂಬುದು ಧ್ವನಿತವಾಗುವುದು.

**ಸ್ವಮಾಯಾಂ ವನಮಾಲಾಖ್ಯಾಂ ನಾನಾಗುಣಮಯೀಂ ದಧತ್ ।**
**ವಾಸಶ್ಛಂದೋಮಯಂ ಪೀತಂ ಬ್ರಹ್ಮಸೂತ್ರಂ ತ್ರಿವೃತ್ ಸ್ವರಮ್ ॥ ೧೧ ॥**

ನಾನಾಗುಣಮಯೀಂ=ನಾನಾ ವರ್ಣಗಳೆಂಬ ಗುಣದಿಂದ ಕೂಡಿದ ವನಮಾಲಾಖ್ಯಾಂ=ವನಮಾಲಾ ಎಂದು ಹೆಸರುಳ್ಳ ಸ್ವಮಾಯಾಂ=ತನ್ನ ಅಧೀನವಾದ (ಶ್ರೀರೂಪವಾದ) ಛಂದೋಮಯಂ ಪೀತಂ ವಾಸಃ=ವೇದಾತ್ಮಕವಾದ ಬಂಗಾರ ಬಣ್ಣದ ಬಟ್ಟೆಯನ್ನು ತ್ರಿವೃತ್‌ಸ್ವರಂ=ತ್ರಿಗುಣಿತವಾದಂತೆ ಅಕಾರ ಉಕಾರ ಮಕಾರಗಳೆಂಬ ಮೂರು ಸ್ವರಗಳನ್ನು ಒಳಗೊಂಡ ಓಂಕಾರವೆಂಬ ಬ್ರಹ್ಮಸೂತ್ರಂ=ಯಜ್ಞೋಪವೀತವನ್ನು ದಧತ್=ಧರಿಸಿರುವನು.

**ವಿಶೇಷ-** ದ್ವಿತೀಯಸ್ಕಂಧದಲ್ಲಿ 'ವಾಸಸ್ತು ಮಧ್ಯೇ' ಎಂದು ಹೇಳಿದ್ದಕ್ಕೂ 'ವಾಸಶ್ಛಂದೋಮಯ' ಎಂದು ಇಲ್ಲಿ ಹೇಳಿದ್ದಕ್ಕೂ ವಿರೋಧ ಬರುತ್ತದೆಯಲ್ಲ ಎಂದರೆ ಪರಮಾತ್ಮನ ರೂಪಗಳೂ ಅನಂತ ಇದ್ದ ವಸ್ತುಗಳೂ ಅನಂತ ಅನಂತವಾದ ವಸ್ತುಗಳು ಅನಂತ ಅವಯವ ಸಂಬಂಧವುಳ್ಳವುಗಳು ಎಂದು ತಿಳಿಸಲು ಈ ರೀತಿ ವ್ಯತ್ಯಾಸವಾಗಿ ಹೇಳಿರುವರು. ಕಾರಣ ವಿರೋಧವಿಲ್ಲವೆಂದು ತಿಳಿಯಬೇಕು.

**ಬಿಭರ್ತಿ ಸಾಂಖ್ಯಂ ಯೋಗಂ ಚ ದೇವೋ ಮಕರಕುಂಡಲೇ ।**
**ಮೌಲಿಂ ಪದಂ ಪಾರಮೇಷ್ಠ್ಯಂ ಸರ್ವಲೋಕನಮಸ್ಕೃತಮ್ ॥ ೧೨ ॥**

ಸಾಂಖ್ಯಂ=ಶುದ್ಧಾತ್ಮ ತತ್ತ್ವ ವಿಜ್ಞಾನವನ್ನು ಯೋಗಂ=ಅಣಿಮಾದಿ ಐಶ್ವರ್ಯವನ್ನು ಅಥವಾ ಕರ್ಮವನ್ನೂ ಮಕರಕುಂಡಲೇ=ಮಕರ ಕುಂಡಲವನ್ನಾಗಿ ಬಿಭರ್ತಿ=ಧರಿಸುವವನು. ಸರ್ವಲೋಕನಮಸ್ಕೃತಂ=ಜಗದ್ವಂದ್ಯವಾದ ಪಾರಮೇಷ್ಠ್ಯಂ ಪದಂ=ಬ್ರಹ್ಮದೇವರ ಪದವಿಯನ್ನು ಮೌಲಿಂ=ಕಿರೀಟವನ್ನಾಗಿ ಬಿಭರ್ತಿ=ಧರಿಸುವವನು.

**ಅವ್ಯಾಕೃತಮನಂತಾಖ್ಯಮಾಸನಂ ಯದಧಿಷ್ಠಿತಮ್ ।**
**ಧರ್ಮಜ್ಞಾನಾದಿಭಿರ್ಯುಕ್ತಂ ಸತ್ವಂ ಪದ್ಮಮಿಹೋಚ್ಯತೇ ॥ ೧೩ ॥**

ಯದಧಿಷ್ಠಿತಂ=ಯಾವನಿಂದ ವಾಸಿಸಲ್ಪಟ್ಟ(ಕೂಡಲ್ಪಟ್ಟ) ಆಸನಂ=ಪೀಠವು ಅವ್ಯಾಕೃತಂ=ವಿಕಾರರಹಿತವಾದುದು.(ವಿಕೃತವಾದುದಲ್ಲ) ಅನಂತಾಖ್ಯಂ=ಅನಂತ ಎಂಬ ಹೆಸರುಳ್ಳದ್ದು ಧರ್ಮಜ್ಞಾನಾದಿಭಿಃ ಯುಕ್ತಂ=ಧರ್ಮಜ್ಞಾನಾದಿಗಳಿಂದ ಕೂಡಿದ್ದು ಸತ್ವಂ=ಸತ್ವಗುಣಾಭಿಮಾನಿನಿ ಶ್ರೀದೇವಿಯು ಇಹ=ವಿರಾಡ್ರೂಪದಲ್ಲಿ ಪದ್ಮಂ=ಪದ್ಮವೆಂದು ಉಚ್ಯತೇ=ಹೇಳಲ್ಪಡುವಳು.

**ಓಜಸ್ಸಹೋಬಲಯುತಂ ಮುಖ್ಯತತ್ತ್ವಂ ಗದಾಂದಧತ್ ।**
**ಅಪಾಂ ತತ್ತ್ವಂ ದರವರಂ ತೇಜಸ್ತತ್ವಂ ಸುದರ್ಶನಮ್ ॥ ೧೪ ॥**

ಓಜಸ್ಸಹೋಬಲಯುತಂ=ಅನಂತಸಾಮರ್ಥ್ಯ,ಸಹನಶಕ್ತಿ,ದೇಹಬಲ ಇವುಗಳಿಂದ ಕೂಡಿದ ಮುಖ್ಯತತ್ತ್ವಂ=ಮುಖ್ಯಪ್ರಾಣನೆಂಬ ಗದಾಂ=ಕೌಮೋದಕಿ ಗದೆಯನ್ನು ('ಪ್ರಾಣೋ ವೈ ಮುಖ್ಯಃ' ಎಂಬ ಶ್ರುತಿಗೆ ಅನುಗುಣವಾಗಿ)ಅಪಾಂ ತತ್ತ್ವಂ=ನೀರಿನಿಂದ ಹುಟ್ಟಿದ (ಪಾಂಚಜನ್ಯಕ್ಕೆ ಕಾರಣವಾದ) ದರವರಂ=ಶಂಖವನ್ನೂ ತೇಜಸ್ತತ್ವಂ=ಮಹಾಜ್ವಾಲಾರೂಪವಾದ ಸುದರ್ಶನಂ=ಸುದರ್ಶನವನ್ನು ದಧತ=ಧರಿಸಿರುವವನು.

**ವಿಶೇಷ-** 'ಗದಾ ತು ವಾಯುರ್ಬಲಸಂವಿದಾತ್ಮಾ । ಶಾರ್ಙ್ಗಂ ಚ ವಿದ್ಯೇತಿ ರಮೈವ ಖಡ್ಗಃ । ದುರ್ಗಾತ್ಮಿಕಾ ಸೈವ ಚ ಚರ್ಮನಾಮ್ನೀ' ಇತ್ಯಾದಿಯಾಗಿ ಬೇರೆ ಕಡೆ ಹೇಳಿದುದಕ್ಕೆ ಇಲ್ಲಿ ಹೇಳಿದ ಮಾತುಗಳ ವಿರೋಧ ಬರುತ್ತದೆ ಎಂದರೆ ಈ ಸಮಸ್ಯೆಗೆ ಮೇಲೆ ಹೇಳಿದ ಉತ್ತರವನ್ನೇ ಅನ್ವಯಿಸಿಕೊಳ್ಳಬೇಕು. ಅನೇಕರೂಪಗಳು ಅನೇಕ ವಸ್ತು ಸಂಬಂಧಗಳು ಅನೇಕ ಅಭಿಮಾನಿಗಳು ಎಂದು.

**ನಭೋನಿಭಂ ನಭಸ್ತತ್ವಮಸೀಂ ಚರ್ಮತಮೋಮಯಮ್ ।**
**ಕಾಲರೂಪಂ ಧನುಶಾರ್ಙ್ಗಂ ತಥಾಕರ್ಮಮಯೇಷುಧೀ ॥ ೧೫ ॥**

ನಭೋನಿಭಂ=ಆಕಾಶದಂತೆ ನೀಲವರ್ಣವುಳ್ಳ ನಭಸ್ತತ್ವಂ=ಭೂತಾಕಾಶವೆಂಬ ಅಸಿಂ=ನಂದಕಖಡ್ಗವನ್ನೂ ತಮೋಮಯಂ=ತಮೋಗುಣದಂತೆ ಆಚ್ಛಾದಕವಾದ, ದುರ್ಗಾಭಿಮನ್ಯಮಾನವಾದ, ವೈರಿಗಳ ನೇತ್ರಾಚ್ಛಾದಕವಾದ, ಚರ್ಮ=ಢಾಲನ್ನು ಕಾಲರೂಪಂ ಧನುಃ=ಕಾಲವೆಂಬ ಧನುಸ್ಸನ್ನು ಶಾರ್ಙ್ಗಂ=ಶೃಂಗಮಯವಾದ್ದ ಕರ್ಮಮಯೇಷುಧೀ=ಪುಣ್ಯಪಾಪಾತ್ಮಕ ಕರ್ಮಗಳೆಂಬ ಬತ್ತಳಿಕೆಯನ್ನೂ ದಧತ್=ಧರಿಸಿರುವ.

**ಇಂದ್ರಿಯಾಣಿ ಶರಾನಾಹುರಾಕೃತಿರಸ್ಯ ಸ್ಯಂದನಮ್ ।**
**ತನ್ಮಾತ್ರಾಣ್ಯಸ್ಯಾಭಿವ್ಯಕ್ತಿರಿಂದ್ರಿಯಾರ್ಥಾಃ ಕ್ರಿಯಾ ಮತಾಃ ॥ ೧೬ ॥**

ಅಸ್ಯ=ಶ್ರೀಹರಿಯ ಸ್ಯಂದನಂ=ರಥವು ಆಕೃತಿಃ=ಪೃಥಿವಿಯು(ತನ್ನಲ್ಲಿ ಇದ್ದು ಕಾರ್ಯ ಮಾಡಲು ಉಪಯುಕ್ತವಾದ್ದರಿಂದ)ಇಂದ್ರಿಯಾಣಿ=(ಇಂದ್ರಿಯಗಳನ್ನು)ಇಂದ್ರಿಯಾಭಿ ಮಾನಿದೇವತೆಗಳನ್ನು ಶರಾನ್=ಬಾಣಗಳೆಂದು ಆಹುಃ=ಹೇಳಿರುವರು.(ಪಂಚಾತ್ಮಕೋ ಮಾರುತ ಏಷ ಬಾಣಃ ಎಂದಿದೆ)ತನ್ಮಾತ್ರಾಣಿ=ಶಬ್ದಾದಿಗಳು ಅಸ್ಯ ಅಭಿವ್ಯಕ್ತಿಃ=ಹರಿಯ ವ್ಯಕ್ತಿಸ್ಥಾನವು ಇಂದ್ರಿಯಾರ್ಥಾಃ=ಇಂದ್ರಿಯವಿಷಯಗಳು (ಕರ್ಮೇಂದ್ರಿಯ ವಿಷಯಗಳು)ಕ್ರಿಯಾಃ ಮತಾಃ=ಕರ್ಮಗಳೆಂದು ತಿಳಿಯಬೇಕು.

**ಮಂಡಲಂ ದೇವಯಜನಂ ದೀಕ್ಷಾಸಂಸ್ಕಾರ ಆತ್ಮನಃ ।**
**ಪರಿಚರ್ಯಾ ಭಗವತ ಆತ್ಮನೋ ದುರಿತಕ್ಷಯಃ ॥ ೧೭ ॥**

ಮಂಡಲಂ=ಚಕ್ರಾಬ್ಜಾದಿಮಂಡಲಗಳು ದೇವಯಜನಂ=ಶ್ರೀಹರಿಯ ಪೂಜಾಸ್ಥಾನವು, ಆತ್ಮನಃ=ಪರಮಾತ್ಮನಿಂದ ಸಂಸ್ಕಾರಃ=ಶರೀರ ಶುದ್ಧಿಯು ದೀಕ್ಷಾ=ದೀಕ್ಷೆಯು, ಭಗವತಃ ಪರಿಚರ್ಯಾ=ಪರಮಾತ್ಮನ ಸೇವೆಯು ಆತ್ಮನಃ=ತನ್ನ ದುರಿತಕ್ಷಯಃ=ಪಾಪನಾಶನವು.

ವಿಶೇಷ- ಕೆಲವರು ಮಂಡಲ ಎಂದರೆ ಪವಮಾನ ಮಂಡಲ ಎಂದರ್ಥ ಮಾಡಿ ದೇವರಿಗೆ ನಿರಾಜನ ರೂಪ ಪೂಜೆ ಎಂದು ಅರ್ಥ ಮಾಡುವರು. ಹನ್ನೊಂದನೇಯ ಸ್ಕಂಧ ತಾತ್ಪರ್ಯದಲ್ಲಿ 'ನಿತರಾಂ ರಂಜಯೇದ್ಯಸ್ಮಾತ್ ಪಾವಮಾನಸ್ತು ಮಂಡಲಮ್। ವಿಷ್ಣೋರ್ನೀರಾಜನಂ ತಸ್ಮಾತ್ ವಿದ್ವದ್ಭಿಃ ಸಮುದಾಹೃತಮ್' ಎಂದು ನೀರಾಜನಪದದ ವ್ಯಾಖ್ಯಾನ ಮಾಡುವಾಗ ಹೇಳಿದ್ದರಿಂದ ಸೂಕ್ತವೇ ಆಗುವುದು.

**ಭಗವಾನ್ ಭಗಶಬ್ದಾತ್ಮಾ ಲೀಲಾಕಮಲಮುದ್ವಹನ್ ।**
**ಧರ್ಮಂ ಯಶಶ್ಚ ಭಗವಾನ್ ಚಾಮರವ್ಯಜನೇಽಭಜತ್ ॥ ೧೮ ॥**

ಭಗಶಬ್ದಾತ್ಮಾ=ಭಗ ಶಬ್ದ ವಾಚ್ಯನಾದ, ಐಶ್ವರ್ಯಾದಿಗಳೇ ದೇಹವಾಗಿವುಳ್ಳ ಭಗವಾನ್=ಪೂಜ್ಯನಾದ ಭಗವಾನ್=ಪರಮಾತ್ಮನು ಲೀಲಾಕಮಲಂ ಉದ್ವಹನ್= ಲೀಲೆಗಾಗಿ ಕಮಲವನ್ನು ಧರಿಸಿ, ಧರ್ಮಂ ಯಶಃ ಚ=ಧರ್ಮ ಮತ್ತು ಕೀರ್ತಿ ಎಂಬ ಚಾಮರವ್ಯಜನೇ=ಚಾಮರ ಮತ್ತು ಬೀಸಣಿಕೆಗಳನ್ನು ಅಭಜತ್=ಸ್ವೀಕರಿಸಿದನು.

**ಆತಪತ್ರಂ ತದ್ವೈಕುಂಠಂ ನಿಜಧಾಮಾ ಕುತೋಭಯಮ್ ।**
**ತ್ರಿವೃದ್ವೇದಃ ಸುಪರ್ಣಾಖ್ಯೋ ಯಜ್ಞಂ ವಹತಿ ಪೂರುಷಮ್ ॥ ೧೯ ॥**

ಅಕುತೋಭಯಂ=ಯಾರ ಭಯವೂ ಇಲ್ಲದ ನಿಜಧಾಮ=ತನ್ನ ಮನೆಯಾದ ವೈಕುಂಠಂ=ವೈಕುಂಠವು ಆತಪತ್ರಂ=ಛತ್ರಸ್ಥಾನೀಯವು,(ಅದರ ಅಭಿಮಾನದೇವತೆ ಛತ್ರಸ್ಥಾನೀಯವೆಂದರ್ಥ) ತ್ರಿವೃತ್ ವೇದಃ=ಮೂರು ವೇದಗಳು, (ವೇದಾಭಿಮಾನಿ ದೇವತೆಯಾದ) ಸುಪರ್ಣಾಖ್ಯಃ=ಗರುಡನು ಯಜ್ಞಂ=ಯಜ್ಞನಾಮಕ ಪೂರುಷಂ= ಪರಮಾತ್ಮನನ್ನು ವಹತಿ=ಧರಿಸುತ್ತಾನೆ.

**ಅನಪಾಯಿನೀ ಭಗವತೀ ಶ್ರೀಃ ಸಾಕ್ಷಾದಾತ್ಮನೋ ಹರೇಃ ।**
**(ಅನಪಾಯಿನೀ ಶ್ರೀಃ ಸಾಕ್ಷಾದಾತ್ಮಭೂತಾ ಹರೇಃ ಪ್ರಭೋಃ ।)**
**ವಿಷ್ವಕ್ಸೇನಸ್ತಂತ್ರಮೂರ್ತಿರ್ವಿದಿತಃ ಪಾರ್ಷದಾಧಿಪಃ ॥ ೨೦ ॥**

ಸಾಕ್ಷಾದನಪಾಯಿನೀ=ನಿತ್ಯಾವಿಯೋಗಿನಿಯಾದ ಭಗವತೀ=ಪೂಜ್ಯಳಾದ ಶ್ರೀಃ= ಲಕ್ಷ್ಮೀದೇವಿಯು ಪ್ರಭೋಃ=ಸ್ವಾಮಿಯಾದ ಹರೇಃ=ಶ್ರೀಹರಿಯ ಆತ್ಮಭೂತಾ= ಅರ್ಧಾಂಗಿನಿಯು(ಆತ್ಮನಃ=ಆತ್ಮತುಲ್ಯಳಾದ ಅರ್ಧಾಂಗಿ ಎಂದು ಅರ್ಥ) ಪಾರ್ಷದಾಧಿ ಪಃ=ಸೇವಕರ ನಾಯಕನಾದ ವಿಶ್ವಕ್ಸೇನಃ=ವಿಶ್ವಕ್ಸೇನನು ತಂತ್ರಮೂರ್ತಿಃ=ತಂತ್ರಗ್ರಂಥಗಳಿಗೆ ಅಭಿಮಾನಿಯು.

**ವಿಶೇಷ-** ಸತ್ಯಧರ್ಮರ ಪ್ರಕಾರ ಹರೇಃ ಆತ್ಮನಃ ಸಾಕ್ಷಾತ್ ತುಲ್ಯಾ ಅರ್ಧಾಂಗೀನೀತಿ ಯಾವತ್.

**ನಂದಾದಯೋಽಷ್ಟೌ ದ್ವಾಸ್ಥಾಶ್ಚ ತೇಽಣಿಮಾದ್ಯಾ ಹರೇರ್ಗುಣಾಃ ।**
**ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಃ ಪುರುಷಃ ಸ್ವಯಮ್ ॥**
**ಅನಿರುದ್ಧ ಇತಿ ಬ್ರಹ್ಮನ್ ಮೂರ್ತಿವ್ಯೂಹೇಽಭಿಧೀಯತೇ ॥ ೨೧ ॥**

ಅಣಿಮಾದ್ಯಾಃ ಹರೇಃ ಗುಣಾಃ=ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶಿತ್ವ, ವಶಿತ್ವ ಎಂಬ ಎಂಟು ಗುಣಗಳು, ನಂದಾದಯಃ ಅಷ್ಟೌ

ದ್ವಾಸ್ಥಾಃ=ನಂದ ಸುನಂದ ಬಲ ಪ್ರಬಲ ಕುಮುದ ಕುಮುದಾಕ್ಷ ಜಯ ವಿಜಯ ಎಂಬ ಎಂಟು ದ್ವಾರಪಾಲಕರು ಎಂಬ ಮೂರ್ತಿವ್ಯೂಹೇ=ಮೂರ್ತಿಗಳ ಸಮೂಹದಲಿಪುರುಷಃ =ಪುರುಷನಾಮಕನಾದ ನಾರಾಯಣನ್ನು ವಾಸುದೇವಃ ಸಂಕರ್ಷಣಃ ಪ್ರದ್ಯುಮ್ನಃ ಅನಿರುದ್ಧಃ=ವಾಸುದೇವ-ಸಂಕರ್ಷಣ-ಪ್ರದ್ಯುಮ್ನ-ಅನಿರುದ್ಧ ಎಂಬ ಹೆಸರಿನಿಂದ ಅಭಿಧೀಯತೇ=ಆವರಣನೆಂದು ಕರೆಯಿಸಿಕೊಳ್ಳಲ್ಪಡುವನು.

**ಸ ವಿಶ್ವಸ್ತೈಜಸಪ್ರಾಜ್ಞಸ್ತುರೀಯ ಇತಿ ವೃತ್ತಿಭಿಃ ।**
**ಅರ್ಥೇಂದ್ರಿಯಾಶಯಜ್ಞಾನೈರ್ಭಗವಾನ್ ಭಾಷ್ಯತೇ ತತಃ ॥ ೨೨ ॥**

ಸಃ ಭಗವಾನ್=ಆ ಭಗವಂತನು ಅರ್ಥೇಂದ್ರಿಯಾಶಯಜ್ಞಾನೈಃ ವೃತ್ತಿಭಿಃ= ಅರ್ಥಜ್ಞಾನವೇ ಮೊದಲಾದ ವೃತ್ತಿಗಳಿಂದ ವಿಶ್ವಸ್ತೈಜಸಪ್ರಾಜ್ಞಸ್ತುರೀಯಃ=ಕ್ರಮವಾಗಿ ವಿಶ್ವ-ತೈಜಸ-ಪ್ರಾಜ್ಞ-ತುರೀಯನೆಂದು ಭಾಷ್ಯತೇ=ಹೇಳಲ್ಪಡುವನು. ಜಾಗ್ರದವಸ್ಥೆಯಲ್ಲಿ ಪದಾರ್ಥಜ್ಞಾನ ಮಾಡಿಸುವುದರಿಂದ ವಿಶ್ವನೆಂದು,(ಇಂದ್ರಿಯ ಜ್ಞಾನವೃತ್ತಿಯಿಂದ ಮನಸ್ಸೇ ಮೊದಲಾದ ಇಂದ್ರಿಯಗಳ ವಾಸನಾಜ್ಞಾನದಿಂದ)ಸ್ವಪ್ನಾವಸ್ಥಾ ಪ್ರೇರಣೆಯಿಂದ ತೈಜಸನೆಂದು, ಸುಷುಪ್ತ್ಯವಸ್ಥಾಜ್ಞಾನವೃತ್ತಿಯಿಂದ ಪ್ರಾಜ್ಞನೆಂದು, ಮುಕ್ತರ ಸರ್ವವ್ಯಾಪಾರ ಕಾರಣನಾದವನು ತುರೀಯನೆಂದು ಭಾಷ್ಯತೇ=ಕರೆಯಲ್ಪಡುವನು. ಈ ವಿಷಯದಲ್ಲಿ ಮಾಂಡೂಕ್ಯಭಾಷ್ಯದಿಂದ ವಿಸ್ತಾರವಾಗಿ ತಿಳಿಯಬಹುದು ತತಃ=ಎಲ್ಲರೂಪಗಳೂ ವ್ಯಾಪ್ತವೇ ಆಗಿವೆ ಕಾರಣ ಭೇದವಿಲ್ಲವೆಂದು ಭಾವ.

**ಅಂಗೋಪಾಂಗಾಯುಧಾಕಲ್ಪೈರ್ಭಗವಾಂಸ್ತಚ್ಚತುಷ್ಟಯಮ್ ।**
**ಬಿಭರ್ತಿ ಸ್ಮ ಚತುರ್ಮೂರ್ತಿರ್ಭಗವಾನ್ ಹರಿರೀಶ್ವರಃ ॥ ೨೩ ॥**

ಅಂಗೋಪಾಂಗಾಯುಧಾಕಲ್ಪೈಃ=ಸಂಪೂರ್ಣದೇಹ ಅವಯವಗಳು ಚಕ್ರಾದಿಗಳು ಆಭರಣಗಳು ಇವುಗಳಿಂದ ಈಶ್ವರಃ=ನಿಯಾಮಕನಾದ ಭಗವಾನ್=ಐಶ್ವರ್ಯಾದಿ ಸಂಪನ್ನನಾದ ಚತುರ್ಮೂರ್ತಿಃ=ನಾಲ್ಕುರೂಪಿಯಾದ ಹರಿಃ=ಭಗವಂತನು ತಚ್ಚತುಷ್ಟಯಂ= ಅಂಗ, ಉಪಾಂಗ, ಆಯುಧ, ಆಕಲ್ಪಗಳನ್ನು ಬಿಭರ್ತಿ=ಭರಣ ಮಾಡುವನು.

**ವಿಶೇಷ-** ಅಂಗಾತ್ಮಕರಾದ ವಾಸುದೇವಾದಿಗಳು ಉಪಾಂಗಾದಿಗಳಾದ ಬ್ರಹ್ಮಾದಿಗಳಲ್ಲಿ ಸನ್ನಿಹಿತರಾಗಿರುತ್ತಾರೆ ಎಂದು ಪೂಜಾಕಾಲದಲ್ಲಿ ಆರೀತಿ ಸ್ಮರಣ ಮಾಡಬೇಕು ಎನ್ನುವದನ್ನು ತಿಳಿಸಲು ಸ್ಮ ಎಂದಿರುವರು. ಭಗವಾನ್ ಎಂದರೆ ಪೂಜ್ಯರಾದ ವಶಿಷ್ಠಾದಿಗಳಲ್ಲ ಎನ್ನಲು ಹರಿಃ ಎಂದಿರುವರು. ಹರಿ ಎಂದರೆ

ಪುರಂದರಾದಿಗಳಲ್ಲ ಎನ್ನಲು ಈಶ್ವರ ಎಂದಿರುವರು. ಅವನು ಸದಾಶಿವನಲ್ಲ ಎಂದು ತಿಳಿಸಲು ಚತುಮೂರ್ತಿ ಎಂದಿರುವರು ಅವನು ಅಷ್ಟಮೂರ್ತಿ ಎಂದು ಪ್ರಸಿದ್ಧನು.

*ವೇದವೇದ್ಯನಾದ ಶ್ರೀಹರಿಯೇ ಪುರುಷನಾದ್ದರಿಂದ ಅವಶ್ಯ ಉಪಾಸ್ಯನೆಂದು ಹೇಳುವರು.*

**ದ್ವಿಜವೃಷಭ ಸ ಏಷ ಬ್ರಹ್ಮಯೋನಿಃ ಸ್ವಯಂದೃಕ್**
**ಸ್ವಮಹಿಮಪರಿಪೂರ್ಣೋಽಮಾಯಯಾದ್ಯಃ ಸ್ವಯೈತತ್ ।**
**ಸೃಜತಿ ಹರತಿ ಪಾತೀತ್ಯಾಖ್ಯಯಾಽನಾವೃತಾಕ್ಷೋ**
**ವಿಸೃಜತ ಇವ ನಿರುಕ್ತಸ್ತತ್ಪರೈರಾತ್ಮಲಭ್ಯಃ ॥ ೨೪ ॥**

ಹೇ ದ್ವಿಜವೃಷಭ=ಶೌನಕರೇ ಸಃ=ಸರ್ವವೇದಗಳಿಂದ ತಿಳಿಸಲ್ಪಟ್ಟ ಉಪಾಸ್ಯತ್ವವುಳ್ಳ ಏಷಃ=ಪುರುಷನಾಮಕ ಶ್ರೀಹರಿಯು ಬ್ರಹ್ಮಯೋನಿಃ=ವೇದದಿಂದ ತಿಳಿಯಲ್ಪಡುವವನು. ಸ್ವಯಂ ಆದ್ಯಃ=ತಾನು ಎಲ್ಲರಿಗಿಂತ ಪೂರ್ವದಲ್ಲಿ ಇದ್ದವನು. ಸ್ವಮಾಯಯಾ=ತನ್ನ ಸ್ವರೂಪಭೂತಶಕ್ತಿಯಿಂದ ಏತತ್=ಈ ಪ್ರಪಂಚವನ್ನು ಸೃಜತಿ=ಸೃಷ್ಟಿಸುವನು ಹರತಿ= ಸಂಹರಿಸುವನು ಪಾತಿ=ರಕ್ಷಿಸುವನು ಸ್ವಯಂದೃಕ್=ಸ್ವರೂಪಭೂತ ಜ್ಞಾನವುಳ್ಳವನು ಸ್ವಮಹಿಮಪರಿಪೂರ್ಣಃ=ತನ್ನ ಮಾಹಾತ್ಮ್ಯದಿಂದ ಪೂರ್ಣನು. ಕಾರಣ ಇನ್ನೊಬ್ಬರ ಅಪೇಕ್ಷೆ ಇಲ್ಲ. ಅನಾವೃತಾಕ್ಷಃ=ಆವರಣರಹಿತವಾದ ಇಂದ್ರಿಯವುಳ್ಳವನು ಆದ್ದರಿಂದ ಸ್ವಯಂ ಪ್ರಕಾಶನಾದರೂ ಸೂರ್ಯನಿಗೆ ಮೋಡ ಆವರಿಸಿದಂತೆ ಇವನಿಗೆ ಜ್ಞಾನ ಪ್ರತಿಬಂಧಕವಲ್ಲ (ಅಪ್ರತಿಹತಜ್ಞಾನವುಳ್ಳವನು ಎಂದರ್ಥ) ತತ್ಪರೈಃ=ಉಪಾಸನೆ ಮಾಡುವ ಅವನ ಭಕ್ತರಿಂದ ಆತ್ಮಲಭ್ಯಃ=ಮನಸ್ಸಿನಲ್ಲಿ ತೋರುವನು. ಅಥವಾ ತನ್ನ ಅನುಗ್ರಹದಿಂದಲೇ ಪ್ರಾಪ್ಯನಾದವನು ಎಂದೂ ಅರ್ಥಮಾಡಬಹುದು. 'ಯಮ್ಮೈವೈಷ ವೃಣುತೇ ತೇನ ಲಭ್ಯಃ' ಎಂದು ಶ್ರುತಿ ಇದೆ. ಹೇಗೆ ತೋರುವನು ಎಂದರೆ ಹೇಳುವರು ಸೃಷ್ಟಿಕರ್ತನೆಂದು ಉಪಾಸನೆ ಮಾಡುವವನಿಗೆ ವಿವಿಧ ಪ್ರಪಂಚ ಸೃಷ್ಟಿಸುವಂತೆ ತೋರುವನು, ಸಂಹರ್ತಾ ಎಂದು ಉಪಾಸಿಸುವನಿಗೆ ಸಂಹಾರ ಮಾಡುವವನಂತೆಯೇ ತೋರುವನು ಅದರಂತೆ ರಕ್ಷಣೆಮಾಡುವವನು ಎಂದು ಉಪಾಸನೆ ಮಾಡುವವನಿಗೆ ರಕ್ಷಣೆಮಾಡುವವನಂತೆ ತೋರುವನು. ಅಂತೂ ಯಾವ ಯಾವ ಗುಣಗಳನ್ನು ಉಪಾಸಿಸುವನೋ ಆಯಾ ಗುಣವುಳ್ಳವನಾಗಿ ತೋರುವನು. ಸೃಜತೇ ಎಂದು ಪ್ರಯೋಗ ಮಾಡಿದ್ದರಿಂದ ಲೋಕದಲ್ಲಿ ಹುಟ್ಟಿಸುವವನು ಪ್ರಾಯಃ ಸಂಹರಿಸುವುದಿಲ್ಲ, ಸಂಹರಿಸುವವನು ಸೃಷ್ಟಿಸುವುದಿಲ್ಲ, (ಕರ್ತಾ ನ ಹರ್ತಾ ಹರ್ತಾ ನ ಕರ್ತಾ) ಆದರೆ ಇವನು ಹಾಗಲ್ಲ ಎಂಬುದಕ್ಕೆ ಶ್ರುತಿ ಹೀಗೆ ಹೇಳಿದೆ

'ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ' ಎಂದು. ಈ ಶ್ರುತಿ ಪ್ರತೀಕವನ್ನು ಕಿಂಚಿತ್ ಸ್ವೀಕರಿಸಿದ್ದೇವೆಂದು ಗ್ರಂಥಕರ್ತೃಗಳು ಸೂಚಿಸಿರುವರು ಎಂದು ತಿಳಿಯಬೇಕು.

**ವಿಶೇಷ-** ೧.ಬ್ರಹ್ಮ ವೇದಃ ಯೋನಿಃ ಜ್ಞಪ್ತಿಕಾರಣಂ ಯಸ್ಯ ಸಃ ಎಂದು ವಿಗ್ರಹ ಮಾಡಬೇಕು ಓಂ ಶಾಸ್ತ್ರಯೋನಿತ್ವಾತ್ ಓಂ ಎಂಬುವಲ್ಲಿ ಹೀಗೆಯೇ ಮಾಡಿದ್ದಾರೆ. ಅಥವಾ 'ಯೋ ಬ್ರಹ್ಮಾಣಂ ವಿದಧಾತಿ ಪೂರ್ವಂ' ಎಂದು ಶ್ರುತಿಯಿರುವುದರಿಂದ ಬ್ರಹ್ಮಣಃ ಯೋನಿಃ ಎಂದೂ ಮಾಡಬಹುದು. ಚತುರ್ಮುಖಬ್ರಹ್ಮನಿಗೆ ಕಾರಣನೆಂದರ್ಥ.

೨. ಸ್ರಷ್ಟಾ ಹರಃ, ಪಾತಾ, ಎಂಬ ಆಖ್ಯಯಾ ನಿರುಕ್ತಃ । ನಾಮಮಾತ್ರದಿಂದ ನಿರ್ವಚನ ಮಾಡಲ್ಪಟ್ಟಿರುವನು. ವಾಸ್ತವಿಕವಾಗಿ ವಸ್ತುವಿನಲ್ಲಿ ಭೇದವಿಲ್ಲ 'ಸ್ರಷ್ಟಾ ಪಾತಾ ತಥೈವಾತ್ತಾ ನಿಖಿಲಸ್ಯೈಕ ಏವ ತು' ಎಂದು ಶ್ರುತಿ ಇದೆ.

**ಶ್ರೀಕೃಷ್ಣ ಕೃಷ್ಣಸಖ ವೃಷ್ಣ್ಯವೃಷಾವನಿಧ್ರುಗ್**
**ರಾಜನ್ಯವಂಶದಹನಾನಪವರ್ಗವೀರ್ಯ**
**ಗೋವಿಂದ [1]ಗೋದ್ವಿಜಸುರಾರ್ತಿಹರಾವತಾರ**
**ತೀರ್ಥಶ್ರವಶ್ರವಣಮಂಗಲ ಪಾಹಿ ಭೃತ್ಯಾನ್** ॥ ೨೫ ॥

ಕೃಷ್ಣಸಖ=ಅರ್ಜುನ ಪ್ರಿಯನೇ ವೃಷ್ಣಿವೃಷ=ಯದುಕುಲತಿಲಕನೇ ಅವನಿಧ್ರುಗ್ ರಾಜನ್ಯವಂಶದಹನ=ಭೂಮಿಗೆ ಭಾರರಾದ(ದ್ರೋಹ ಬಗೆಯುವ)ಕ್ಷತ್ರಿಯಕುಲ ನಾಶಕನೇ ಅನಪವರ್ಗವೀರ್ಯ=ನಿರಸ್ತವಾಗದಿರುವ ಸಾಮರ್ಥ್ಯವುಳ್ಳ ಗೋವಿಂದ= ವೇದಪ್ರತಿಪಾದ್ಯನೇ ಗೋದ್ವಿಜಸುರಾರ್ತಿಹರಾವತಾರ=ಗೋವುಗಳು,ಬ್ರಾಹ್ಮಣರು ದೇವತೆಗಳ ದುಃಖ ಪರಿಹಾರಕ್ಕಾಗಿ ಅವತರಿಸಿದವನೇ ತೀರ್ಥಶ್ರವಶ್ರವಣಮಂಗಲ= ಸ್ವಯಂ ಪವಿತ್ರವಾದ, ಕೇಳಿದವರನ್ನೂ ಪವಿತ್ರಗೊಳಿಸುವ ಕೇಳುವ ಮಾತ್ರದಿಂದ ಮಂಗಲಪ್ರದನೇ ಶ್ರೀಕೃಷ್ಣ=ಶ್ರೀಕೃಷ್ಣನೇ ಭೃತ್ಯಾನ್ ಪಾಹಿ=ಸೇವಕರನ್ನು ರಕ್ಷಿಸು.

**ವಿಶೇಷ-** ಈ ವಿಧವಾದ ಶ್ಲೋಕವನ್ನು ಹಿಂದೆ ಒಂದನೆಯ ಸ್ಕಂಧ ೮ನೆಯ ಅಧ್ಯಾಯ ೪೬ನೇ ಶ್ಲೋಕದ (ಕುಂತಿ ಮಾಡಿದ ಸ್ತುತಿಯನ್ನು)ವ್ಯಾಖ್ಯಾನ ನೋಡಿ ತಿಳಿಯಬೇಕು. ಅಪ್ರಸ್ತುತ ಸ್ತುತಿಗೆ ಆ ಶ್ರೀಕೃಷ್ಣನೇ ಧ್ಯೇಯನಾದ ಪುರುಷನು ಎಂದು ಸ್ಮರಣ ಮಾಡಿಕೊಡುವುದೇ ಪ್ರಯೋಜನ.

---

೧. ಗೋಪವನಿತಾವ್ರಜಭೃತ್ಯಗೀತ. ಪಾಠ.

*ಇದನ್ನು ಶ್ರವಣ ಮಾಡಲು ಶ್ರದ್ಧೆಯನ್ನು ಹುಟ್ಟಿಸಲು ಫಲವನ್ನು ಹೇಳುವರು*

**ಯ ಇದಂ ಕಲ್ಯ ಉತ್ಥಾಯ ಮಹಾಪುರುಷಲಕ್ಷಣಮ್ ।**
**ತಚ್ಚಿತ್ತಃ ಪ್ರಯತೋ ಜಪ್ತ್ವಾ ಬ್ರಹ್ಮವೇದಗುಹಾಶಯಮ್ ॥ ೨೬ ॥**

ಯಃ=ಯಾವನು ಕಲ್ಯೇ=ಉಷಃಕಾಲದಲ್ಲಿ ಉತ್ಥಾಯ=ಎದ್ದು ಮಹಾಪುರುಷಲಕ್ಷಣಂ=ವಿರಾಟ್ ಪುರುಷನನ್ನು ಪ್ರಯತಃ=ಪ್ರಯತ್ನ ಪೂರ್ವಕವಾಗಿ(ನಿಗೃಹಿತಮನಸ್ಕನಾಗಿ) ಜಪ್ತ್ವಾ=ಜಪಿಸಿ ತಚ್ಚಿತ್ತಸ್ಸನ್=ಭಗವಂತನಲ್ಲಿ ಮನಸಿಟ್ಟವನಾಗಿ ಗುಹಾಶಯಂ=ಹೃದಯ ಗುಹಾದಲ್ಲಿರುವ ಬ್ರಹ್ಮ=ಶ್ರೀಹರಿಯನ್ನು ವೇದ=ತಿಳಿಯುವನು. ಇದನ್ನು ಉಪಾಸನೆ ಮಾಡುವದರಿಂದ ಅಧಿಕಾರಿಗಳಿಗೆ ಏಕಾಂತತೆ ಬರುವುದು ಎಂದು ಧ್ವನಿತವಾಗುವುದು.

**॥ ಇಲ್ಲಿಗೆ ಹತ್ತನೇ ಅಧ್ಯಾಯವು ಸಮಾಪ್ತವಾಯಿತು ॥**



# ಅಥ ಏಕಾದಶೋಽಧ್ಯಾಯಃ

ಸಾರಾಂಶ

ಸೂರ್ಯಾಂತರ್ಗತನಾದ ಶ್ರೀಹರಿಯು ಚೈತ್ರ ಮುಂತಾದ ಹನ್ನೆರಡು ಮಾಸಗಳಲ್ಲಿ ಕಾಲಸ್ವರೂಪವನ್ನು ಧರಿಸುತ್ತಾ ಲೋಕಗಳ ಪ್ರವೃತ್ತಿಗಾಗಿ ಆಯಾ ಕಾಲಗುಣಗಳಿಗನುಗುಣವಾಗಿ ಬೇರೆ ಬೇರೆಯಾಗಿ ಸಂಚರಿಸುವನು. ಬೇರೆಬೇರೆ ಹೆಸರಿನ ಸೂರ್ಯದೇವತೆ, ಅಪ್ಸರಾಸ್ತ್ರೀಯರು, ರಾಕ್ಷಸರು, ನಾಗಗಳು, ಯಕ್ಷರು, ಗಂಧರ್ವರು ಇವರೆಲ್ಲ ಚೈತ್ರಮಾಸವನ್ನಾರಂಭಿಸಿ ಫಾಲ್ಗುಣಮಾಸಪರ್ಯಂತ ಇರುವ ಹನ್ನೆರಡು ಮಾಸಗಳಲ್ಲಿ ತಾವು ಪ್ರೇರಕರಾಗಿ ಇದ್ದು ಮಾಸಾಧಿಪತಿಯಾದ ನಿನ್ನನ್ನು ಶರಣುಹೋಗಿ ಉಪಾಸಿಸುವರು.

ಸೂರ್ಯಾಂತರ್ಗತನಾದ ನಾರಾಯಣನು ಹನ್ನೆರಡು ತಿಂಗಳಲ್ಲಿ ಆರು ಋತುಗಳಿಗೆ ಅಭಿಮಾನಿಗಳಾದ ಆರು ದೇವತೆಗಳಿಂದ ಸೇರಿಸಿಕೊಂಡು ಸುತ್ತಲೂ ಸಂಚರಿಸುತ್ತ ಅನನ್ಯಭಜಕನಿಗೆ ಇಹ-ಪರಗಳಲ್ಲಿ ಸದ್ಬುದ್ಧಿಯನ್ನು ಕೊಡುವನು.

ಋಗ್ಯಜುಸ್ಸಾಮಗಳಿಂದ ಪ್ರತಿಪಾದಿತನಾದ ಸೂರ್ಯನನ್ನು ಜ್ಞಾನಿಗಳು ಸ್ತುತಿಸುವರು. ಗಂಧರ್ವರು ಗಾನ ಮಾಡುವರು. ಎದುರಿಗೆ ಅಪ್ಸರಾಸ್ತ್ರೀಯರು ನರ್ತನ ಮಾಡುವರು. ನಾಗಗಳು ರಥವನ್ನು ತಮ್ಮ ತಲೆಯ ಮೇಲೆ ಹೊರುವವು. ಯಕ್ಷರು ರಥವನ್ನು ಜೋಡಿಸುವರು. ಬಲಿಷ್ಠರಾದ ಹೇತಿ ಮೊದಲಾದ ರಾಕ್ಷಸರು ಹಿಂಬದಿಯಲ್ಲಿ ರಥವನ್ನು ತಳ್ಳುವರು. ಬ್ರಹ್ಮಜ್ಞಾನಿಗಳು ಸೂರ್ಯಾಂತರ್ಗತನಾದ ಹರಿಯನ್ನು ಸ್ತೋತ್ರ ಮಾಡುತ್ತ ಮುಖದರ್ಶನ ಮಾಡುವರು. ಈ ರೀತಿಯಾಗಿ ಭಗವಂತನು ಜಗತ್ತನ್ನು ಪ್ರೇರಿಸುವನು ಪ್ರಕಾಶಗೊಳಿಸುವನು.

*'ಧ್ಯೇಯಃ ಸದಾ ಸವಿತೃಮಂಡಲಮಧ್ಯವರ್ತೀ ನಾರಾಯಣಃ ಸರಸಿಜಾಸನಸನ್ನಿವಿಷ್ಟಃ' ಎಂದು ಹೇಳಿದಂತೆ ಗೃಹಸ್ಥರು ವಿಶೇಷವಾಗಿ ಸೂರ್ಯಾಂತರ್ಗತನಾದ ಶ್ರೀಹರಿಯನ್ನು ಉಪಾಸಿಸಬೇಕು. ಅದಕ್ಕಾಗಿ ಮೊದಲು ಸೂರ್ಯನ ಸ್ಥಿತಿಯನ್ನು ತಿಳಿಯಬೇಕು. ಕಾರಣ ಸೂರ್ಯನ ಸ್ಥಿತಿಯನ್ನು ಈ ಅಧ್ಯಾಯದಲ್ಲಿ ಹೇಳುವರು. ಲೋಕಪ್ರವರ್ತಕನಾದ ಸೂರ್ಯನು ಜಗತ್ತಿನಲ್ಲಿ ಸಂಚರಿಸುವನು. ತನ್ನ ಉದಯದಿಂದ ದಿನವನ್ನು ಪ್ರಾರಂಭಿಸುವನು.*

**ಶೌನಕ ಉವಾಚ -**

**ಶುಕೋ ಯದಾಹ ಭಗವಾನ್ ವಿಷ್ಣುರಾತಾಯ (ಸ್ಯಂದನೇ)ಪೃಚ್ಛತೇ ।**
**ಸೌರೇ ಗಣೋ ಮಾಸಿ ಮಾಸಿ ನಾನಾ ವಸತಿ ಸಪ್ತಕಃ ॥ ೧ ॥**

ಭಗವಾನ್ ಶುಕಃ=ಪೂಜ್ಯರಾದ ಶುಕಾಚಾರ್ಯರು ಪೃಚ್ಛತೇ=ಪ್ರಶ್ನೆ ಮಾಡುವ ವಿಷ್ಣುರಾತಾಯ=ಪರೀಕ್ಷಿತನಿಗೆ ಸೌರೇ ರಥೇ=ಸೂರ್ಯನ ರಥದಲ್ಲಿ ಸಪ್ತಕಃ ಗಣಃ=ಏಳರ ಸಮುದಾಯವು ಮಾಸಿ ಮಾಸಿ=ಪ್ರತಿ ತಿಂಗಳಿನಲ್ಲಿ ನಾನಾ ವಸತಿ=ಬೇರೆ ಬೇರೆ ಹೆಸರಿನ ಸೂರ್ಯನನ್ನು ಅನುಸರಿಸಿ ಬೇರೆ ಬೇರೆ ಹೆಸರಿನಿಂದ ವಸತಿ=ಇರುವುದು. ಇತಿ=ಎಂದು ಯದಾಹ=ಯಾವುದನ್ನು ಹೇಳಿದರೋ ತೇಷಾಂ ಎಂದು ಮುಂದಿನ ಶ್ಲೋಕದಲ್ಲಿ ಅನ್ವಯ

**ವಿಶೇಷ**-ಸೌರಃ ಎಂಬ ಪ್ರಥಮಾಂತ ಪಾಠವಿದ್ದಾಗ ಗಣಕ್ಕೆ ವಿಶೇಷಣ.

ಶುಕಾಚಾರ್ಯರು ಪರೀಕ್ಷಿತನಿಗೆ ಪಂಚಮಸ್ಕಂಧದ ೨೧ನೇ ಅಧ್ಯಾಯದಲ್ಲಿ

'ತಥಾ ಅನ್ಯೇ ಚ ಋಷಯಃ ಗಂಧರ್ವಾಪ್ಸರಸೋ ನಾಗಾಃ ಗ್ರಾಮಣ್ಯೋ ಯಾತುಧಾನಾಃ ದೇವಾಃ ಇತ್ಯೇಕೈಕಶೋ ಗಣಾಃ ಸಪ್ತ ಚ ಏಕೈಕಶಃ ರಥಸ್ಥಾ ಮಾಸಿಮಾಸಿ ಭಗವಂತಂ ಸೂರ್ಯಮಾತ್ಮಾನಂ ನಾನಾನಾಮಾನಂ ಪೃಥಙ್ನಾಮಾನಃ ಪೃಥಕ್ಕರ್ಮಭಿಃ ದ್ವಾದಶ ಉಪಾಸತೇ'

ಎಂದು ಸಂಕ್ಷಿಪ್ತವಾಗಿ ಹೇಳಿರುವರು. ಆದರೆ ಅಲ್ಲಿ ಅವರ ಹೆಸರನ್ನು ಕಾರ್ಯವನ್ನು ಹೇಳಿರುವುದಿಲ್ಲ ಅದನ್ನು ಇಲ್ಲಿ ಹೇಳುತ್ತಾರೆ.

**ತೇಷಾಂ ನಾಮಾನಿ ಕರ್ಮಾಣಿ ನಿಯುಕ್ತಾನಾಮಧೀಶ್ವರೈಃ ।**
**ಬ್ರೂಹಿ ನಃ ಶ್ರದ್ಧಧಾನಾನಾಂ ವ್ಯೂಹಂ ಸೂರ್ಯಾತ್ಮನೋ ಹರೇಃ ॥ ೨ ॥**

ಅಧೀಶ್ವರೈಃ ನಿಯುಕ್ತಾನಾಂ=ತಮ್ಮ ತಮ್ಮ ಅಧಿಪತಿಗಳಿಂದ ಪ್ರೇರಿತರಾದ ತೇಷಾಂ=ಗಣಗಳಲ್ಲಿ ಪರಿಗಣಿತರಾದವರ ನಾಮಾನಿ=ಹೆಸರುಗಳನ್ನು ಕರ್ಮಾಣಿ= ಕಾರ್ಯಗಳನ್ನು ಶ್ರದ್ಧಧಾನಾನಾಂ=ಆಸಕ್ತಿಯುಳ್ಳ ನಃ=ನಮಗೆ ಸೂರ್ಯಾತ್ಮನಃ=

ಸೂರ್ಯಾಂತರ್ಯಾಮಿಯಾದ ಹರೇಃ=ಪರಮಾತ್ಮನ ವ್ಯೂಹಂ=ಸಮೂಹವನ್ನು ಸೂರ್ಯಾತ್ಮನಃ ಹರೇಃ=ಸೂರ್ಯನ ವ್ಯೂಹಂ ಚ=ಸಮೂಹವನ್ನೂ ಬ್ರೂಹಿ=ಹೇಳಿರಿ.

**ಸೂತ ಉವಾಚ –**

**ಅನಾದ್ಯವಿದ್ಯಯಾ ವಿಷ್ಣೋರಾತ್ಮನಃ ಸರ್ವದೇಹಿನಾಮ್ ।**
**ನಿರ್ಮಿತೋ ಲೋಕತಂತ್ರೋಽಯಂ ಲೋಕೇಷು ಪರಿವರ್ತತೇ ॥ ೩ ॥**

ಸರ್ವದೇಹಿನಾಂ=ಎಲ್ಲ ಜೀವರ ಆತ್ಮನಃ=ಅಂತರ್ಯಾಮಿಯಾದ ವಿಷ್ಣೋಃ= ಶ್ರೀಹರಿಯ ಅನಾದ್ಯವಿದ್ಯಯಾ=ಅನಾದಿಯಾದ ಭಗವಂತನ ಇಚ್ಛೆಯಿಂದ (ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ । ಪ್ರಕೃತಿರ್ವಾಸನೇತ್ಯೇವ ತವೇಚ್ಛಾನಂತ ಕಥ್ಯತೇ) ನಿರ್ಮಿತಃ=ಸೃಷ್ಟಿಸಲ್ಪಟ್ಟ ಲೋಕತಂತ್ರಃ=ಲೋಕಪ್ರವರ್ತಕನಾದ ಅಯಂ=ಈ ಸೂರ್ಯನು ಲೋಕೇ=ಜಗತ್ತಿನಲ್ಲಿ ಪರಿವರ್ತತೇ=ಸಂಚರಿಸುವನು.

**ಏಕ ಏವ ಹಿ ಲೋಕಾನಾಂ ಸೂರ್ಯ ಆತ್ಮಾಽಽದಿಕೃದ್ಧರಿಃ ।**
**ಸರ್ವವೇದಕ್ರಿಯಾಮೂಲಮೃಷಿಭಿರ್ಬಹುಧೋದಿತಃ ॥ ೪ ॥**

ಏಕಃ ಏವ=ದ್ವಾದಶಾದಿತ್ಯರಲ್ಲಿ ಒಬ್ಬನೇ ಹರಿಃ=ಪರಮಾತ್ಮನು ಉಳಿದವರಲ್ಲಿ ಅಂತರ್ಯಾಮಿಯಾಗಿರುವನು. ಸೂರ್ಯಃ(ಸೂರಿಭಿಃ ಪ್ರಾಪ್ಯತ್ವಾತ್)=ಜ್ಞಾನಿಗಳಿಂದ ಪ್ರಾಪ್ಯನಾದ್ದರಿಂದ ಸೂರ್ಯಶಬ್ದ ವಾಚ್ಯನಾದ ಲೋಕಾನಾಂ ಆತ್ಮಾ=ಸ್ಥಾವರ ಜಂಗಮಾತ್ಮಕವಾದ ಲೋಕಕ್ಕೆ ನಿಯಾಮಕನು.('ಸೂರ್ಯ ಆತ್ಮಾ ಜಗತಃ ತಸ್ಥುಷಶ್ಚ' ಎಂದು ಶ್ರುತಿ ಇದೆ.) ಆದಿಕೃತ್=ತನ್ನ ಉದಯದಿಂದ ದಿನವನ್ನು ಪ್ರಾರಂಭಿಸುವವನು. ('ಕೃತೀ ಛೇದನೆ' ಎಂದಿರುವುದರಿಂದ ದಿನಾದಿಕೃತ್ ಅಂದರೆ ದಿನಾದಿಚ್ಛಿತ್ ಅದರ ಅಭಿಪ್ರಾಯ ಅಂತಕರ್ತೃವು ಎಂದು)ಋಷಿಭಿಃ=ಜ್ಞಾನಿಗಳಿಂದ ಸರ್ವವೇದ-ಕ್ರಿಯಾಮೂಲಂ=ಎಲ್ಲ ವೇದಗಳಲ್ಲಿ ವಿಹಿತವಾದ ಕ್ರಿಯೆಗಳಿಗೆ ಕಾರಣನು ಎಂದು ಬಹುಧಾ=ಅನೇಕ ರೀತಿ ಉದಿತಃ=ಹೇಳಲ್ಪಟ್ಟವನು.

*'ಪ್ರಾತರುತ್ಥಾಯ ಸಂಧ್ಯಾಂ ಉಪಾಸೀತ' 'ವಸಂತೇ ವಸಂತೇ ಜ್ಯೋತಿಷಾ ಯಜೇತ' ಮುಂತಾಗಿ ಎಲ್ಲ ಕಾರ್ಯವೂ ಕಾಲಾಧೀನ ಎಂದು ಉಪಪಾದಿಸುವರು.*

**ಕಾಲೋ ದೇಶಃ ಕ್ರಿಯಾ ಕರ್ತಾ ಕರಣಂ ಕಾರ್ಯಮಾಗಮಃ ।**
**ದ್ರವ್ಯಂ ಫಲಮಿತಿ ಬ್ರಹ್ಮನ್ ನವಧೋಕ್ತೋಽಜಯಾ ಹರಿಃ ॥ ೫ ॥**

ಬ್ರಹ್ಮನ್=ಶೌನಕರೇ ಹರಿಃ=ಪರಮಾತ್ಮನು ಅಜಯಾ=ತನ್ನ ಇಚ್ಛೆಯಿಂದ ಕಾಲಃ=ಕಾಲವು ದೇಶಃ=ಸಮನಾದ ಶುದ್ಧವಾದ ದೇಶವು ಕ್ರಿಯಾ=ಕರ್ಮಾನುಷ್ಠಾನವು ಕರ್ತಾ=ಬ್ರಾಹ್ಮಣಾದಿಗಳು ಕರಣಂ=ಇಂದ್ರಿಯಾದಿಗಳು ಕಾಯಂ=ದೇಹವು ಆಗಮಃ= ವೇದ ಮುಂತಾದ ಶಾಸ್ತ್ರಗಳು ದ್ರವ್ಯಂ=ಚರು ಮುಂತಾದವು ಫಲಂ=ಸ್ವರ್ಗಾದಿಗಳು ಇತಿ=ಎಂದು ನವಧಾ=ಒಂಭತ್ತು ರೀತಿಯಾಗಿ ಉಕ್ತಃ=ಆಯಾ ಪದಾರ್ಥಗಳಲ್ಲಿ ಪ್ರೇರಕನಾಗಿ ಆಯಾ ನಾಮಗಳಿಂದ ಕರಿಸಿಕೊಳ್ಳುವನು.

*ಒಬ್ಬನೇ ಹರಿಯು ಎಲ್ಲವನ್ನೂ ಪ್ರೇರಿಸುವ ರೀತಿಯನ್ನು ಹೇಳುವರು -*

**ಮಧ್ವಾದಿಷು ದ್ವಾದಶಸು ಭಗವಾನ್ ಕಾಲರೂಪಧೃಕ್ ।**
**ಲೋಕತಂತ್ರಾಯ ಚರತಿ ಪೃಥಗ್ ದ್ವಾದಶಭಿರ್ಗುಣೈಃ ॥ ೬ ॥**

ಮಧ್ವಾದಿಷು=ಚೈತ್ರ ಮುಂತಾದ ದ್ವಾದಶಸು=ಹನ್ನೆರಡು ಮಾಸಗಳಲ್ಲಿ ಕಾಲರೂಪ-ಧೃಕ್=ಕಾಲಸ್ವರೂಪವನ್ನು ಧರಿಸಿದ ಭಗವಾನ್=ಶ್ರೀಹರಿಯು ಲೋಕತಂತ್ರಾಯ=ಲೋಕಗಳ ಪ್ರವೃತ್ತಿಗಾಗಿ ದ್ವಾದಶಭಿಃ ಗುಣೈಃ=ಆಯಾ ಕಾಲಗುಣಗಳಿಂದ ಪೃಥಕ್ ಚರತಿ=ಬೇರೆ ಬೇರೆಯಾಗಿ ಸಂಚರಿಸುವನು.

*ಚೈತ್ರಮಾಸಪ್ರವರ್ತಕರು*

**ಧಾತಾ ಕೃತಸ್ಥಲೀ ಹೇತಿರ್ವಾಸುಕೀ ರಥಕೃನ್ಮುನೇ ।**
**ಪುಲಸ್ತ್ಯಸ್ತುಂಬುರುರಿತಿ ಮಧುಮಾಸಂ ನಯಂತ್ಯಮೀ ॥ ೭ ॥**

ಧಾತಾ=ಧಾತಾ ಎಂಬ ಸೂರ್ಯನು ಕೃತಸ್ಥಲೀ=ಕೃತಸ್ಥಲೀ ಎಂಬ ಅಪ್ಸರಾಸ್ತ್ರೀಯು ಹೇತಿಃ=ಹೇತಿ ಎಂಬ ರಾಕ್ಷಸನು ವಾಸುಕಿಃ=ವಾಸುಕಿಸರ್ಪವು ರಥಕೃತ್=ರಥಕೃತ್ ಎಂಬ ಯಕ್ಷನು ಪುಲಸ್ತ್ಯಃ=ಪುಲಸ್ತ್ಯ ಎಂಬ ಋಷಿಯು ತುಂಬುರುಃ=ತುಂಬುರು ಎಂಬ ಗಂಧರ್ವನು ಇತಿ=ಈ ರೀತಿಯಾದ ಅಮೀ=ಇವರು ಮಧುಮಾಸಂ ನಯಂತಿ=ಚೈತ್ರಮಾಸವನ್ನು ನಡೆಸುವರು. ಮಾಸಾಧಿಪತಿಯಾದ ನನಗೆ ಶರಣು ಬರುವರು. ಹೇಳಿದ ಕರ್ಮಪ್ರವರ್ತಕರಾಗಿ ಆ ಮಾಸದ ಮೂವತ್ತು ದಿನಗಳನ್ನು ದಾಟುವರು.

*ವೈಶಾಖಮಾಸಪ್ರವರ್ತಕರು*

**ಅರ್ಯಮಾ ಪುಲಹಾಽಥೌಜಾಃ ಪ್ರಹೇತಿಃ ಪುಂಜಕಸ್ಥಲೀ ।**
**ನಾರದಃ ಕಚ್ಛನೀರಶ್ಚ ನಯಂತ್ಯೇತೇ ಸ್ಮ ಮಾಧವಮ್ ॥ ೮ ॥**

ಆರ್ಯಮಾ=ಆರ್ಯಮಾ ಎಂಬ ಸೂರ್ಯನು ಪುಲಹಃ=ಪುಲಹ ಎಂಬ ಋಷಿಯು ಅಥೌಜಾಃ=ಅಥೌಜಾ ಎಂಬ ಯಕ್ಷನು ಪ್ರಹೇತಿಃ=ಪ್ರಹೇತಿ ಎಂಬ ರಾಕ್ಷಸನು ಪುಂಜಕಸ್ಥಲೀ=ಈ ಹೆಸರಿನ ಅಪ್ಸರಾಸ್ತ್ರೀಯು ನಾರದಃ=ನಾರದ ಎಂಬ ಗಂಧರ್ವರು ಕಚ್ಛನೀರಃ=ಈ ಹೆಸರಿನ ನಾಗವು ಏತೇ=ಇವರು ಮಾಧವಂ=ವೈಶಾಖ ಮಾಸವನ್ನು ನಯಂತಿ=ಮಾಸಾಧಿಪತಿಯಾದ ಮಾಧವನನ್ನು ಶರಣುಹೋಗಿ ಉಪಾಸಿಸುವರು.

*ಜೇಷ್ಠಮಾಸಪ್ರವರ್ತಕರು*

**ಮಿತ್ರೋಽತ್ರಿಃ ಪೌರುಷೇಯೋಽಥ ತಕ್ಷಕೋ ಮೇನಕಾ ಹಹಾ ।**
**ರಥಸ್ವನ ಇತಿ ಹ್ಯೇತೇ ಶುಕ್ರಮಾಸಂ ನಯಂತ್ಯಮೀ ॥ ೯ ॥**

ಮಿತ್ರಃ=ಮಿತ್ರನಾಮಕಸೂರ್ಯನು ಅತ್ರಿಃ=ಅತ್ರಿಋಷಿಯು, ಪೌರುಷೇಯಃ= ಪೌರುಷೇಯ ಎಂಬ ರಾಕ್ಷಸನು ತಕ್ಷಕಃ=ತಕ್ಷಕ ಎಂಬ ಸರ್ಪವು, ಮೇನಕಾ=ಮೇನಕಾ ಎಂಬ ಅಪ್ಸರೆಯು ಹಹಾ=ಹಹಾ ಎಂಬ ಗಂಧರ್ವನು ರಥಸ್ವನಃ=ರಥಸ್ವನ ಎಂಬ ಯಕ್ಷನು ಇತ್ಯೇತೇ=ಇವರೆಲ್ಲರು ಶುಕ್ರಮಾಸಂ ನಯಂತಿ=ಜ್ಯೇಷ್ಠಮಾಸವನ್ನು ನಡೆಸುವರು.

*ಆಷಾಢಮಾಸಪ್ರವರ್ತಕರು*

**ವಸಿಷ್ಠೋ ವರುಣೋ ರಂಭಾ ಸಹಜನ್ಯಸ್ತಥಾ ಹುಹೂಃ ।**
**ಶುಕ್ರಶ್ಚಿತ್ರಸ್ವನಶ್ಚೈವ ಶುಚಿಮಾಸಂ ನಯಂತ್ಯಮೀ ॥ ೧೦ ॥**

ವಸಿಷ್ಠಃ=ವಸಿಷ್ಠ ಎಂಬ ಋಷಿಯು ವರುಣಃ=ವರುಣ ಎಂಬ ಸೂರ್ಯನು ರಂಭಾ=ಈ ಹೆಸರಿನ ಅಪ್ಸರಾಸ್ತ್ರೀಯು ಸಹಜನ್ಯಃ=ಸಹಜನ್ಯ ಎಂಬ ರಾಕ್ಷಸನು ಹುಹೂಃ=ಹುಹೂ ಎಂಬ ಗಂಧರ್ವನು ಶುಕ್ರಃ=ಶುಕ್ರ ಎಂಬ ನಾಗನು ಚಿತ್ರಸ್ವನಃ= ಚಿತ್ರಸ್ವನ ಎಂಬ ಯಕ್ಷನು ಏತೇ=ಇವರು ಶುಚಿಮಾಸಂ=ಆಷಾಢಮಾಸವನ್ನು ನಯಂತಿ= ನಡೆಸುವರು. ತನ್ನಿಯಾಮಕನಾದ ಭಗವಂತನನ್ನು ಉಪಾಸಿಸುವರು.

*ಶ್ರಾವಣಮಾಸಪ್ರವರ್ತಕರು*

**ಇಂದ್ರೋ ವಿಶ್ವಾವಸುಃ ಸ್ರೋತಾ ಏಲಾಪತ್ರಸ್ತಥಾಂಗಿರಾಃ ।**
**ಪ್ರಮ್ಲೋಚಾ ರಾಕ್ಷಸಃ ಸ್ವರ್ಯೋ ನಭೋಮಾಸಂ ನಯಂತ್ಯಮೀ ॥ ೧೧ ॥**

ಇಂದ್ರಃ=ಇಂದ್ರ ಎಂಬ ಸೂರ್ಯನು ವಿಶ್ವಾವಸುಃ=ವಿಶ್ವಾವಸು ಎಂಬ ಗಂಧರ್ವನು ಸ್ರೋತಾ=ಸ್ರೋತಾ ಎಂಬ ಯಕ್ಷನು, ಏಲಾಪತ್ರಃ=ಏಲಾಪತ್ರ ಎಂಬ ನಾಗನು ಅಂಗೀರಾಃ=ಅಂಗೀರಸ ಎಂಬ ಋಷಿಯು ಪ್ರಮ್ಲೋಚಾ=ಪ್ರಮ್ಲೋಚಾ ಎಂಬ ಅಪ್ಸರೆಯು ಸ್ವರ್ಯಃ=ಸ್ವರ್ಯ ಎಂಬ ರಾಕ್ಷಸನು ಅಮೀ=ಇವರು ನಭೋಮಾಸಂ ನಯಂತಿ=ಶ್ರಾವಣಮಾಸವನ್ನು ನಿಯಮಿಸುವರು.

**ವಿಶೇಷ-** ಸ್ವರ್ಧ್ಯ ಎಂಬ ರಾಕ್ಷಸ ಎಂಬುದು ಸತ್ಯಧರ್ಮರ ಪಾಠ. ಸ್ವರ್ಯ, ವರ್ಷ ಎಂಬ ಪಾಠಗಳೂ ಇವೆ. ನಾವು ಅವರ ನಾಮಕರಣ ಕಾಲಕ್ಕೆ ಇಲ್ಲದವರಾದ್ದರಿಂದ ನಿರ್ಣಯ ಮಾಡಲಾರೆವು. ಅಂತೂ ರಾಕ್ಷಸ ಎಂಬುದಂತೂ ನಿರ್ವಿವಾದ. ಮೂಲದಲ್ಲೇ ಬೇರೆಯವರಿಗೆ ಅವಕಾಶವಿಲ್ಲದಂತೆ ಹೇಳಿರುವರು ಎನ್ನುತ್ತಾರೆ. ಶ್ರೀಸತ್ಯಧರ್ಮರು.

*ಭಾದ್ರಪದಮಾಸಪ್ರವರ್ತಕರು*

**ವಿವಸ್ವಾನುಗ್ರಸೇನಶ್ಚ ವ್ಯಾಘ್ರ ಆಸರಣೋ ಭೃಗುಃ ।**
**ಅನುಮ್ಲೋಚಾ ಶಂಖಪಾಲೋ ನಭಸ್ಯಾಖ್ಯಂ ನಯಂತ್ಯಮೀ ॥ ೧೨ ॥**

ವಿವಸ್ವಾನ್=ವಿವಸ್ವಾನ್ ಎಂಬ ಸೂರ್ಯನು ಉಗ್ರಸೇನಃ=ಉಗ್ರಸೇನ ಎಂಬ ಗಂಧರ್ವನು ವ್ಯಾಘ್ರಃ=ವ್ಯಾಘ್ರ ಎಂಬ ರಾಕ್ಷಸನು ಆಸರಣಃ=ಆಸರಣ ಎಂಬ ಯಕ್ಷನು ಭೃಗುಃ=ಭೃಗು ಎಂಬ ಋಷಿಯು ಅನುಮ್ಲೋಚಾ=ಅನುಮ್ಲೋಚಾ ಎಂಬ ಅಪ್ಸರಾಸ್ತ್ರೀ ಶಂಖಪಾಲಃ=ಶಂಖಪಾಲ ಎಂಬ ನಾಗನು ಅಮೀ=ಇವರು ನಭಸ್ಯಾಖ್ಯಂ=ಭಾದ್ರಪದ ಮಾಸವನ್ನು ನಯಂತಿ=ನಡೆಸುವರು ಹಾಗೂ ತನ್ನಿಯಾಮಕನಾದ ಭಗವಂತನನ್ನು ಉಪಾಸಿಸುತ್ತಾರೆ.

*ಮಾಘಮಾಸಪ್ರವರ್ತಕರು*

**ಪೂಷಾ ಧನಂಜಯೋ ವಾತಃ ಸುಷೇಣಃ ಸುರುಚಿಸ್ತಥಾ ।**
**ಘೃತಾಚೀ ಗೌತಮಶ್ಚೇತಿ ತಪೋ ಮಾಸಂ ನಯಂತ್ಯಮೀ ॥ ೧೩ ॥**

ಪೂಷಾ=ಪೂಷಾ ಎಂಬ ಸೂರ್ಯನು ಧನಂಜಯಃ=ಧನಂಜಯ ಎಂಬ ಸರ್ಪವು ವಾತಃ=ವಾತ ಎಂಬ ರಾಕ್ಷಸನು ಸುಷೇಣಃ=ಸುಷೇಣ ಎಂಬ ಯಕ್ಷನು ಸುರುಚಿಃ= ಸುರುಚಿ ಎಂಬ ಗಂಧರ್ವನು ಘೃತಾಚೀ=ಘೃತಾಚೀ ಎಂಬ ಅಪ್ಸರಾಸ್ತ್ರೀಯು ಗೌತಮಃ= ಗೌತಮಋಷಿಗಳು ಅಮೀ=ಇವರು ತಪೋಮಾಸಂ=ಮಾಘಮಾಸವನ್ನು ನಯಂತಿ= ನಡೆಸುವರು ಹಾಗೂ ತನ್ನಿಯಾಮಕನಾದ ಭಗವಂತನನ್ನು ಉಪಾಸಿಸುತ್ತಾರೆ.

*ಫಾಲ್ಗುಣಮಾಸಪ್ರವರ್ತಕರು*

**ಋತುರ್ವರ್ಚಾ ಭರದ್ವಾಜಃ ಪರ್ಜನ್ಯಃ ಸೇನಜಿತ್ ತಥಾ ।**
**ವಿಶ್ವ ಐರಾವತಶ್ಚೈವ ತಪಸ್ಯಾಖ್ಯಂ ನಯಂತ್ಯಮೀ ॥ ೧೪ ॥**

ಋತುಃ=ಋತು ಎಂಬ ಅಪ್ಸರಾಸ್ತ್ರೀ ವರ್ಚಾ=ವರ್ಚಾ ಎಂಬ ಗಂಧರ್ವನು ಭರದ್ವಾಜಃ=ಭರದ್ವಾಜ ಎಂಬ ಋಷಿಯು ಪರ್ಜನ್ಯಃ=ಪರ್ಜನ್ಯನಾಮಕನಾದ ಸೂರ್ಯನು ಸೇನಜಿತ್=ಸೇನಜಿತ್ ಎಂಬ ಯಕ್ಷನು ವಿಶ್ವಃ=ವಿಶ್ವ ಎಂಬ ರಾಕ್ಷಸನು ಐರಾವತಃ=ಐರಾವತ ಎಂಬ ನಾಗನು ಅಮೀ=ಇವರು ತಪಸ್ಯಾಖ್ಯಂ=ಫಾಲ್ಗುಣ ಮಾಸವನ್ನು ನಯಂತಿ=ನಡೆಸುವರು. ಹಾಗು ತನ್ನಿಯಾಮಕವಾದ ಭಗವಂತನ ರೂಪವನ್ನು ಉಪಾಸಿಸುವರು.

*ಮಾರ್ಗಶೀರ್ಷಮಾಸಪ್ರವರ್ತಕರು*

**ಅಥಾಂಶುಃ ಕಶ್ಯಪಸ್ತಾರ್ಕ್ಷ್ಯ ಋತಸೇನಸ್ತಥೋರ್ವಶೀ ।**
**ವಿದ್ಯುಚ್ಛತ್ರುರ್ಮಹಾಶಂಖಃ ಸಹೋಮಾಸಂ ನಯಂತ್ಯಮೀ ॥ ೧೫ ॥**

ಅಂಶುಃ=ಅಂಶುನಾಮಕನಾದ ಸೂರ್ಯನು ಕಶ್ಯಪಃ=ಕಶ್ಯಪ ಋಷಿಯು ತಾರ್ಕ್ಷ್ಯಃ= ತಾರ್ಕ್ಷ್ಯನಾಮಕ ಯಕ್ಷನು ಋತಸೇನಃ=ಋತಸೇನ ಎಂಬ ಗಂಧರ್ವನು ಊರ್ವಶೀ= ಊರ್ವಶಿ ಎಂಬ ಅಪ್ಸರಾಸ್ತ್ರೀಯು ವಿದ್ಯುಚ್ಛತ್ರುಃ=ವಿದ್ಯುಚ್ಛತ್ರು ಎಂಬ ರಾಕ್ಷಸನು ಮಹಾಶಂಖಃ=ಮಹಾಶಂಖ ಎಂಬ ನಾಗನು ಸಹೋಮಾಸಂ=ಮಾರ್ಗಶೀರ್ಷಮಾಸವನ್ನು ನಯಂತಿ=ನಡೆಸುವರು.

*ಪುಷ್ಯಮಾಸಪ್ರವರ್ತಕರು*

**ಭಗಃ ಸ್ಫೂರ್ಜೋಽರಿಷ್ಟನೇಮಿರೂರ್ಣ ಆಯುಶ್ಚ ಪಂಚಮಃ ।**
**ಕರ್ಕೋಟಕಃ ಪೂರ್ವಚಿತ್ತಿಃ ಸಹಸ್ಯಾಖ್ಯಂ ನಯಂತ್ಯಮೀ ॥ ೧೬ ॥**

ಭಗಃ=ಭಗನಾಮಕ ಸೂರ್ಯನು ಸ್ಫೂರ್ಜಃ=ಸ್ಫೂರ್ಜ ಎಂಬ ರಾಕ್ಷಸನು ಅರಿಷ್ಟನೇಮಿಃ= ಅರಿಷ್ಟನೇಮಿ ಎಂಬ ಋಷಿಃ=ಋಷಿಯು ಊರ್ಣಃ=ಊರ್ಣನಾಮಕ ಗಂಧರ್ವನು ಆಯುಃ=ಆಯು ಎಂಬ ಯಕ್ಷನು ಕರ್ಕೋಟಕಃ=ಕರ್ಕೋಟಕ ಎಂಬ ನಾಗನು ಪೂರ್ವಚಿತ್ತಿಃ=ಪೂರ್ವಚಿತ್ತಿ ಎಂಬ ಅಪ್ಸರಾಸ್ತ್ರೀಯು ಅಮೀ=ಇವರು ಸಹಸ್ಯಾಖ್ಯಂ= ಪುಷ್ಯಮಾಸವನ್ನು ನಯಂತಿ=ನಡೆಸುವರು.

*ಆಶ್ವೀನಮಾಸಪ್ರವರ್ತಕರು*

**ತ್ವಷ್ಟಾ ಋಚೀಕತನಯಃ ಕಂಬಲಶ್ಚ ತಿಲೋತ್ತಮಾ ।**
**ಬ್ರಹ್ಮರಾತೋಽಥಶತಜಿದ್ ಧೃತರಾಷ್ಟ್ರ ಇಷಂಭರಾಃ ॥ ೧೭ ॥**

ತ್ವಷ್ಟಾ=ತ್ವಷ್ಟೃ ಎಂಬ ಸೂರ್ಯನು ಋಚೀಕತನಯಃ=ಜಮದಗ್ನಿ ಋಷಿಯು ಕಂಬಲಃ=ಕಂಬಲನಾಮಕ ನಾಗನು ತಿಲೋತ್ತಮಾ=ತಿಲೋತ್ತಮೆ ಎಂಬ ಅಪ್ಸರಾಸ್ತ್ರೀಯು ಬ್ರಹ್ಮರಾತಃ=ಬ್ರಹ್ಮರಾತ ಎಂಬ ಅಸುರನು ಶತಜಿತ್=ಶತಜಿನ್ನಾಮಕಯಕ್ಷನು ಧೃತರಾಷ್ಟ್ರಃ= ಧೃತರಾಷ್ಟ್ರ ಎಂಬ ಗಂಧರ್ವನು ಅಮೀ=ಇವರು ಇಷಂಭರಾಃ ನಯಂತಿ= ಆಶ್ವೀನಮಾಸವನ್ನು ನಡೆಸುವರು ಹಾಗೂ ತನ್ನಿಯಾಮಕನಾದ ಭಗವಂತನನ್ನು ಉಪಾಸಿಸುತ್ತಾರೆ.

*ಕಾರ್ತಿಕಮಾಸಪ್ರವರ್ತಕರು*

**ವಿಷ್ಣುರಶ್ವತರೋ ರಂಭಾ ಸೂರ್ಯವರ್ಚೋಽಶ್ವಸತ್ಯಕೌ ।**
**ವಿಶ್ವಾಮಿತ್ರಮುಖಾ ಏತೇ ಊರ್ಜಮಾಸಂ ನಯಂತ್ಯಮೀ ॥ ೧೮ ॥**

ವಿಷ್ಣುಃ=ವಿಷ್ಣು ಎಂಬ ಸೂರ್ಯನು ಅಶ್ವತರಃ=ಅಶ್ವತರ ಎಂಬ ನಾಗನು ರಂಭಾ= ಅಮ್ಲೋಚಾ ಅಥವಾ ವಿಶ್ವಾಚೀ ಎಂಬ ಅಪ್ಸರೆಯು ಸೂರ್ಯವರ್ಚಃ=ಸೂರ್ಯವರ್ಚ ಎಂಬ ಗಂಧರ್ವನು ಅಶ್ವಸತ್ಯಕಃ=ಅಶ್ವಸತ್ಯಕ ಎಂಬ ತಕ್ಷಕನು ವಿಶ್ವಾಮಿತ್ರಃ=ವಿಶ್ವಾಮಿತ್ರ ಎಂಬ ಋಷಿಯು ಏತೇ=ಇವರು ಊರ್ಜಮಾಸಂ ನಯಂತಿ=ಕಾರ್ತಿಕಮಾಸವನ್ನು ನಡೆಸುವರು.

**ಏತಾ ಭಗವತೋ (ವಿಪ್ರ ಸಮಾಖ್ಯಾತಾ) ವಿಷ್ಣೋರಾದಿತ್ಯಸ್ಯ ವಿಭೂತಯಃ ।**
**ಸ್ಮರತಾಂ ಸಂಧ್ಯಯೋರ್ನೃಣಾಂ ಹರತ್ಯಂಹೋ ದಿನೇ ದಿನೇ ॥ ೧೯ ॥**

ಏತಾಃ=ಇವರೆಲ್ಲರೂ ಭಗವತಃ=ಐಶ್ವರ್ಯಶಾಲಿಯಾದ ಆದಿತ್ಯಸ್ಯ=ಸೂರ್ಯಾಂತ-ರ್ಗತನಾದ ವಿಷ್ಣೋಃ=ಶ್ರೀಹರಿಯ ವಿಭೂತಯಃ=ಸನ್ನಿಧಾನ ಪಾತ್ರರು ದಿನೇ ದಿನೇ=ಪ್ರತಿದಿವಸವೂ ಸಂಧ್ಯಯೋಃ=ಎರಡೂ ಸಂಧಿಕಾಲದಲ್ಲಿ ಸ್ಮರತಾಂ=ಸ್ಮರಣ ಮಾಡುವ ನೃಣಾಂ=ಜನರ ಅಂಹಃ=ಪಾಪಗಳನ್ನು ಹರಂತಿ=ಕಳೆಯುವರು.

**ದ್ವಾದಶಸ್ವಪಿ ಮಾಸೇಷು ದೇವೋಽಸೌ ಷಡ್ಭಿರಸ್ಯ ವೈ ।**
**ಚರನ್ ಸಮಂತಾತ್ ತನುತೇ ಪರತ್ರೇಹ ಚ ಸನ್ಮತಿಮ್ ॥ ೨೦ ॥**

ಅಸೌ ದೇವಃ=ಈ ಪರಮಾತ್ಮನು ದ್ವಾದಶಸು ಮಾಸೇಷು=ಹನ್ನೆರಡು ತಿಂಗಳಲ್ಲಿ ಷಡ್ಭಿಃ=ತನ್ನನ್ನು ಬಿಟ್ಟು ಉಳಿದ ಆರು ಜನರಿಂದ ಸೇರಿಕೊಂಡು(ಅಥವಾ ಷಡ್ಭಿಃ=ಆರು ಋತುಗಳಿಂದ)ಸಮಂತಾತ್=ಸುತ್ತಲೂ ಸಂಚರನ್=ಸಂಚರಿಸುತ್ತ ಅಸ್ಯ=ಭಜಕನಿಗೆ ಪರತ್ರ=ಪರಲೋಕದಲ್ಲಿ ಇಹ=ಈ ಲೋಕದಲ್ಲಿಯೂ ಸನ್ಮತಿಂ ತನುತೇ=ಸದ್ಬುದ್ಧಿಯನ್ನು ಕೊಡುವನು.

*ಋಷಿಮೊದಲಾದವರು ಮಾಡುವಕೃತ್ಯವನ್ನು ತಿಳಿಸುವರು -*

**ಸಾಮರ್ಗ್ಯಜುಭಿಸ್ತಲ್ಲಿಂಗ್ಯೈಃ ಋಷಯಸಂಸ್ತುವಂತ್ಯಮುಮ್ ।**
**ಗಂಧರ್ವಾಸ್ಸಂಪ್ರಗಾಯಂತಿ ನೃತ್ಯಂತ್ಯಪ್ಸರಸೋಽಗ್ರತಃ ॥ ೨೧ ॥**

ಸಾಮ-ಋಗ್-ಯಜುಭಿಃ ತಲ್ಲಿಂಗ್ಯೈಃ=ಸಾಮವೇದ, ಋಗ್ವೇದ, ಯಜುರ್ವೇದದಲ್ಲಿ ಪ್ರತಿಪಾದಿತವಾದ ಅವರ ಲಕ್ಷಣಗಳಿಂದ ಅಮುಂ=ಸೂರ್ಯನನ್ನು ಸೂರ್ಯಾಂತರ್ಯಾಮಿಯಾದ ಭಗವಂತನನ್ನು ಋಷಯಃ=ಜ್ಞಾನಿಗಳು ಸ್ತುವಂತಿ=ಸ್ತುತಿಸುವರು ಅಗ್ರತಃ=ಎದುರಿಗೆ ಗಂಧರ್ವಾಃ=ಗಂಧರ್ವರು ಪ್ರಗಾಯಂತಿ=ಗಾನ ಮಾಡುವರು ಅಪ್ಸರಸಃ=ಅಪ್ಸರಾಸ್ತ್ರೀಯರು ನೃತ್ಯಂತಿ=ನರ್ತನ ಮಾಡುವರು.

**ಉನ್ನಹ್ಯಂತಿ ರಥಂ ನಾಗಾ ಗ್ರಾಮಣ್ಯೋ ರಥಯೋಜಕಾಃ ।**
**ಚೋದಯಂತಿ ರಥಂ ಪೃಷ್ಠೇ ನೈಋತಾ ಬಲಶಾಲಿನಃ ॥ ೨೨ ॥**

ನಾಗಾಃ=ನಾಗಗಳು ರಥಂ=ಈ ಸೂರ್ಯನ ರಥವನ್ನು ಉನ್ನಹ್ಯಂತಿ=ತಮ್ಮ ತಲೆಯ ಮೇಲೆ ಹೊರುವವು. ಗ್ರಾಮಣ್ಯಃ=ಯಕ್ಷರು ರಥಯೋಜಕಾಃ=ರಥವನ್ನು ಜೋಡಿಸುವರು ಬಲಶಾಲಿನಃ=ಬಲಿಷ್ಠರಾದ ನೈಋತಾಃ=ಹೇತಿ ಮೊದಲಾದ ರಾಕ್ಷಸರು ಪೃಷ್ಠೇ=ಹಿಂಬದಿಯಲ್ಲಿ ರಥಂ ಚೋದಯಂತಿ=ರಥವನ್ನು ತಳ್ಳುವರು ಎಂಬ ಭಾವ.

*ಗಣದಲ್ಲಿ ಹೇಳದಿರುವ ಋಷಿಗಳನ್ನು ಹೇಳುವರು.*

**ವಾಲಖಿಲ್ಯಾಃ ಸಹಸ್ರಾಣಿ ಷಷ್ಟಿರ್ಬ್ರಹ್ಮರ್ಷಯೋಽಮಲಾಃ ।**
**ಪುರತೋಽಭಿಮುಖಂ ಯಾಂತಿ ಸ್ತುವಂತಃ ಸ್ತುತಿಭಿರ್ವಿಭುಮ್ ॥ ೨೩ ॥**

ಅಮಲಾಃ=ದೋಷರಹಿತರಾದ ಷಷ್ಟಿಸಹಸ್ರಾಣಿ=ಅರವತ್ತು ಸಾವಿರ ಬ್ರಹ್ಮಋಷಯಃ=ಬ್ರಹ್ಮಜ್ಞಾನಿಗಳಾದ ವಾಲಖಿಲ್ಯಾಃ=ಅತಿಶಯಸೂಕ್ಷ್ಮರಾದ ವಾಲಖಿಲ್ಯಋಷಿಗಳು ಪುರತಃ=ಮುಂದೆ ಸ್ತುತಿಭಿಃ=ಸ್ತೋತ್ರಗಳಿಂದ ವಿಭುಂ=ಸೂರ್ಯನನ್ನು ಅಂತರ್ಗತನಾದ ಹರಿಯನ್ನು ಸ್ತುವಂತಃ=ಸ್ತೋತ್ರ ಮಾಡುತ್ತ ಅಭಿಮುಖಂ ಯಾಂತಿ=ಮುಖವನ್ನು ನೋಡುತ್ತ ಹೋಗುವರು.

**ವಿಶೇಷ-** ವಾಲ ಬಾಲದಂತೆ ಖಿಲ್ಯ-ಅಣು ಆದ್ದರಿಂದ ವಾಲಖಿಲ್ಯ ಎಂಬ ಹೆಸರು ಬಂದಿದೆ.

**ಏವಂ ಹ್ಯನಾದಿನಿಧನೋ ಭಗವಾನ್ ಹರಿರೀಶ್ವರಃ ।**
**ಕಲ್ಪೇ ಕಲ್ಪೇ ಸ್ವಮಾತ್ಮಾನಂ ವ್ಯೂಹ್ಯ ಲೋಕಾನ್ ತಪತ್ಯಜಃ ॥ ೨೪ ॥**

ಏವಂ=ಈ ರೀತಿಯಾಗಿ ಅನಾದಿನಿಧನಃ=ಉತ್ಪತ್ತಿನಾಶರಹಿತನಾದ ಭಗವಾನ್=ಷಡ್ಗುಣ್ಯೈಶ್ವರ್ಯಸಂಪನ್ನನಾದ ಈಶ್ವರಃ=ಒಡೆಯನಾದ ಹರಿಃ=ಶ್ರೀಮನ್ನಾರಾಯಣನು ಉಪಚಾರತಃ=ಔಪಚಾರಿಕವಾಗಿ ಸೂರ್ಯನು, ಮುಖ್ಯವಾಗಿ ಅಂತರ್ಗತನಾದ ನಿಯಾಮಕನಾದ ನಾರಾಯಣನು ಕಲ್ಪೇ ಕಲ್ಪೇ=ಪ್ರತಿಯೊಂದು ಕಲ್ಪದಲ್ಲಿಯೂ ಆತ್ಮಾನಂ=ತನ್ನನ್ನು ಸ್ವಯಮೇವ=ತಾನೇ ವ್ಯೂಹ್ಯ=ಮತ್ಸ್ಯಾದಿ ಅವತಾರಗಳಿಂದ ಧಾತ್ರಾದಿಗಳಾಗಿಯೂ ಲೋಕಾನ್=ಜಗತ್ತನ್ನು ತಪತಿ=ಪ್ರಕಾಶಗೊಳಿಸುವನು ನಯತಿ=ಪ್ರೇರಿಸುವನು

**ವಿಶೇಷ-** ಮೊದಲಿಗೆ ೧೦ನೇ ಶ್ಲೋಕದಲ್ಲಿಯೇ 'ವಸಿಷ್ಠೋ ವರುಣೋ ರಂಭಾ' ಎಂದು ರಂಭಾಳನ್ನು ಹೇಳಿಯಾಗಿದೆ. ಮತ್ತೆ ೧೮ನೇ ಶ್ಲೋಕದಲ್ಲಿ ರಂಭಾ ಎಂಬ ಪದವಿರುವ ಕಾರಣ ಅಲ್ಲಿ ರಂಭಾ ಎಂಬ ಪದದ ಸ್ಥಾನದಲ್ಲಿ ಭಾಗವತದಲ್ಲಿ ಹೇಳದಿರುವ ಸಹಜನ್ಯಾ-ವಿಶ್ವಾಚಿ-ಅಮ್ಲೋಚಾ ಎಂಬ ಪದವನ್ನು ಊಹೆಮಾಡಬೇಕು. 'ಅಗ್ನಯೇ ಚರುಂ ನಿರ್ವಪಾಮಿ' ಎಂಬಲ್ಲಿ ಹಾಗೆ ಕಂಡಿದೆ.

'ಏತೇ ಅತ್ರ ಉಕ್ತಾ ಅಮೀ ಪ್ರಾಗಭಿಹಿತಾಶ್ಚ ಇಮಂ ಮಾಸಂ ತಥಾ ಅನ್ಯಾಶ್ಚ ನಯಂತಿ' ಎಂದು ಉಪಸಂಹಾರ ಮಾಡುತ್ತಿರುವದರಿಂದ ಏತೇ ಎಂಬುದಾಗಲಿ ಅಮೀ ಎಂಬುದಾಗಲಿ ಹೆಚ್ಚಾಗುವುದಿಲ್ಲ.

ಕೂರ್ಮಪುರಾಣದ ಪ್ರಕಾರ ಊಹೆ ಮಾಡಲಾಗಿದೆ. ಕೂರ್ಮಪುರಾಣದ ಭುವನಕೋಶದಲ್ಲಿ ಮೂವತ್ತೊಂಭತ್ತನೇಯ ಅಧ್ಯಾಯದಲ್ಲಿ ಹೀಗಿದೆ

**ಸರಥೋಽಧಿಷ್ಠಿತೋ ದೇವೈರಾದಿತ್ಯೈರ್ವಸುಭಿಸ್ತಥಾ ।**
**ಗಂಧರ್ವೈರಪ್ಸರೋಭಿಶ್ಚ ಗ್ರಾಮಣೀ ಸರ್ಪರಾಕ್ಷಸೈಃ ॥**
**ಧಾತಾಽರ್ಯಮಾ ಚ ಮಿತ್ರಶ್ಚ ವರುಣಶ್ಶಕ್ರ ಏವ ಚ ।**
**ವಿವಸ್ವಾನಥ ಪೂಷಾ ಚ ಪರ್ಜನ್ಯಶ್ಚಾಂಶುರೇವ ಚ ॥**
**ಭಗಸ್ತ್ವ ಷ್ಟಾಽಥ ವಿಷ್ಣುಶ್ಚ ದ್ವಾದಶೈತೇ ದಿವಾಕರಾಃ ।**

ಅಭ್ಯರ್ಚಯಂತಿ ಯೇ ಭಾನುಂ ವಸಂತಾದಿಷು ಚಕ್ರಮಾತ್ ॥
ಪುಲಸ್ತ್ಯಃ ಪುಲಹಶ್ಚಾತ್ರಿರ್ವಸಿಷ್ಠಶ್ಚಾಂಗಿರಾ ಭೃಗುಃ ।
ಭರದ್ವಾಜೋ ಗೌತಮಶ್ಚ ಕಶ್ಯಪಃ ಕ್ರತುರೇವ ಚ ॥
ಜಮದಗ್ನಿಃ ಕೌಶಿಕಶ್ಚ ಮುನಯೋ ಬ್ರಹ್ಮವಾದಿನಃ ।
ಸ್ತುವಂತಿ ದೇವಂ ವಿವಿಧೈಶ್ಛಂದೋಭಿಸ್ತೇ ಯಥಾಕ್ರಮಮ್ ॥
ರಥಕೃಚ್ಚ ರಥೌಜಾಶ್ಚ ರಥಚಿತ್ರಸ್ವಬಾಹುಕಃ ।
ರಥಸ್ವನೋಽಥ ವರುಣಃ ಸುಷೇಣಃ ಶ್ಯೇನಜಿತ್ ತಥಾ ॥
ತಾರ್ಕ್ಷ್ಯಶ್ಚಾರಿಷ್ಟನೇಮಿಶ್ಚ ರಥಜಿತ್ಸತ್ಯಜಿತ್ತಥಾ ।
ಗ್ರಾಮಣ್ಯೋ ದೇವದೇವಸ್ಯ ಕುರ್ವತೇ ಭಾರಸಂಗ್ರಹಮ್ ॥
ಅಥ ಹೇತಿ ಪ್ರಹೇತಿಶ್ಚ ಪೌರುಷೇಯೋ ವಧಸ್ತಥಾ ।
ಸರ್ಪೋ ವ್ಯಾಘ್ರಸ್ತಥಾಽಧಶ್ಚ ವಾತೋ ವಿದ್ಯುದ್ದಿವಾಕರಃ ॥
ಬ್ರಹ್ಮಾಪೇತಶ್ಚ ವಿಪ್ರೇಂದ್ರೋ ಯಜ್ಞೋಪೇತಸ್ತಥೈವ ಚ ।
ರಾಕ್ಷಸಪ್ರವರಾ ಹ್ಯೇತೇ ಪ್ರಯಾಂತಿ ಪುರತಃ ಕ್ರಮಾತ್ ॥
ವಾಸುಕಿಃ ಕಚ್ಛನೀರಶ್ಚ ತಕ್ಷಕಃ ಸರ್ಪಪುಂಗವಃ ।
ಏಲಾಪತ್ರಃ ಶಂಖಪಾಲಸ್ತಥೈರಾವತಸಂಜ್ಞಿತಃ ॥
ಧನಂಜಯೋ ಮಹಾಯಜ್ಞಸ್ತಥಾ ಕರ್ಕೋಟಕೋ ದ್ವಿಜಃ ।
ಕಂಬಲಾಽಶ್ವತರಾಶ್ಚೈವ ವಹಂತ್ಯೇನಂ ಯಥಾಕ್ರಮಮ್ ॥
ತುಂಬುರೋ ನಾರದೋ ಹಾಹಾ ಹೂಹೂ ವಿಶ್ವಾವಸುಸ್ತಥಾ ।
ಉಪಸೇನೇವ ಸುರುಚಿರ್ವಾವಸುರಥಾಪರಃ ॥
ಚಿತ್ರಶೇನಸ್ತಥಾವರ್ಣಾ ಧೃತರಾಷ್ಟ್ರೋ ದ್ವಿಜೋತ್ತಮಃ ।
ಸೂರ್ಯವರ್ಚಾ ದ್ವಾದಶೈತೇ ಗಂಧರ್ವಾ ಗಾಯತಾಂ ವರಾಃ ॥
ಕೃತಸ್ತನಾಪ್ಸರೋ ವರ್ಯಾ ತಥಾನ್ಯಾಪುಂಜಕಸ್ಥಲೀ ।
ಮೇನಕಾ ಸಹಜುನ್ಯಾಚ ಪ್ರಮ್ಲೋಚಾಥ ದ್ವಿಜೋತ್ತಮಾಃ ॥
ಅಮ್ಲೋಚಾ ಚ ಘೃತಾಚೀ ಚ ವಿಶ್ವಾಚೀ ಚೋರ್ವಶೀ ತಥಾ ।
ಅನ್ಯಾಚ ಪೂರ್ವಚಿತ್ತಿಸ್ಸ್ಯಾತ್ ತಥಾನ್ಯಾ ಚ ತಿಲೋತ್ತಮಾ ॥
ರಂಭಾಚೇತಿ ದ್ವಿಜಶ್ರೇಷ್ಠ ತಥೈವಾಪ್ಸರಸಃ ಸ್ಮೃತಾಃ ।
ತಾಂಡವೈರ್ವಿವಿಧೈರೇನಂ ವಸಂತಾದಿಷು ವೈ ಕ್ರಮಾತ್ ॥
ತೋಷಯಂತಿ ಮಹಾದೇವಂ ಭಾನುಮಾತ್ಮಾನಮವ್ಯಯಮ್ ।
ಸೂರ್ಯಮಾಪ್ಯಾಯಯಂತ್ಯೇ ತೇ ತೇಜಸಾ ತೇಜಸಾಂನಿಧಿಮ್ ॥
ಪ್ರಥಿತೈಃ ಸ್ವವಚೋಭಿಶ್ಚ ಸ್ತುವಂತಿ ಮುನಯೋ ರವಿಮ್ ।
ಗಂಧರ್ವಾಪ್ಸರಸಶ್ಚೈನಂ ನೃತ್ಯಗೇಯೈರುಪಾಸತೇ ॥

ಗ್ರಾಮಣೀರ್ಯಕ್ಷಭೂತಾನಿ ಕುರ್ವತೇ ಭಿಕ್ಷುಸಂಗ್ರಹಮ್ ।
ಸರ್ಪಾ ವಹಂತಿ ದೇವೇಶಂ ಯಾತುಧಾನಾ ಪ್ರಯಾಂತಿ ಚ ।।
ವರುಣೋ ಮಾಘಮಾಸೇ ತು ಸೂರ್ಯಃ ಪೂಷಾ ತು ಫಾಲ್ಗುಣೇ ।
ಚೈತ್ರೇ ಮಾಸೇ ಭವೇದಂಶುರ್ದಾತೋ ವೈಶಾಖತಾಪಿನಃ ।।
ಜ್ಯೇಷ್ಠಮಾಸೇ ಭವೇದಿಂದ್ರ ಆಷಾಢೇ ಸವಿತಾ ರವಿಃ ।
ವಿವಸ್ವಾನ್ ಶ್ರಾವಣೇ ಮಾಸಿ ಪ್ರೋಷ್ಠಪದ್ಯಾಂ ಭಗಃ ಸ್ಮೃತಃ ।।
ಪರ್ಜನ್ಯ ಆಶ್ವಯುಜಶ್ಚ ಕಾರ್ತಿಕೇ ಮಾಸಿ ಭಾಸ್ಕರಃ ।
ಮಾರ್ಗಶೀರ್ಷೇ ಭವೇನ್ಮಿತ್ರಃ ಪೌಷ್ಯೇ ವಿಷ್ಣುಸನಾತನಃ ।।

ಎಂದಿದೆ. ಕೂರ್ಮಪುರಾಣಕ್ಕೂ ಭಾಗವತಕ್ಕೂ ಕೆಲವು ಕಡೆಯಲ್ಲಿ ಹೆಸರುಗಳಲ್ಲಿ ವ್ಯತ್ಯಾಸ ಕಂಡುಬರುವುದು. ಅದನ್ನು ಅನೇಕ ನಾಮಗಳಿಂದಾಗಲಿ ಕಲ್ಪಭೇದದಿಂದಾಗಲಿ ವ್ಯವಸ್ಥೆ ಮಾಡಬೇಕು. ಕೂರ್ಮಪುರಾಣದಲ್ಲಿ ಪುಷ್ಯಮಾಸದಲ್ಲಿ ವಿಷ್ಣುವನ್ನು ಹೇಳಿ ಭಾಗವತದಲ್ಲಿ ಕಾರ್ತಿಕ ಮಾಸಕ್ಕೆ ವಿಷ್ಣು ಎಂದು ಹೇಳಿದ್ದು ವಿಷ್ಣುವಿಗೆ ಸರ್ವತ್ರ ಸಾಮ್ಯವಿದೆ ಎಂದು ತಿಳಿಸಲು ಎಂದು ತಿಳಿಯಬೇಕು. ಕಿರಣವಿಭಾಗ ಕರ್ಮವಿಭಾಗವನ್ನು ಕೂರ್ಮಪುರಾಣದಿಂದಲೇ ತಿಳಿಯಬೇಕು. ವಿಸ್ತಾರಭಯದಿಂದ ವಿರಮಿಸುತ್ತೇವೆ ಎನ್ನುತ್ತಾರೆ ಶ್ರೀಸತ್ಯಧರ್ಮತೀರ್ಥರು.

ಇನ್ನು ಇಪ್ಪತ್ತೂರನೇಯ ಶ್ಲೋಕದಲ್ಲಿ ವಾಲಖಿಲ್ಯರ ವಿಚಾರ ಮೂಡಿಬಂದಿದೆ. ಅವರ ವಿವರನ್ನು ವಿಷ್ಣುಪುರಾಣದ ಎರಡನೇಯ ಅಂಶ ಹತ್ತನೇಯ ಅಧ್ಯಾಯದಲ್ಲಿ ಪರಾಶರರು ಹೀಗೆ ಹೇಳುವರು -

ಅಶೀತಿ ಮಂಡಲಶತಂ ಕಾಷ್ಠಯೋರ್ಮಂಡಲದ್ವಯೋಃ ।
ಆರೋಹಣಾವರೋಹಾಭ್ಯಾಂ ಭಾನೋರಬ್ದೇನ ಯಾ ಗತಿಃ ।।
ಸರಥೋಽಧಿಷ್ಠಿತೋ ದೈವೈರಾದಿತ್ಯೈರ್ಷಿಭಿಸ್ತಥಾ ।
ಗಂಧರ್ವೈರಪ್ಸರೋಭಿಶ್ಚ ಗ್ರಾಮಣಿ ಸರ್ಪರಾಕ್ಷಸೈಃ ।।
ಧಾತಾ ಕೃತಸ್ಥಲೀ ಚೈವ ಪುಲಸ್ತ್ಯೋ ವಾಸುಕಿಸ್ತಥಾ ।
ರಥಕೃದ್ ಗ್ರಾಮಣೀ ಹ್ಯೇತೇ ತುಂಬುರುಶ್ಚೈವ ಸಪ್ತಮಃ ।।
ಏತೇ ವಸಂತಿ ಚೈತ್ರೇ ತು ಮಧುಮಾಸೇ ಸದೈವ ಹಿ ।
ಮೈತ್ರೇಯಃ ಸ್ಯಂದನೇ ಭಾನೋಃ ಸಪ್ತಮಾಸಾಧಿಕಾರಿಣಃ ।।
ಅರ್ಯಮಾ ಪುಲಹಶ್ಚೈವ ರಥೌಜಾ ಪುಂಜಕಸ್ಥಲೀ ।
ಪ್ರಹೇತಿಃ ಕಚ್ಛನೀರಶ್ಚ ನಾರದಶ್ಚ ರಥೇ ರವೇಃ ।।

ಮಾಧವೇ ಚ ವಸಂತ್ಯೇತೇ ಶುಚಿಸಂಜ್ಞೇ ನಿಬೋಧ ಮೇ ।
ಮಿತ್ರೋಽತ್ರಿಸ್ತಕ್ಷಕೋ ದಕ್ಷಃ ಪೌರುಷೇಯಶ್ಚ ಮೇನಕಾ ॥
ಹಾಹಾ ರಥಸ್ವನಶ್ಚೈವ ಮೈತ್ರೇಯ ಏತೇ ವಸಂತಿ ಹಿ ।
ವರುಣೋ ವಸಿಷ್ಠೋ ರಂಭಾ ಚ ಸಹಜನ್ಯಾಹೂಹೂರ್ವಧಃ ॥
ರಥಚಿತ್ರಸ್ತಥಾ ಚಕ್ರೇ ವಸಂತ್ಯಾಷಾಢಸಂಜ್ಞಕೇ ।
ಇಂದ್ರೋ ವಿಶ್ವಾವಸುಶ್ರೋತಾ ಏಲಾಪತ್ರಸ್ತಥಾಽಂಗಿರಾಃ ॥
ಪ್ರಮ್ಲೋಚಾ ಚ ನಭಸ್ಯಾಂತೇ ಸರ್ಪಶ್ಚಕ್ರೇ ವಸಂತಿ ಹಿ ।
ವಿವಸ್ವಾನುಗ್ರಸೇನಶ್ಚ ಭೃಗುರಾಪೂರಣಸ್ತಥಾ ॥
ಅನುಮ್ಲೋಚಾ ಶಂಖಪಾಲೋ ವ್ಯಾಘ್ರಾ ಭಾದ್ರಪದೇ ಯಥಾ ।
ಪೂಷಾ ಚ ಸುರುಚಿರ್ವಾತೋ ಗೋತಮೋಽಥ ಧನಂಜಯಃ ॥
ಸುಷೇಣೋಽನ್ಯೋ ಘೃತಾಚೀ ಚ ವಸಂತ್ಯಾಶ್ವಯುಜೇ ರವೌ ।
ವಿಶ್ವಾವಸುರ್ಭರದ್ವಾಜಾ ಪರ್ಜನ್ಯೈರಾವೃತೌ ತಥಾ ॥
ವಿಶ್ವಾಮಿತ್ರಸ್ತೂರ್ಯವರ್ಚಃ ಕಾರ್ತಿಕೇ ಚಾಧಿಕಾರಿಣಃ ।
ಅಂಶುಕಶ್ಯಪತಾರ್ಕ್ಷ್ಯಸ್ತು ಮಹಾಪದ್ಮಸ್ತಥೋರ್ವಶೀ ॥
ಚಿತ್ರಸೇನಸ್ತಥಾ ವಿದ್ಯುನ್ಮಾರ್ಗಶೀರ್ಷಾಧಿಕಾರಿಣಃ ।
ಋತುರ್ಭರ್ಗಸ್ತಥೋರ್ಣಾರ್ಕ ಸ್ಫೂರ್ಜಃ ಕರ್ಕೋಟಕಸ್ತಥಾ ॥
ಅರಿಷ್ಟನೇಮಿಶ್ಚೈವಾಸ್ಯಾ ಪೂರ್ವಚಿತ್ತಿರ್ವರಾಪ್ಸರಾಃ ।
ಪೌಷಮಾಸೇ ವಸಂತ್ಯೇತೇ ಸಪ್ತಭಾಸ್ಕರಮಂಡಲೇ ॥
ಲೋಕಪ್ರಕಾಶನಾರ್ಥಾಯ ವಿಪ್ರವರ್ಯಾಧಿಕಾರಿಣಃ ।
ತ್ವಷ್ಟಾ ಚ ಜಮದಗ್ನಿಶ್ಚ ಕಂಬಲೋಽಥ ತಿಲೋತ್ತಮಾ ॥
ಬ್ರಹ್ಮರಾತೋಽಥ ಶತಜಿತ್ ಧೃತರಾಷ್ಟ್ರೋಽಥ ಸಪ್ತಮಃ ।
ಮಾಘಮಾಸೇ ವಸಂತ್ಯೇತೇ ಸಪ್ತಮೈತ್ರೇಯಮಂಡಲೇ ॥
ಶ್ರೂಯತಾಂ ಚಾಪರೇ ಸೂರ್ಯೇ ಫಾಲ್ಗುನೇ ಚ ವಸಂತಿ ಯೇ ।
ವಿಷ್ಣುರಶ್ವತರೋ ರಂಭಾ ಸೂರ್ಯವರ್ಚಾಥ ಸತ್ಯಜಿತ್ ॥
ವಿಶ್ವಾಮಿತ್ರಸ್ತಥಾರಕ್ಷೋ ಯಜ್ಞೋಪೇತೋ ಮಹಾಮುನೇ ।
ಮಾಸೇಷ್ವೇತೇಷು ಮೈತ್ರೇಯ ವಸಂತ್ಯೇತೇ ಹಿ ಸಪ್ತಕಾಃ ॥
ಸವಿತುರ್ಮಂಡಲೇ ಬ್ರಹ್ಮನ್ ವಿಷ್ಣುಶಕ್ತ್ಯುಪಬೃಂಹಿತಾಃ ।
ಸ್ತುವಂತಿ ಮುನಯಃ ಸೂರ್ಯಂ ಗಂಧರ್ವೈರ್ಗೀಯತೇ ಪುನಃ ॥
ನೃತ್ಯಂತ್ಯಪ್ಸರಸಾ ಯಾಂತಿ ಸೂರ್ಯಸ್ಯಾನುನಿಶಾಚರಾಃ ।
ವಹಂತಿ ಪನ್ನಗಾ ಯಕ್ಷೈಃ ಕ್ರಿಯತೇ ಭೀಷುಸಂಗ್ರಹಃ ॥

**ವಾಲಖಿಲ್ಯಾಸ್ತಥೈವಾಮುಂ ಪರಿವಾರ್ಯ ಸಮಾಸತೇ ।**
**ಸೋಽಯಂ ಸಪ್ತಗಣೋ ಸೂರ್ಯಮಂಡಲೇ ಮುನಿಸತ್ತಮ ॥**

ಎಂದೂ ಹೇಳಿದೆ ಇಲ್ಲಿಯೂ ಕಲ್ಪಭೇದಾದಿಗಳನ್ನು ತಿಳಿಯಬೇಕು. ಕೂರ್ಮಪುರಾಣದಲ್ಲಿ ಇಡೀ ವರ್ಷದ ಸೂರ್ಯರು ಗಂಧರ್ವರು ಅಪ್ಸರೆಯರು ನಾಗಗಳು ಋಷಿಗಳು ಪಿತೃಗಳು ರಾಕ್ಷಸರನ್ನು ಏಕತ್ರ ಸಂಗ್ರಹಿಸಿ ಹೇಳಿರುವರು. ವಿಷ್ಣು ಪುರಾಣದಲ್ಲಿ ಒಂದು ತಿಂಗಳಿಗೆ ಬೇಕಾಗುವ ಏಳನ್ನು (ಪ್ರತ್ಯೇಕ ೧೨-೧೨) ಒಂದುಗೂಡಿಸಿ ಹೇಳಿರುವರು.

ಶ್ರೀವೇದವ್ಯಾಸದೇವರು ಸಮಗ್ರಗ್ರಂಥವನ್ನು ರಚಿಸಿ ಅಜ್ಞಾನಿಗಳಿಗೆ ಎಲ್ಲಿ ಎಲ್ಲಿ ಏನೇನು ಹೇಳಿದೆ ಎಂದು ಮನಸ್ಸಿಗೆ ವ್ಯಾಕುಲವಾಗಬಾರದೆಂಬ ಉದ್ದೇಶದಿಂದ ಸಂಕ್ಷೇಪವಾಗಿ ಭಾಗವಾತಾರ್ಥವನ್ನು ಸಂಗ್ರಹ ಮಾಡಿ ಪ್ರತಿಪಾದಿಸಿದ್ದಾರೆ.

**॥ ಇಲ್ಲಿಗೆ ಹನ್ನೊಂದನೇ ಅಧ್ಯಾಯವು ಸಮಾಪ್ತವಾಯಿತು ॥**



# ಅಥ ದ್ವಾದಶೋಽಧ್ಯಾಯಃ

**ಸಾರಾಂಶ**

ಹನ್ನೆರಡು ಸ್ಕಂಧದಲ್ಲಿ ಹೇಳಿದ ವಿಷಯಗಳನ್ನು ಸಂಕ್ಷಿಪ್ತವಾಗಿ ಈ ಅಧ್ಯಾಯದಲ್ಲಿ ತಿಳಿಸಲಾಗಿದೆ. ಪ್ರಥಮಸ್ಕಂಧದಲ್ಲಿ ಶ್ರೀಹರಿಯ ಅವತಾರಗಳನ್ನು ಹೇಳಿ ಮೊದಲಿಗೆ ಪ್ರಧಾನವಾದ ವಿರಾಟ್ ಸೃಷ್ಟಿಯನ್ನು ಹೇಳುತ್ತಾರೆ. ವಿದುರರು ತೀರ್ಥಯಾತ್ರೆಗೆ ಹೋಗುವಾಗ ದಾರಿಯಲ್ಲಿ ಉದ್ಧವರನ್ನು ಕಂಡದ್ದು. ನಂತರ ಉದ್ಧವರ ಮಾತಿನಂತೆ ಮೈತ್ರೇಯರ ಸಮಾಗಮ. ವಿದುರರಿಂದ ಪುರಾಣ ಸಂಹಿಂತೆಯ ಶ್ರವಣವಿಷಯಕ ಪ್ರಶ್ನೆ,ಅದಕ್ಕೆ ಮೈತ್ರೇಯರ ಸಮಾಧಾನಗಳು ಇಲ್ಲಿ ಸಂಕ್ಷಿಪ್ತವಾಗಿ ವರ್ಣಿತವಾಗಿವೆ.

ಶ್ರೀಹರಿಯ ನಾಭಿಯಿಂದ ಕಮಲದ ಉತ್ಪತ್ತಿ. ಸಮುದ್ರದಿಂದ ಭೂಮಿಯನ್ನು ಮೇಲೆ ತಂದದ್ದು, ಹಿರಣ್ಯಾಕ್ಷನ ವಧೆ. ದೇವತೆಗಳು ಪ್ರಾಣಿಗಳು ಅಸುರರ ಸೃಷ್ಟಿ ಹಾಗೂ ರುದ್ರಸೃಷ್ಟಿ ಸ್ವಾಯಂಭುವಮನುವಿನ ಸೃಷ್ಟಿ, ಕಪಿಲನಾಮಕ ಶ್ರೀಹರಿಯ ಅವತಾರವು. ಜ್ಞಾನಿಯಾದ ಕಪಿಲನಿಂದ ದೇವಹೂತಿಯೊಡನೆ ಸಂವಾದವು. ಮರೀಚೀ ಮೊದಲಾದ ಒಂಬತ್ತು ಜನ ಪ್ರಜಾಪತಿಗಳ ಸೃಷ್ಟಿ, ದಕ್ಷಯಜ್ಞದ ನಾಶ. ನಂತರ ಧ್ರುವನ ಚರಿತ್ರೆ, ಪೃಥು ಚಕ್ರವರ್ತಿಯ ಚರಿತ್ರೆ, ಪ್ರಾಚೀನಬರ್ಹಿ ಹಾಗು ನಾರದರಿಗೆ ನಡೆದ ಸಂವಾದ, ಪ್ರಿಯವ್ರತನ ಚರಿತ್ರೆ. ಋಷಭನಾಮಕ ಭಗವಂತನ ಚರಿತ್ರೆ, ಹಾಗೂ ಋಷಭನ ಮಗನಾದ ಭರತನೇ ಮೊದಲಾದ ಮಕ್ಕಳ ಕಥೆ. ಜಂಬೂ ಮೊದಲಾದ ವರ್ಷಗಳು ಹಾಗು ಭಾರತ ಮೊದಲಾದ ಖಂಡಗಳು, ಸಮುದ್ರಗಳು, ಗಿರಿಪರ್ವತಗಳು, ಗಂಗಾದಿನದಿಗಳು ಇವುಗಳ ವರ್ಣನೆ. ವೃತ್ರನ ಉತ್ಪತ್ತಿ ಹಾಗು ಮರಣವನ್ನು ಹೇಳಲಾಗಿದೆ. ಮಹಾತ್ಮನಾದ ದೈತ್ಯರಾಜನಾದ ಪ್ರಹ್ಲಾದನ ಚರಿತ್ರವು. ಗಜೇಂದ್ರಮೋಕ್ಷ, ಸ್ವಾಯಂಭುವಾದಿಗಳ ಚರಿತ್ರೆ, ಜಗದೊಡೆಯನಾದ ಶ್ರೀಹರಿಯ ಮನ್ವಂತರಗಳಲ್ಲಿ ಆಗುವ ಅವತಾರಗಳು, ಅಮೃತಮಥನ, ದೇವ-ದಾನವರ ಯುದ್ಧ.

ಇಕ್ಷ್ವಾಕು ವಂಶದ ಕಥೆ, ಆದೇ ವಂಶದಲ್ಲಿ ಮಹಾಮನಸ್ವಿಯಾದ ಸುದ್ಯುಮ್ನ ಹುಟ್ಟಿದ್ದು, ಆ ಸುದ್ಯುಮ್ನನೇ ಇಲಾ ಆದದ್ದು, ನಂತರ ಬುಧ ಹುಟ್ಟಿದ್ದು, ಚಂದ್ರ ಬೃಹಸ್ಪತಿಗಳ ಕಲಹರೂಪವಾದ ತಾರಾ ಕಥೆ, ಶರ್ಯಾತಿ ರಾಜನ ಮತ್ತು ಅವನ ಮಗಳಾದ ಸುಕನ್ಯೆಯ ಚರಿತ್ರೆ. ಮಾಂಧಾತಾ ಹಾಗು ಸಗರ ನಂತಹ ಅತಿರಥ ಮಹಾರಥರ ಕಥೆಗಳು, ಹಾಗು ಪಾಪನಾಶಕವಾದ ಆಶ್ಚರ್ಯಕರವಾದ ಶ್ರೀರಾಮಚಂದ್ರನ ಚರಿತ್ರೆ, ನಿಮಿರಾಜನ ದೇಹತ್ಯಾಗ, ಪರಶುರಾಮದೇವರು ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದ್ದು.

ಯಯಾತಿಯ ಹಿರಿಯ ಮಗನಾದ ಯದುರಾಜನ ವಂಶವರ್ಣನೆ. ವಸುದೇವನ ಪತ್ನಿಯಾದ ದೇವಕಿಯಲ್ಲಿ ಶ್ರೀಕೃಷ್ಣನ ಅವತಾರ. ಗೋಕುಲದಲ್ಲಿ ಶ್ರೀಕೃಷ್ಣನ ಬಾಲಲೀಲೆಗಳು.

ಪೂತನಾ-ಶಕಟಾಸುರ-ತೃಣಾವರ್ತ-ಬಕಾಸುರ-ವತ್ಸಾಸುರರ ಸಂಹಾರ. ಬಲರಾಮನಿಂದ ಸಹಿತವಾದ ಶ್ರೀಕೃಷ್ಣನಿಂದ ಧೇನುಕಾಸುರನ ಪ್ರಲಂಬಾಸುರನ ನಾಶ, ಕಾಡುಗಿಚ್ಚಿನಿಂದ ಗೋಪಾಲಕರ ರಕ್ಷಣೆ. ಕಾಲಿಯ ಸರ್ಪವನ್ನು ತುಳಿದುದು, ಅಜಗರದಿಂದ ನಂದಗೋಪನನ್ನು ಬಿಡಿಸಿದ್ದು, ಅನ್ನವನ್ನಿತ್ತ ಬ್ರಾಹ್ಮಣಪತ್ನಿಯರಿಗೆ ಅನುಗ್ರಹ ಮಾಡಿದ್ದು, ಗೋವರ್ಧನ ಪರ್ವತವನ್ನು ಎತ್ತಿ ಹಿಡಿದದ್ದು, ರಾತ್ರಿಕಾಲದಲ್ಲಿ ಸ್ತ್ರೀಯರೊಡನೆ ಕ್ರೀಡಿಸಿದ್ದು, ಕಂಸನಿಂದ ಕಳಿಸಲ್ಪಟ್ಟ ಅಕ್ರೂರನು ರಾಮಕೃಷ್ಣರನ್ನೂ ಕರೆಯಲು ಬಂದದ್ದು, ನಂತರ ರಾಮಕೃಷ್ಣರ ಪ್ರಯಾಣ. ಶ್ರೀಕೃಷ್ಣನ ಗಮನದಿಂದ ಗೋಪಸ್ತ್ರೀಯರು ದುಃಖಿಸಿದ್ದು. ಮಧುರಾಪಟ್ಟಣಕ್ಕೆ ಬಲರಾಮರ ಆಗಮನ. ಕುವಲಯಾಪೀಡ ಎಂಬ ಕಂಸನ ಆನೆ ಹಾಗೂ ಚಾಣೂರ, ಮುಷ್ಟಿಕರನ್ನು ಸಂಹರಿಸಿದ್ದು, ಕಂಸನನ್ನು ಕೊಂದದ್ದು, ಗುರುಗಳಾದ ಸಾಂದೀಪನಿ ಆಚಾರ್ಯರ ಸತ್ತು ಹೋದ ಮಗುವನ್ನು ಮತ್ತೆ ಕರೆತಂದದ್ದು. ಜರಾಸಂಧನನ್ನು ಪರಾಜಯಗೊಳಿಸಿದ್ದು, ಮುಚಕುಂದನಿಂದ ಕಾಲಯವನನ್ನು ಬೂದಿ ಮಾಡಿ ಬಿಳಿಸಿದ್ದು, ರುಕ್ಮಿಣಿಕಲ್ಯಾಣ, ನರಕಾಸುರನನ್ನು ಕೊಂದು ಹದಿನಾರು ಸಾವಿರ ಕನ್ಯೆಯರನ್ನು ತಂದದ್ದು ಈ ಎಲ್ಲ ಮಹಿಮೆಗಳು ದಶಮಸ್ಕಂಧದಲ್ಲಿ ಉಕ್ತವಾಗಿವೆ.

ಪಾಂಡವರನ್ನು ನಿಮಿತ್ತ ಮಾಡಿ ಭೂಭಾರ ಹರಣಮಾಡಿದ್ದು. ಯಾದವಕುಲ ನಾಶವಾದ ಬಗೆ. ದೇವ ಋಷಿಗಳಾದ ನಾರದರೊಡನೆ ವಸುದೇವನ ಸಂಭಾಷಣೆ, ಉದ್ಧವನಿಗೂ ಮತ್ತು ವಾಸುದೇವನಿಗೂ ಆಶ್ಚರ್ಯಕರವಾದ ಸಂಭಾಷಣವು,

ಕಲಿಯುಗದ ಜನರ ವರ್ತನೆಯು. ನಿತ್ಯ, ನೈಮಿತ್ತಿಕ, ಪ್ರಾಕೃತಿಕ ಆತ್ಯಂತಿಕ ಎಂಬ ನಾಲ್ಕು ವಿಧ ಪ್ರಳಯವು. ಪ್ರಾಕೃತಿಕ ನೈಮಿತ್ತಿಕಿ ನಿತ್ಯಾ ಹೀಗೆ ಮೂರು ವಿಧ ಉತ್ಪತ್ತಿಯು. ಜ್ಞಾನಿಯಾದ ರಾಜರ್ಷಿಯಾದ ಪರೀಕ್ಷಿತನ ಮರಣವು, ಮಾರ್ಕಂಡೇಯ ಚರಿತ್ರೆ.

ಪರಮಾತ್ಮನ ಗುಣಗಳನ್ನು ಹೇಳುವುದು ಕೇಳುವುದರಿಂದ ಭಗವಂತನ ಪಾದಕಮಲಗಳಲ್ಲಿ ನಿರಂತರ ಭಕ್ತಿ ಉಂಟಾಗುವುದು. ಶ್ರೀ ಹರಿಯ ಪಾದಕಮಲಗಳ ನಿರಂತ ಸ್ಮರಣವು ಅಮಂಗಲಗಳನ್ನು ನಾಶ ಮಾಡುವುದು. ಶಾಂತಿಯನ್ನು ಉಂಟುಮಾಡುವುದು ಮತ್ತು ಅಂತಃಕರಣದ ನಿರ್ಮಲತೆಯನ್ನು ಶ್ರೇಷ್ಠವಾದ ಸಮೃದ್ಧಿಯನ್ನು, ಭಕ್ತಿಯನ್ನು, ವಿಶೇಷಜ್ಞಾನ-ವೈರಾಗ್ಯ ಸಹಿತವಾದ ಜ್ಞಾನವನ್ನೂ ಉಂಟುಮಾಡುವುದು.

ಬ್ರಾಹ್ಮಣಶ್ರೇಷ್ಠರೇ ನೀವು ಯಾವಾಗಲೂ ಶ್ರೀಹರಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅವನನ್ನು ಅನನ್ಯಭಕ್ತಿಯಿಂದ ಭಜಿಸುವಿರಿ ಆದ್ದರಿಂದ ನೀವು ಬಹು ಭಾಗ್ಯವಂತರು. ನಾನೂ ಬಹುಭಾಗ್ಯವಂತನೇ. ಏಕೆಂದರೆ ಭಗವತತ್ತ್ವವು ನಿಮ್ಮ ಪ್ರಶ್ನೆ ಮೂಲಕ ಸ್ಮೃತವಾಯಿತು.

ಬ್ರಾಹ್ಮಣರೇ ಅವಶ್ಯವಾಗಿ ಹೇಳಬೇಕಾದ ಅನಂತಗುಣಪೂರ್ಣನಾದ ಶ್ರೀಕೃಷ್ಣನ ಎಲ್ಲ ಪಾಪನಾಶಕವಾದ ಚರಿತ್ರೆಯನ್ನು ನಿಮಗೆ ಇಲ್ಲಿ ಸ್ವಲ್ಪ ಹೇಳಿರುತ್ತೇನೆ.

ಈ ಭಾಗವತವನ್ನು ಭಕ್ತಿಯಿಂದ ಪ್ರತಿಕ್ಷಣವೂ ಬಿಡದೇ ಶ್ರವಣಮಾಡಿ ಮಾಡಿಸುವವನ ಮನಸ್ಸು ಬಹಳ ಪವಿತ್ರವಾಗುತ್ತದೆ. ಹರಿದಿನಗಳಲ್ಲಿ ಭಾಗವತವನ್ನು ಕೇಳುವವನು ಆಯುಷ್ಯಾಭಿವೃದ್ಧಿಯುಳ್ಳವನಾಗುತ್ತಾನೆ.

ಪುಷ್ಕರ-ಮಥುರಾ-ದ್ವಾರಕಾದಿ ಕ್ಷೇತ್ರಗಳಲ್ಲಿ ಉಪವಾಸದಿಂದ ಭಾಗವತ ಸಂಹಿತೆಯನ್ನು ಪಠಣಮಾಡುವ ಸಾಧಕನು ಸಂಸಾರ ಭಯದಿಂದ ಮುಕ್ತನಾಗುವನು. ವೇದವ್ಯಾಸರಿಂದ ಹೇಳಲ್ಪಟ್ಟ ಈ ಭಾಗವತ ಸಂಹಿತಾವನ್ನು ಜಿತೇಂದ್ರಿಯನಾದ ಬ್ರಾಹ್ಮಣನು ಅಧ್ಯಯನ ಮಾಡಿ ಭಗವಂತನ ಉತ್ತಮ ಸ್ಥಾನವಾದ ವೈಕುಂಠವನ್ನು ಹೊಂದುವನು. ಶ್ರೀಮದ್ಭಾಗವತದ ಪಠಣ-ಪಾರಾಯಣಗಳಿಂದ ಬ್ರಾಹ್ಮಣನು ಜ್ಞಾನವನ್ನು, ಕ್ಷತ್ರಿಯನು ಸಮುದ್ರವೇ ಪರಿಧಿಯಾಗಿವುಳ್ಳ ಭೂಮಿಯನ್ನೂ, ವೈಶ್ಯನು ಧನವನ್ನು ಹೊಂದುವನು. ಶೂದ್ರನು ಶ್ರವಣಮಾಡುವದರಿಂದ ಸಕಲ ಪಾಪಗಳಿಂದ ಮುಕ್ತನಾಗುತ್ತಾನೆ.

ಭಗವಂತನ ಯಥಾರ್ಥವಾದ ಸ್ವರೂಪವನ್ನು ತಿಳಿಸಿದ ಗುರುಗಳಾದ ಶುಕಾಚಾರ್ಯರನ್ನು ಮತ್ತೊಮ್ಮೆ ಭಕ್ತಿಯಿಂದ ನಮಸ್ಕರಿಸುತ್ತಿದ್ದೇನೆ. ಮಹೋಪಕಾರಿಯಾದ ಭಗವಂತನಿಗೆ ಅನಂತಾನಂತ ನಮನಗಳು.

**ಸೂತ ಉವಾಚ**

**ನಮೋ ಧರ್ಮಾಯ ಮಹತೇ ನಮಃ ಕೃಷ್ಣಾಯ ವೇಧಸೇ ।**
**ಬ್ರಾಹ್ಮಣೇಭ್ಯೋ ನಮಸ್ಕೃತ್ಯ ಧರ್ಮಾನ್ ವಕ್ಷ್ಯೇ ಸನಾತನಾನ್ ॥ ೧ ॥**

ಮಹತೇ=ಭಗವದ್ಭಕ್ತಿಗೆ ಕಾರಣವಾದ್ದರಿಂದ ಶ್ರೇಷ್ಠವಾದ ಧರ್ಮಾಯ=ನಿವೃತ್ತ ಧರ್ಮಕ್ಕೆ ನಮಃ=ನಮಸ್ಕಾರವು ವೇಧಸೇ=ಜ್ಞಾನರೂಪನಾದ ಕೃಷ್ಣಾಯ=ಶ್ರೀಕೃಷ್ಣನಿಗೆ ನಮಃ=ನಮಸ್ಕಾರವು ಬ್ರಾಹ್ಮಣೇಭ್ಯಃ=ಬ್ರಹ್ಮಾಪರೋಕ್ಷಜ್ಞಾನಿಗಳಿಗೆ ನಮಸ್ಕೃತ್ಯ=ನಮಸ್ಕಾರ ಮಾಡಿ ಸನಾತನಾನ್=ವೇದಪ್ರತಿಪಾದ್ಯಗಳಾದ ಧರ್ಮಾನ್=ಧರ್ಮಗಳನ್ನು ವಕ್ಷ್ಯೇ= ಹೇಳುವೆನು.

**ವಿಶೇಷ-** ಧರ್ಮಾಯ ಮಹತೇ (ಧರ್ಮ, ಅಯಮಹತೇ) ಹೇ ಧರ್ಮ= ಧಾರಕನಾದ್ದರಿಂದ ಧರ್ಮಶಬ್ದವಾಚ್ಯನಾದ ಭಗವಂತನೇ ಅಯಮಹತೇ= ಯಮನಬಾಧೆ ಇಲ್ಲದ ಅಂದರೆ ನಿತ್ಯನಾದ ನಿನಗೆ ನಮಸ್ಕಾರವು. ನ ವಿದ್ಯತೇ ಯಮೇನ ಹತಿಃ ಯಸ್ಯ ಸಃ ಅಯಮಹತಿಃ । ತಸ್ಮೈ ಎಂದು ವಿಗ್ರಹ. ಯಮನಬಾಧೆ ಇಲ್ಲದವನು ಎಂದರೆ ನಿತ್ಯನೆಂದರ್ಥ. ಹೀಗೆ ಪದವಿಭಾಗ ಮಾಡಿ ಭಗವಂತನಿಗೂ ಧರ್ಮಾಯಮಹತೇ ಎಂಬುದನ್ನು ವಿಶೇಷಣ ಮಾಡಬಹುದು.

**ಏತದ್ವಃ ಕಥಿತಂ ವಿಪ್ರಾಃ ವಿಷ್ಣೋಶ್ಚರಿತಮದ್ಭುತಮ್ ।**
**ಭವದ್ಭಿರ್ಯದಹಂ ಪೃಷ್ಟೋ ನರಾಣಾಂ ಪುರುಷೋಚಿತಮ್ ॥ ೨ ॥**

ಹೇ ವಿಪ್ರಾಃ=ಶೌನಕಾದಿ ಬ್ರಾಹ್ಮಣರೇ ಭವದ್ಭಿಃ=ನಿಮ್ಮಿಂದ ಅಹಂ=ನಾನು ಯತ್ ಪುರುಷೋಚಿತಂ ಪೃಷ್ಟಃ=ಅಧಿಕಾರಿಗಳಿಗೆ ಕೇಳಲು ಉಚಿತವಾದುದನ್ನು ಹೇಳಬೇಕೆಂದು ಯಾವುದನ್ನು ಕೇಳಿದ್ದೇನೆಯೋ ಏತತ್=ಅಂಥ ಈ ಅದ್ಭುತಂ=ಆಶ್ಚರ್ಯಕರವಾದ ವಿಷ್ಣೋಃ ಚರಿತಂ=ಶ್ರೀಹರಿಯ ಚರಿತ್ರೆಯು ನರಾಣಾಂ= ಅಮರರಾದ ದೇವತೆಗಳು ಸ್ವಾಯಂಭುವ ಮನು ಮೊದಲಾದ (ರಾಜರ)ಜನರ ಚರಿತಂ=ಚರಿತ್ರವು ವಃ=ನಿಮಗೆ ಕಥಿತಂ=ಹೇಳಲ್ಪಟ್ಟಿದೆ.

**ವಿಶೇಷ-** ನರಶಬ್ದಕ್ಕೆ ಮುಖ್ಯಾರ್ಥ ಮಾನವರು ಎಂದು. ನ ರೀಯತೇ ಇತಿ ನರಾಃ=ಅವಿನಾಶಿಗಳಾದ ದೇವತೆಗಳು ಮನುಷೋತ್ತಮರಾದ ಸ್ವಾಯಂಭೂವಾದಿಗಳೂ ನರಶಬ್ದವಾಚ್ಯರಾಗುತ್ತಾರೆ.

**ಅತ್ರ ಸಂಕೀರ್ತ್ಯತೇ ಸಾಕ್ಷಾತ್ ಸರ್ವಪಾಪಹರೋ ಹರಿಃ ।**
**ನಾರಾಯಣೋ ಹೃಷೀಕೇಶೋ ಭಗವಾನ್ ಸಾತ್ವತಾಂಪತಿಃ ॥ ೩ ॥**

ಅತ್ರ=ಶ್ರೀಮದ್ಭಾಗವತದಲ್ಲಿ ಸಾತ್ವತಾಂಪತಿಃ=ಯಾದವೇಶ್ವರನಾದ ಹೃಷೀಕೇಶಃ= ಇಂದ್ರಿಯ ನಿಯಾಮಕನಾದ ಸರ್ವಪಾಪಹರಃ=ಸಮಸ್ತಪಾಪನಾಶಕನಾದ ನಾರಾಯಣಃ= ಲಕ್ಷ್ಮೀಪತಿಯಾದ ಹರಿಃ=ಪರಮಾತ್ಮನು ಸಾಕ್ಷಾತ್ ಸಂಕೀರ್ತ್ಯತೇ=ಮುಖ್ಯವಾಗಿ ಪ್ರತಿಪಾದಿಸಲ್ಪಡುವನು.

**ಯತ್ತದ್ಬ್ರಹ್ಮಪರಂ ಗುಹ್ಯಂ ಜಗತಃ ಪ್ರಭವಾಪ್ಯಯಮ್ ।**
**ಜ್ಞಾನಂ ಚ ಸದುಪಾಖ್ಯಾನಂ ಪ್ರೋಕ್ತಂ ವಿಜ್ಞಾನಸಂಯುತಮ್ ॥ ೪ ॥**

ಜಗತಃ=ಜಗತ್ತಿನ ಪ್ರಭವಾಪ್ಯಯಂ=ಉತ್ಪತ್ತಿನಾಶಗಳಿಗೆ ಕಾರಣನಾದ ಗುಹ್ಯಂ=ರಹಸ್ಯನಾದ ಯತ್ಪರಂ ಬ್ರಹ್ಮ=ಯಾವ ಪರಬ್ರಹ್ಮತತ್ತ್ವವಿದೆಯೋ ತತ್=ಅದು ಸದುಪಾಖ್ಯಾನಂ ಜ್ಞಾನಂ=ಸಜ್ಜನರ ಕಥಾಗಳಿಂದ ಕೂಡಿದ ಸಾಧನೆಗಳಿಂದ ಸಹಿತವಾದದ್ದು ಮತ್ತು ವಿಜ್ಞಾನಸಂಯುತಂ=ವಿಶೇಷ ಜ್ಞಾನದಿಂದ ಕೂಡಿದ್ದು ಎಂದು ಪ್ರೋಕ್ತಂ=ಹೇಳಲ್ಪಟ್ಟಿದೆ.

**ಭಕ್ತಿಯೋಗಶ್ಚ ವ್ಯಾಖ್ಯಾತೋ ವೈರಾಗ್ಯಂ ಚ ತದಾಶ್ರಯಮ್ ।**
**ಪಾರೀಕ್ಷಿತಮುಪಾಖ್ಯಾನಂ ನಾರದಾಖ್ಯಾನಮೇವ ಚ ॥ ೫ ॥**

ಭಕ್ತಿಯೋಗಃ=ಭಕ್ತಿರೂಪವಾದ ಉಪಾಯವು ತದಾಶ್ರಯಂ=ಭಕ್ತಿಯೇ ಆಶ್ರಯವಾಗಿವುಳ್ಳ ವೈರಾಗ್ಯಂ ಚ=ವೈರಾಗ್ಯವು ಪಾರೀಕ್ಷಿತಂ ಉಪಾಖ್ಯಾನಂ=ಪರೀಕ್ಷಿತನ ಕಥಾವು ನಾರದಾಖ್ಯಾನಂ ಚ=ನಾರದರ ಕಥೆಯೂ ಕೂಡ ವ್ಯಾಖ್ಯಾತಃ=ಹೇಳಲ್ಪಟ್ಟಿದೆ.

**ವಿಶೇಷ-** ಪ್ರೋಕ್ತಂ ವ್ಯಾಖ್ಯಾತಃ ಎಂಬ ಪದಗಳು ವಿಪರಿಣತವಾಗಿ ಅಲ್ಲಲ್ಲಿ ಸ್ಕಂಧ ಮುಗಿಯುವವರೆಗೆ ಅನ್ವಯಿಸುವವು. ಉತ್ತರಾರ್ಧದಿಂದ ಆಯಾ ಸ್ಕಂಧದಲ್ಲಿ ವಿಶೇಷವಾಗಿ ಪ್ರತಿಪಾದಿತವಾದ ಅರ್ಥ ವಿಶೇಷಗಳನ್ನು ಸಂಗ್ರಹಮಾಡಿ ಹೇಳಲಾರಂಭಿಸಿರುವರು. ಇಲ್ಲಿ ನಾರದಾಖ್ಯಾನವೆಂದರೆ ನಾರದ ಭಾಗವತ ರಚನೆ ಮಾಡಲು ವ್ಯಾಸರನ್ನು ಪ್ರಾರ್ಥಿಸಿದ್ದು ಪಾರೀಕ್ಷಿತಾಖ್ಯಾನವೆಂದರೆ ೬ನೇ ಶ್ಲೋಕದಲ್ಲಿ

ಹೇಳುವ ಶೃಂಗೀ ಎಂಬ ಬ್ರಾಹ್ಮಣನ ಶಾಪದಿಂದ ರಾಜರ್ಷಿಯಾದ ಪರೀಕ್ಷಿತನು ಬ್ರಹ್ಮಜ್ಞಾನಿಗಳಾದ ಶುಕಾಚಾರ್ಯರಿಂದ ಉಪದೇಶಪಡೆದದ್ದು

*ಇದು ಪ್ರಥಮಸ್ಕಂಧದ ಸಂಗ್ರಹ ಹೇಳುವರು -*

**ಪ್ರಾಯೋಪವೇಶೋ ರಾಜರ್ಷೇರ್ವಿಪ್ರಶಾಪಾತ್ ಪರೀಕ್ಷಿತಃ ।**
**ಶುಕಸ್ಯ ಬ್ರಹ್ಮರ್ಷಭಸ್ಯ ಸಂವಾದಶ್ಚ ಪರೀಕ್ಷಿತಃ ॥ ೬ ॥**

ವಿಪ್ರಶಾಪಾತ್=ಶೃಂಗಿಯ ಶಾಪದಿಂದ ರಾಜರ್ಷೇಃ ಪರೀಕ್ಷಿತಃ=ರಾಜಋಷಿಯಾದ ಪರೀಕ್ಷಿತನ ಪ್ರಾಯೋಪವೇಶಃ=ಗಂಗಾತೀರದಲ್ಲಿ ಅನಶನವ್ರತವು ಬ್ರಹ್ಮರ್ಷಭಸ್ಯ= ಜ್ಞಾನಿಶ್ರೇಷ್ಠರಾದ ಶುಕಸ್ಯ=ಶುಕಾಚಾರ್ಯರ ಮತ್ತು ಪರೀಕ್ಷಿತಃ=ಪರೀಕ್ಷಿನ್ಮಹಾರಾಜನ ಸಂವಾದಃ=ಸಂವಾದವು.

*ಎರಡನೆಯ ಸ್ಕಂಧದ ಸಂಗ್ರಹ ಹೇಳುವರು -*

**ಯೋಗಧಾರಣಯೋತ್ಕ್ರಾಂತಿಃ ಸಂವಾದೋ ನಾರದಾಜಯೋಃ ।**
**ಅವತಾರಾನುಗೀತಂ ಚ ಸರ್ಗಃ ಪ್ರಾಧಾನಿಕೋಽಗ್ರತಃ ॥ ೭ ॥**

ಯೋಗಧಾರಣಯಾ=ಅಖಂಡಸ್ಮರಣರೂಪವಾದ ಯೋಗಧಾರಣದಿಂದ ಉತ್ಕ್ರಾಂತಿಃ=ಉತ್ಕ್ರಾಂತಿಯು ನಾರದಾಜಯೋಃ=ನಾರದನಿಗೂ ಬ್ರಹ್ಮದೇವರಿಗೂ ನಡೆದ ಸಂವಾದವು ಅವತಾರಾನುಗೀತಂ=ಶ್ರೀಹರಿಯ ಅವತಾರಗಳನ್ನು ಹೇಳುವದು ಅಗ್ರತಃ= ಮೊದಲಿಗೆ ಪ್ರಾಧಾನಿಕಃ ಸರ್ಗಃ=ಪ್ರಧಾನವಾದ ವಿರಾಟ್ ಸೃಷ್ಟಿಯು ಉಕ್ತಃ= ಹೇಳಲ್ಪಟ್ಟಿದೆ.

*ತೃತೀಯಸ್ಕಂಧದ ಸಂಗ್ರಹ ಹೇಳುವರು -*

**ವಿದುರೋದ್ಧವಸಂವಾದಕ್ಷತ್ತೃಮೈತ್ರೇಯಯೋಸ್ತತಃ ।**
**ಪುರಾಣಸಂಹಿತಾಪ್ರಶ್ನೋ ಮಹಾಪುರುಷಸಂಸ್ಥಿತಿಃ ॥ ೮ ॥**

ವಿದುರೋದ್ಧವಸಂವಾದಃ=ತೀರ್ಥಯಾತ್ರೆ ಮಾಡುತ್ತ ಇರುವ ವಿದುರನಿಗೆ ಬದರಿಕಾಶ್ರಮಕ್ಕೆ ಹೋಗುವಾಗ ದಾರಿಯಲ್ಲಿ ಉದ್ಧವರ ದರ್ಶನ. ಅವರಿಬ್ಬರ ನಡುವೆ ಸಂವಾದ ತತಃ=ನಂತರ ಕ್ಷತ್ತೃಮೈತ್ರೇಯಯೋಃ=ವಿದುರ ಮೈತ್ರೇಯರಿಗೆ ಸಂವಾದ ಪುರಾಣಸಂಹಿತಾಪ್ರಶ್ನಃ=ಪುರಾಣ ಸಂಹಿಂತೆಯ ಶ್ರವಣ ವಿಷಯಕ ಪ್ರಶ್ನವು ಮಹಾಪುರುಷಸಂಸ್ಥಿತಿಃ=ಮಹಾಪುರುಷನಾದ ಶ್ರೀಹರಿಯ ಸುಮ್ಮನಿರುವಿಕೆಯು

**ತತಃ ಪ್ರಾಕೃತಿಕಃ ಸರ್ಗಃ ಸಪ್ತವೈಕೃತಿಕಾಸ್ತಥಾ ।**
**ತತೋ ಬ್ರಹ್ಮಾಂಡಸಂಭೂತಿಃ ವೈರಾಜಃ ಪುರುಷೋ ಯತಃ ॥ ೯ ॥**

ತತಃ=ಅನಂತರ ಪ್ರಾಕೃತಿಕಃ=ಪ್ರಕೃತಿಯೇ ಉಪಾದಾನವಾಗಿ ಉಳ್ಳ ಮಹತತ್ವ, ಅಹಂಕಾರ ತತ್ವ ಪಂಚಭೂತಗಳ ಸೃಷ್ಟಿ ಸಪ್ತ=ಇವು ಏಳು ತಥಾ=ಹಾಗು ವೈಕೃತಿಕಾಃ=ಇಂದ್ರಿಯ ವಿಷಯಕವಾದ ಸೃಷ್ಟಿಯು ಯತಃ=ಯಾವ ಬ್ರಹ್ಮಾಂಡದಲ್ಲಿ ವೈರಾಜಪುರುಷಃ= ವಿರಾಟ್‌ಪುರುಷನಿರುವನೋ ತತಃ=ಅಂಥಹ ಪರಮಪುರುಷನಿಂದ ಬ್ರಹ್ಮಾಂಡ-ಸಂಭೂತಿಃ=ಬ್ರಹ್ಮಾಂಡದ ಉತ್ಪತ್ತಿಯು.

**ಕಾಲಸ್ಯ ಸ್ಥೂಲಸೂಕ್ಷ್ಮಸ್ಯ ಗತಿಃ ಪದ್ಮಸಮುದ್ಭವಃ ।**
**ಭುವ ಉದ್ಧರಣಾಂಭೋಧೇರ್ಹಿರಣ್ಯಾಕ್ಷವಧಸ್ತಥಾ ॥ ೧೦ ॥**

ತಥಾ=ಮತ್ತು ಸ್ಥೂಲಸೂಕ್ಷ್ಮಸ್ಯ=ಸ್ಥೂಲವಾದ ಸೂಕ್ಷ್ಮವಾದ ಕಾಲಸ್ಯ=ಕಾಲದ ಗತಿಃ=ಸ್ಥಿತಿಯು ನಿರೂಪಿತಾ=ಹೇಳಲ್ಪಟ್ಟಿದೆ. ಪದ್ಮಸಮುದ್ಭವಃ=ಶ್ರೀಹರಿಯ ನಾಭಿಯಿಂದ ಕಮಲದ ಉತ್ಪತ್ತಿಯು ಅಂಭೋಧೇಃ=ಸಮುದ್ರದಿಂದ ಭುವಃ=ಭೂಮಿಯನ್ನು ಉದ್ಧರಣಂ=ಮೇಲೆ ತಂದದ್ದು ಹಿರಣ್ಯಾಕ್ಷವಧಃ=ಹಿರಣ್ಯಾಕ್ಷನ ವಧೆಯು ಸಹ ಉಕ್ತಃ=ಹೇಳಲ್ಪಟ್ಟಿದೆ.

**ವಿಶೇಷ-** ಯತಃ=(ಸತ್ಯಧರ್ಮರ ಪಾಠ) ಯಾವಸ್ಕಂಧದಲ್ಲಿ ಅಥವಾ ಯಾವ ಭೂಮಿಯನ್ನು ತರುವಾಗ ಹಿರಣ್ಯಾಕ್ಷನ ಸಂಹಾರವಾಯಿತೋ ಅಂಥಹ ಭೂಮಿಯ ಎಂದು ಅನ್ವಯ.

**ಊರ್ಧ್ವತಿರ್ಯಗಧಃ ಸರ್ಗೋ ರುದ್ರಸರ್ಗಸ್ತಥೈವ ಚ ।**
**ಅರ್ಧನಾರೀ ನರಸ್ಯಾಥ ಯಥಾ ಸ್ವಾಯಂಭುವೋ ಮನುಃ ॥ ೧೧ ॥**

ಊರ್ಧ್ವತಿರ್ಯಗಧಃ ಸರ್ಗಃ=ದೇವತೆಗಳು ಪ್ರಾಣಿಗಳು ಅಸುರರ ಸೃಷ್ಟಿ ತಥಾ=ಹಾಗೂ ರುದ್ರಸರ್ಗಃ=ರುದ್ರಸೃಷ್ಟಿಯು ಅರ್ಧನಾರೀನರಸ್ಯ=ಅರ್ಧನಾರೀನರನಾದ ಬ್ರಹ್ಮದೇವರಿಂದ ಯಥಾ=ಹೇಗೆ ಸ್ವಾಯಂಭುವೋ ಮನುಃ=ಸ್ವಾಯಂಭುವ ಮನುವು ಹುಟ್ಟಿದನು.

**ಶತರೂಪಾ ಚ ಯಾ ಸ್ತ್ರೀಣಾಮಾದ್ಯಾ ಪ್ರಕೃತಿರುತ್ತಮಾ ।**
**ಸಂತಾನೋ ಧರ್ಮಪತ್ನೀನಾಂ ಕರ್ದಮಸ್ಯ ಪ್ರಜಾಪತೇಃ ॥ ೧೨ ॥**

ಯಾ=ಯಾವಳು ಸ್ತ್ರೀಣಾಂ ಮಧ್ಯೇ=ಸ್ತ್ರೀಯರಲ್ಲಿ ಆದ್ಯಾ ಪ್ರಕೃತಿಃ=ಮೊದಲನೆಯ ಸೃಷ್ಟಿಯು(ಇವಳ ದ್ವಾರಾ ಆದ್ದರಿಂದ ಮೊದಲನೆಯವಳು) ಅಂಥ ಶತರೂಪಾ ಚ=ಶತರೂಪಾದೇವಿಯು ಹೇಗೆ ಹುಟ್ಟಿದಳು ಎಂಬುದನ್ನು ಪ್ರಜಾಪತೇಃ ಕರ್ದಮಸ್ಯ=ಕರ್ದಮ ಪ್ರಜಾಪತಿಗಳ ಧರ್ಮಪತ್ನೀನಾಂ ಸಂತಾನಃ=ಧರ್ಮಪತ್ನಿಯರ ಪುತ್ರಪರಂಪರೆಯು ಉಕ್ತವಾಗಿದೆ.

**ಅವತಾರೋ ಭಗವತಃ ಕಪಿಲಸ್ಯ ಮಹಾತ್ಮನಃ ।**
**ದೇವಹೂತ್ಯಾಶ್ಚ ಸಂವಾದಃ ಕಪಿಲೇನ ಚ ಧೀಮತಾ** **॥ ೧೩ ॥**

ದೇವಹೂತ್ಯಾಃ ಸಕಾಶಾತ್=ದೇವಹೂತಿಯಿಂದ ಮಹಾತ್ಮನಃ ಭಗವತಃ ಕಪಿಲಸ್ಯ =ಪರಮಚೇತನನಾದ ಪರಮೈಶ್ವರ್ಯಶಾಲಿಯಾದ ಕಪಿಲನಾಮಕ ಶ್ರೀಹರಿಯ ಅವತಾರಃ= ಅವತಾರವು ಧೀಮತಾ=ಜ್ಞಾನಿಯಾದ ಕಪಿಲೇನ=ಕಪಿಲನಿಂದ ದೇವಹೂತ್ಯಾಶ್ಚ ಸಂವಾದಃ=ದೇವಹೂತಿಯೊಡನೆ ಸಂವಾದವು. ಇಲ್ಲಿಯವರೆಗೆ ಮೂರನೇ ಸ್ಕಂಧದ ಕಥಾ ಸಂಗ್ರಹ.

**ವಿಶೇಷ-** ದೇವಹೂತಿಯು ಸ್ತ್ರೀ ಆದ್ದರಿಂದ ಕಪಿಲೋಪದೇಶಕ್ಕೆ ಅಧಿಕಾರಿಯಾಗುತ್ತಾಳೆಯೋ ಎಂದರೆ ಅದಕ್ಕೆ ಧೀಮತಾ ಎಂಬುದೆ ಉತ್ತರ. ಧೀಮತಾ=ಜ್ಞಾನದಿಂದ ಸಮ್ಮತಳು ಎಂದು.

*ನಾಲ್ಕನೆಯ ಸ್ಕಂಧದ ಸಂಗ್ರಹ*

**ನವಬ್ರಹ್ಮಸಮುತ್ಪತ್ತಿರ್ದಕ್ಷಯಜ್ಞವಿನಾಶನಮ್ ।**
**ಧ್ರುವಸ್ಯ ಚರಿತಂ ಪಶ್ಚಾತ್ ಪೃಥೋಃ ಪ್ರಾಚೀನಬರ್ಹಿಷಃ** **॥ ೧೪॥**

ನವಬ್ರಹ್ಮಸಮುತ್ಪತ್ತಿಃ=ಮರೀಚೀ ಮೊದಲಾದ ಒಂಬತ್ತುಜನ ಪ್ರಜಾಪತಿಗಳ ಸೃಷ್ಟಿ ಮತ್ತು ಅವರಿಂದ ಆದ ಸೃಷ್ಟಿ ದಕ್ಷಯಜ್ಞ ವಿನಾಶನಂ=ದಕ್ಷಯಜ್ಞದಲ್ಲಿ ಸತಿಯ ದೇಹತ್ಯಾಗ. ಆದರ ಪರಿಣಾಮ ರುದ್ರದೇವರು ಮಾಡಿದ ದಕ್ಷಯಜ್ಞ ವಿನಾಶ ಎಂದು ಆವೃತ್ತಿ ಮಾಡಿ ಅರ್ಥ ಮಾಡಬೇಕು. ಪಶ್ಚಾತ್=ನಂತರ ಧ್ರುವಸ್ಯ ಚರಿತಂ=ಧ್ರುವನ ಚರಿತ್ರೆ ನಂತರ ವೃಥೋಃ=ಪೃಥು ಚಕ್ರವರ್ತಿಯ ಚರಿತ್ರೆಯು ಪ್ರಾಚೀನ ಬರ್ಹಿಷಃ ನಾರದಸ್ಯ ಸಂವಾದಃ=ಪ್ರಾಚೀನಬರ್ಹಿಗಳಿಗೂ ನಾರದರಿಗೂ ನಡೆದ ಸಂವಾದ ಇಷ್ಟು ನಾಲ್ಕನೇಯ ಸ್ಕಂಧದ ಸಂಗ್ರಹ.

*ಐದನೆಯ ಸ್ಕಂಧದ ಸಂಗ್ರಹ*

**ನಾರದಸ್ಯ ಚ ಸಂವಾದಸ್ತತಃ ಪ್ರೈಯ್ಯವ್ರತಂ ದ್ವಿಜಾಃ ।**
**ನಾಭೇಸ್ತತೋऽನುಚರಿತಮೃಷಭಸ್ಯ ಭರತಸ್ಯ ಚ ।**
**ದ್ವೀಪವರ್ಷಸಮುದ್ರಾಣಾಂ ಗಿರಿನದ್ಯುಪವರ್ಣನಮ್ ॥ ೧೫ ॥**

ಇನ್ನು ಐದನೇಯ ಸ್ಕಂಧದಲ್ಲಿ ಪ್ರೈಯ್ಯವ್ರತಂ ಚರಿತಂ=ಪ್ರಿಯವ್ರತನ ಚರಿತ್ರೆಯು ಋಷಭಸ್ಯ=ಋಷಭನಾಮಕ ಶ್ರೀಹರಿಯ ಹಾಗೂ ಭರತಸ್ಯ=ಋಷಭನ ಮಗನಾದ ಭರತನ ನಾಭೇಃ=ಪ್ರಿಯವ್ರತನ ಮಗನಾದ ನಾಭಿಯ ನಂತರ ದ್ವೀಪವರ್ಷ-ಸಮುದ್ರಾಣಾಂ=ದ್ವೀಪಗಳು,(ಜಂಬು ಮೊದಲಾದವುಗಳು)ಭಾರತ ಮೊದಲಾದ ಖಂಡಗಳು, ಸಮುದ್ರಗಳು, ಗಿರಿಪರ್ವತಗಳು,ಗಂಗಾದಿನದಿಗಳು ಇವುಗಳನ್ನು ಉಪವರ್ಣನಂ=ಹೇಳುವದು. ಇದನ್ನೇ ಸಮುದ್ರಾಣಾಂ ಎಂಬಲ್ಲಿಯೂ ಅನ್ವಯಿಸಬೇಕು.

**ಜ್ಯೋತಿಶ್ಚಕ್ರಸ್ಯ ಸಂಸ್ಥಾನಂ ಪಾತಾಲನರಕಸ್ಥಿತಿಃ ।**
**(ಅಜಾಮಿಳಸ್ಯ ಚರಿತಂ ಸರ್ವಪಾಪಪ್ರಣಾಶನಮ್)**
**ದಕ್ಷಜನ್ಮ ಪ್ರಚೇತೋಭ್ಯಸ್ತತ್ಪುತ್ರೀಣಾಂ ಚ ಸಂತತಿಃ ॥ ೧೬ ॥**

ಜ್ಯೋತಿಶ್ಚಕ್ರಸ್ಯ=ಜ್ಯೋತಿರ್ಮಂಡಲದ ಸಂಸ್ಥಾನಂ=ಇರುವಿಕೆಯನ್ನು ಪಾತಾಲ-ನರಕಸ್ಥಿತಿಃ=ಪಾತಾಲ ಮತ್ತು ನರಕಗಳ ಸ್ಥಿತಿಯು ವರ್ಣಿಸಲ್ಪಟ್ಟಿದೆ.

*ಆರನೆಯ ಸ್ಕಂಧದ ಸಂಗ್ರಹ*

ಪ್ರಚೇತೋಭ್ಯಃ=ಪ್ರಚೇತರಿಂದ ದಕ್ಷಜನ್ಮ=ದಕ್ಷನ ಉತ್ಪತ್ತಿ ತತ್ಪುತ್ರೀಣಾಂ=ದಕ್ಷನ ಹೆಣ್ಣು ಮಕ್ಕಳ ವಂಶವಿಚಾರ ಹೇಳಲ್ಪಟ್ಟಿದೆ.

**ಯತೋ ದೇವಾಸುರನರಾಸ್ತಿರ್ಯಙ್ ನಗಖಗಾದಯಃ ।**
**ತ್ವಾಷ್ಟ್ರಸ್ಯ ಜನ್ಮನಿಧನಂ ಪುತ್ರಯೋಶ್ಚ ದಿತೇರ್ದ್ವಿಜಾಃ ॥ ೧೭ ॥**

ಹೇ ದ್ವಿಜಾಃ=ಶೌನಕಾದಿಗಳೇ ಯತಃ=ಯಾವ ಆ ಸಂತತಿಯಿಂದ ದೇವಾಸುರ-ನರಾಸ್ತಿರ್ಯನ್ನಗಖಗಾದಯಃ=ದೇವಾ=ದೇವತೆಗಳು ಅಸುರ=ದೈತ್ಯರು ನರ=ಮನುಷ್ಯರು ತಿರ್ಯಕ್=ಪಶುಗಳು ನಗ=ವೃಕ್ಷಗಳು ಖಗ=ಪಕ್ಷಿಗಳು ಆದಯಃ=ಇವುಗಳೇ ಮೊದಲಾದವು ಅಭೂವನ್=ಹುಟ್ಟಿದವು. ತ್ವಾಷ್ಟ್ರಸ್ಯ=ವೃತ್ರನ ಜನ್ಮನಿಧನಂ=ಉತ್ಪತ್ತಿ ಹಾಗು ಮರಣವು ಇಲ್ಲಿಯವರೆಗೆ ೬ನೇ ಸ್ಕಂಧದ ವಿಚಾರವನ್ನು ಹೇಳಲಾಗಿದೆ. ದಿತೇಃ=ದಿತಿದೇವಿಯ ಪುತ್ರಯೋಃ=ಮಕ್ಕಳಾದ ಹಿರಣ್ಯಾಕ್ಷ ಹಿರಣ್ಯಕಶಿಪುಗಳ

*ಏಳನೆಯ ಸ್ಕಂಧದ ಸಂಗ್ರಹ*

**ದೈತ್ಯೇಶ್ವರಸ್ಯ ಚರಿತಂ ಪ್ರಹ್ಲಾದಸ್ಯ ಮಹಾತ್ಮನಃ ।**
**ಮನ್ವಂತರಾನುಚರಿತಂ ಗಜೇಂದ್ರಸ್ಯ ವಿಮೋಕ್ಷಣಮ್ ॥ ೧೮ ॥**

ಮಹಾತ್ಮನಃ=ಮಹಾತ್ಮನಾದ ದೈತ್ಯೇಶ್ವರಸ್ಯ=ದೈತ್ಯರಾಜನಾದ ಪ್ರಲ್ಹಾದಸ್ಯ ಚರಿತಂ= ಪ್ರಹ್ಲಾದನ ಚರಿತ್ರವು ಏಳನೇ ಸ್ಕಂಧದಲ್ಲಿ ಹೇಳಿದೆ. ಇನ್ನು ಎಂಟರಲ್ಲಿ ಗಜೇಂದ್ರಸ್ಯ= ಗಜೇಂದ್ರನ ವಿಮೋಕ್ಷಣಂ=ಮೋಚನ ಮಾಡಿದ್ದು ಮನ್ವಂತರಾನುಚರಿತಂ= ಸ್ವಾಯಂಭುವಾದಿಗಳ ಚರಿತ್ರೆಯು ಇದೆ.

ಎಂಟನೆಯ ಸ್ಕಂಧದ ಸಂಗ್ರಹ

**ಮನ್ವಂತರಾವತಾರಾಶ್ಚ ವಿಷ್ಣೋರ್ಹಯಶಿರಾದಯಃ ।**
**ಕೌರ್ಮ್ಯಂ ಮಾತ್ಸ್ಯಂ ನಾರಸಿಂಹಂ ವಾಮನಂ ಚ ಜಗತ್ಪತೇಃ ॥ ೧೯ ॥**

ಜಗತ್ಪತೇಃ=ಜಗದೊಡೆಯನಾದ ವಿಷ್ಣೋಃ=ಶ್ರೀಹರಿಯ ಹಯಶಿರಾದಯಃ= ಹಯಗ್ರೀವ ಮೊದಲಾದ ಮನ್ವಂತರಾವತಾರಃ=ಮನ್ವಂತರಗಳಲ್ಲಿ ಆಗುವ ಅವತಾರಗಳು ಕೌರ್ಮ್ಯಂ=ಕೂರ್ಮನ ಮಾತ್ಸ್ಯಂ=ಮತ್ಸನ ನಾರಸಿಂಹಂ=ನರಸಿಂಹನ ವಾಮನಂ ಚ=ವಾಮನನ ಚರಿತಂ=ಈ ಎಲ್ಲ ಅವತಾರಗಳ ಚರಿತ್ರೆಯನ್ನು

**ಕ್ಷೀರೋಧಮಂಥನಂ ತದ್ವದಮೃತಾರ್ಥಂ ದಿವೌಕಸಾಮ್ ।**
**ದೇವಾಸುರಮಹಾಯುದ್ಧಂ ರಾಜವಂಶಾನುಕೀರ್ತನಮ್ ॥ ೨೦ ॥**

ತದ್ವತ್=ಹಾಗೆಯೇ ದಿವೌಕಸಾಂ=ದೇವತೆಗಳ ಅಮೃತಾರ್ಥಂ=ಅಮೃತಕ್ಕಾಗಿ ಕ್ಷೀರೋದಮಂಥನಂ=ಹಾಲಿನ ಸಮುದ್ರವನ್ನು ಕಡೆದುದು ದೇವಾಸುರ ಮಹಾಯುದ್ದಂ=ದೇವತೆಗಳಿಗೂ ದೈತ್ಯರಿಗೂ ಘೋರವಾದ ಯುದ್ಧ. ಇವು ಈ ಅಷ್ಟಮ ಸ್ಕಂಧದಲ್ಲಿ ಹೇಳಲ್ಪಟ್ಟಿದೆ. ಇಲ್ಲಿಗೆ ಅಷ್ಟಮಸ್ಕಂದದ ಸಂಗ್ರಹ ಮುಗಿಯಿತು.

ನವಮಸ್ಕಂಧದ ಕಥಾ ಸಂಗ್ರಹವು

**ಇಕ್ಷ್ವಾಕುಜನ್ಮ ತದ್ವಂಶಃ ಸುದ್ಯುಮ್ನಸ್ಯಮಹಾತ್ಮನಃ ।**
**ಇಲೋಪಾಖ್ಯಾನಮತ್ರೋಕ್ತಂ ತಾರೋಪಾಖ್ಯಾನಮೇವ ಚ ॥ ೨೧॥**

ರಾಜವಂಶಾನುಕೀರ್ತನಮ್=ರಾಜವಂಶದ ಕಥೆಯನ್ನು ಹೇಳುವುದು. ಇಕ್ಷ್ವಾಕುಜನ್ಮ =ಇಕ್ಷ್ವಾಕು ರಾಜನ ಹುಟ್ಟು ತದ್ವಂಶಃ=ಅವನ ವಂಶ ಮಹಾತ್ಮನಃ=ಮಹಾಮನಸ್ವಿಯಾದ

ಸುದ್ಯುಮ್ನಸ್ಯ=ಸುದ್ಯುಮ್ನನ ಇಲೋಪಾಖ್ಯಾನಂ=ಸುದ್ಯುಮ್ನನೆ ಇಲಾ ಆದದ್ದು ಬುಧ ಹುಟ್ಟಿದ್ದು ತಾರೋಪಾಖ್ಯಾನಂ=ಚಂದ್ರ ಬೃಹಸ್ಪತಿಗಳ ಕಲಹರೂಪವಾದ ತಾರಾ ಕಥೆಯು ಅತ್ರ ಉಕ್ತಂ=ಈ ನವಮದಲ್ಲಿ ಹೇಳಲ್ಪಟ್ಟಿದೆ.

**ಸೂರ್ಯವಂಶಾನುಕಥನಂ ಶಶಾಂಕಾದ್ಯಾ ನೃಪಾದಯಃ ।**
**ಸೌಕನ್ಯಮಥ ಶಾರ್ಯಾತಂ ಕಕುತ್ಸ್ಥಸ್ಯ ಚ ಧೀಮತಃ ॥ ೨೨ ॥**

ಸೂರ್ಯವಂಶಾನುಕಥನಂ=ಸೂರ್ಯವಂಶವನ್ನು ಹೇಳುವದು ಶಶಾಂಕಾದ್ಯಾಃ= ಶಶಾಂಕನೇ ಮೊದಲಾದ ನೃಪಾದಯಃ=ರಾಜರು ಸೌಕನ್ಯಂ ಶಾರ್ಯಾತಂ=ಶರ್ಯಾತಿ ರಾಜನ ಮತ್ತು ಅವನ ಮಗಳಾದ ಸುಕನ್ಯೆಯ ಕಕುತ್ಸ್ಥಸ್ಯ ಚ ಧೀಮತಃ= ಬುದ್ಧಿವಂತನಾದ ಕಕುತ್ಸ್ಥನ ಕಾರ್ಯಗಳು ನಾಮಗಳು ಹೇಳಲ್ಪಟ್ಟಿವೆ.

**ಖಟ್ವಾಂಗಸ್ಯಚ ಮಾಂಧಾತುಃ ಸೌಭರೇಃ ಸಗರಸ್ಯಚ ।**
**ಕೋಸಲೇಂದ್ರಸ್ಯ ಚರಿತಂ ಅದ್ಭುತಂ ಕಿಲ್ಬಿಷಾಪಹಮ್ ॥ ೨೩ ॥**

ಖಟ್ವಾಂಗಸ್ಯ=ಖಟ್ವಾಂಗನ ಮಾಂಧಾತುಃ=ಮಾಂಧಾತೃವಿನ, ಸೌಭರೇಃ=ಸೌಭರಿಯ, ಸಗರಸ್ಯ=ಸಗರರಾಜನ ಚ ಮತ್ತು ಕಿಲ್ಬಿಷಾಪಹಂ=ಪಾಪನಾಶಕವಾದ ಅದ್ಭುತಂ= ಆಶ್ಚರ್ಯಕರವಾದ ಕೋಸಲೇಂದ್ರಸ್ಯ=ಶ್ರೀರಾಮಚಂದ್ರನ ಚರಿತಂ=ಚರಿತ್ರೆಯು ಹೇಳಿಲ್ಪಟ್ಟಿದೆ.

**ನಿಮೇರಂಗಪರಿತ್ಯಾಗೋ ಜನಕಾನಾಂ ಚ ಸಂಭವಃ ।**
**ರಾಮಸ್ಯ ಭಾರ್ಗವೇಂದ್ರಸ್ಯ ನಿಃಕ್ಷತ್ರೀಕರಣಂ ಭುವಃ ॥ ೨೪ ॥**

ನಿಮೇಃ=ನಿಮಿರಾಜನ ಅಂಗಪರಿತ್ಯಾಗಃ=ದೇಹತ್ಯಾಗವು(ವಸಿಷ್ಠರ ಶಾಪದಿಂದ) ಜನಕಾನಾಂ ಚ ಸಂಭವಃ=ಜನಕರ ಉತ್ಪತ್ತಿ (ನಿಮಿಯದೇಹದಿಂದ) ಭಾರ್ಗವೇಂದ್ರಸ್ಯ ರಾಮಸ್ಯ=ಪರಶುರಾಮದೇವರ ಭುವಃ ನಿಕ್ಷತ್ರೀಕರಣಂ=ಭೂಮಿಯಲ್ಲಿ ಕ್ಷತ್ರಿಯರಿಲ್ಲದಂತೆ ಮಾಡಿದ್ದು.

**ಐಲಸ್ಯ ಸೋಮವಂಶಸ್ಯ ಯಯಾತೇರ್ನಹುಷಸ್ಯ ಚ ।**
**ದೌಷ್ಯಂತೇರ್ಭರತಸ್ಯಾಪಿ ಶಂತನೋಸ್ತತ್ಸುತಸ್ಯ ಚ ॥ ೨೫ ॥**

ಐಲಸ್ಯ=ಇಲಾಸಂಬಂಧಿಯಾದ ಸೋಮವಂಶಸ್ಯ=ಚಂದ್ರವಂಶದ ಯಯಾತೇಃ= ಯಯಾತಿ ರಾಜನ ನಹುಷಸ್ಯ=ನಹುಷನ ದೌಷ್ಯಂತೇಃ=ದುಷ್ಯಂತನ ಮಗನಾದ ಭರತಸ್ಯ=ಭರತನ ಅಪಿ=ಮತ್ತು ಶಂತನೋಃ=ಶಂತನು ರಾಜನ ತತ್ಸುತಸ್ಯ=ಭೀಷ್ಮನ

**ಯಯಾತೇರ್ಜ್ಯೇಷ್ಠಪುತ್ರಸ್ಯ ಯದೋರ್ವಂಶೋನುಕೀರ್ತಿತಃ ।**
**ಯತ್ರಾವತೀರ್ಣೋ ಭಗವಾನ್ ಕೃಷ್ಣಾಖ್ಯೋ ಜಗದೀಶ್ವರಃ ॥ ೨೬ ॥**

ಯತ್ರ=ಯಾವ ವಂಶದಲ್ಲಿ ಜಗದೀಶ್ವರಃ=ಜಗತ್ಸ್ವಾಮಿಯಾದ ಭಗವಾನ್ ಕೃಷ್ಣಾಖ್ಯಃ =ಷಡ್ಗುಣೈಶ್ವರ್ಯ ಸಂಪನ್ನನಾದ ಶ್ರೀಕೃಷ್ಣನು ಅವತೀರ್ಣಃ=ಅವತಾರ ಗೈದನೋ ಅಂಥಹ ಯಯಾತೇಃ=ಯಯಾತಿಯ ಜ್ಯೇಷ್ಠಪುತ್ರಸ್ಯ=ಹಿರಿಯಮಗನಾದ ಯದೋಃ= ಯದುರಾಜನ ವಂಶಃ=ವಂಶವು ಅನುಕೀರ್ತಿತಃ=ವರ್ಣಿಸಲ್ಪಟ್ಟಿದೆ. ಇಲ್ಲಿಗೆ ನವಮಸ್ಕಂಧ ಸಂಗ್ರಹ ಮುಗಿಯಿತು.

*ಹತ್ತನೆಯ ಸ್ಕಂಧದ ಸಂಗ್ರಹ*

**ವಸುದೇವಗೃಹೇ ಜನ್ಮ ತಸ್ಯವೃದ್ಧಿಶ್ಚ ಗೋಕುಲೇ ।**
**ತಸ್ಯ ಕರ್ಮಾಣ್ಯಪಾರಾಣಿ ಕೀರ್ತಿತಾನ್ಯಸುರದ್ವಿಷಃ ॥ ೨೭ ॥**

ವಸುದೇವಗೃಹೇ=ವಸುದೇವನ ಪತ್ನಿಯಾದ ದೇವಕಿಯಲ್ಲಿ ಅವತಾರ ಗೋಕುಲೇ=ಗೋಕುಲದಲ್ಲಿ ತಸ್ಯ=ಶ್ರೀಕೃಷ್ಣನ ವೃದ್ಧಿಃ=ಬೆಳವಣಿಗೆ ಚ=ಮತ್ತು ಅಸುರದ್ವಿಷಃ=ದೈತ್ಯ ಸಂಹಾರಕನಾದ ತಸ್ಯ=ಶ್ರೀಕೃಷ್ಣನ ಅಪಾರಾಣಿ=ಅನಂತವಾದ ಕರ್ಮಾಣಿ=ಕ್ರಿಯೆಗಳು ಕೀರ್ತಿತಾನಿ=ಹೇಳಲ್ಪಟ್ಟಿವೆ.

**ವಿಶೇಷ-** ಅಪಾರಾಣಿ-(ಅಪಗತಾಃ ಅರಾಃ ಯೇಭ್ಯಃ ತಾನಿ ಅಂದರೆ ನಿರ್ದುಷ್ಟವಾದ ಕಾರ್ಯಗಳನ್ನು ಎಂದರ್ಥ.)

**ಪೂತನಾಯಾಃ ಪಯಃಪಾನಂ ಶಕಟೋಚ್ಚಾಟನಂ ಶಿಶೋಃ ।**
**ತೃಣಾವರ್ತಸ್ಯ ನಿಷ್ಪೇಷಸ್ತಥೈವ ಬಕವತ್ಸಯೋಃ ॥ ೨೮ ॥**

ಶಿಶೋಃ=ಬಾಲಕನಾದ ಶ್ರೀಕೃಷ್ಣನ ಪೂತನಾಯಾಃ=ಪೂತನೆಯ ಪಯಃಪಾನಂ= ಪ್ರಾಣಗಳೊಡನೆ ಹಾಲು ಕುಡಿದುದು, ಶಕಟೋಚ್ಚಾಟನಂ=ಶಕಟಾಸುರ ಸಂಹಾರ, ತೃಣಾವರ್ತಸ್ಯ ನಿಷ್ಪೇಷಃ=ತೃಣಾವರ್ತನೆಂಬ ರಾಕ್ಷಸನ ಕುತ್ತಿಗೆ ಹಿಚುಕುವುದು ತಥಾ ಏವ=ಹಾಗೆಯೇ ಬಕವತ್ಸಯೋಃ ನಿಷ್ಪೇಷಃ=ಬಕಾಸುರ ವತ್ಸಾಸುರರ ನಾಶ.

**ಧೇನುಕಸ್ಯ ಸಹಭ್ರಾತುಃ ಪ್ರಲಂಬಸ್ಯಚ ಸಂಕ್ಷಯಃ ।**
**ಗೋಪಾನಾಂ ಚ ಪರಿತ್ರಾಣಾಂ ದಾವಾಗ್ನೇ ಪರಿಸರ್ಪತಃ ॥ ೨೯ ॥**

ಸಹಭ್ರಾತುಃ=ಬಲರಾಮನಿಂದ ಸಹಿತನಾದ ಶಿಶೋಃ=ಶ್ರೀಕೃಷ್ಣನಿಂದ ಧೇನುಕಸ್ಯ=ಧೇನುಕಾಸುರನ ಪ್ರಲಂಬಸ್ಯ=ಪ್ರಲಂಬಾಸುರನ ಸಂಕ್ಷಯಃ=ನಾಶವು ಪರಿಸರ್ಪತಃ=ಆಕ್ರಮಿಸುತ್ತಿರುವ ದಾವಾಗ್ನೇಃ=ಕಾಡುಗಿಚ್ಚಿನಿಂದ ಗೋಪಾನಾಂ= ಗೋಪಾಲಕರ ಪರಿತ್ರಾಣಂ=ರಕ್ಷಣವು

**ವಿಶೇಷ-** ದೇನುಕಾಸುರ ಪ್ರಲಂಬಾಸುರರನ್ನು ಮುಖ್ಯವಾಗಿ ಕೊಂದವನು ಶ್ರೀಕೃಷ್ಣನೇ. ಅವರಿಬ್ಬರನ್ನು ಕೊಂದವನು ಬಲರಾಮ ಎಂಬುದು ವ್ಯರ್ಥವೇನಲ್ಲ. ಅವರ ಜೊತೆಗೆ ಇದ್ದನಾದ್ದರಿಂದ.

**ದಮನಂ ಕಾಲಿಯಸ್ಯಾಹೇರ್ಮಹಾಹೇರ್ನಂದಮೋಕ್ಷಣಮ್ ।**
**ವ್ರತಚರ್ಯಾಂ ಚ ಕನ್ಯಾನಾಂ ಯತ್ರ ತುಷ್ಟೋ ವ್ರತೈಃ ಪ್ರಭುಃ ॥ ೩೦ ॥**

ಕಾಲಿಯಸ್ಯ ಅಹೇಃ ದಮನಂ=ಕಾಲಿಯ ಸರ್ಪವನ್ನು ತುಳಿದುದು ಮಹಾಹೇಃ=ಅಜಗರದಿಂದ ನಂದಮೋಕ್ಷಣಂ=ನಂದಗೋಪನನ್ನು ಬಿಡಿಸಿದ್ದು ಯತ್ರ=ಯಾರಲ್ಲಿ ವ್ರತೈಃ=ವ್ರತಗಳಿಂದ ಪ್ರಭುಃ=ಶ್ರೀಕೃಷ್ಣನು ತುಷ್ಟಃ=ಸಂತುಷ್ಟನಾದನೋ ಅಂಥಹ ಕನ್ಯಾನಾಂ=ಕನ್ಯೆಯರ ವ್ರತಚರ್ಯಾಂ=ವ್ರತಾನುಷ್ಠಾನವನ್ನು

**ಪ್ರಸಾದೋ ಯಜ್ಞಪತ್ನೀಭ್ಯೋ ವಿಪ್ರಾಣಾಂ ಚಾನುತಾಪನಮ್ ।**
**ಗೋವರ್ಧನೋದ್ಧಾರಣಂ ಚ ಶಕ್ರಸ್ಯ ಸುರಭೇರಥ ॥ ೩೧ ॥**

ಯಜ್ಞಪತ್ನೀಭ್ಯಃ=ಅನ್ನವನ್ನಿತ್ತ ಬ್ರಾಹ್ಮಣ ಪತ್ನಿಯರಿಗೆ ಪ್ರಸಾದಃ=ಅನುಗ್ರಹ ಮಾಡಿದ್ದು ವಿಪ್ರಾಣಾಂ=ಅನ್ನವನ್ನು ಕೊಡದಿರುವ ಬ್ರಾಹ್ಮಣರಿಗೆ ಅನುತಾಪನಂ=ಪಶ್ಚಾತ್ತಾಪವಾದದ್ದು ಗೋವರ್ಧನೋದ್ಧಾರಣಂ=ಗೋವರ್ಧನ ಪರ್ವತವನ್ನು ಎತ್ತಿ ಹಿಡಿದುದು ಅಥ=ನಂತರ ಶಕ್ರಸ್ಯ=ಇಂದ್ರನ ಸುರಭೇಃ=ಕಾಮಧೇನುವಿನಿಂದ

**ಯಜ್ಞಾಭಿಷೇಕಃ ಕೃಷ್ಣಸ್ಯ ಸ್ತ್ರೀಭಿಃ ಕ್ರೀಡಾ ಚ ರಾತ್ರಿಷು ।**
**ಶಂಖಚೂಡಾಸ್ಯ ದುರ್ಬುದ್ಧೇರ್ವಧೋಽರಿಷ್ಟಸ್ಯ ಕೇಶಿನಃ ॥ ೩೨ ॥**

ಕೃಷ್ಣಸ್ಯ=ಶ್ರೀಕೃಷ್ಣನಿಗೆ ಯಜ್ಞಾಭಿಷೇಕಃ=ಇಂದ್ರಸುರಭಿ ಮಾಡಿದ ಯಜ್ಞಪೂಜಾ ಮತ್ತು ಅಭಿಷೇಕಃ=ಕ್ಷೀರಾಭಿಷೇಕವು ರಾತ್ರಿಷು=ರಾತ್ರಿಕಾಲದಲ್ಲಿ ಸ್ತ್ರೀಭಿಃ ಕ್ರೀಡನಂ=ಸ್ತ್ರೀಯರೊಡನೆ ಕ್ರೀಡಿಸಿದ್ದು (ರಾಸಕ್ರೀಡೆ) ದುರ್ಬುದ್ಧೇಃ=ದುಷ್ಟಬುದ್ಧಿಯುಳ್ಳವರಾದ ಶಂಖಚೂಡಸ್ಯ ಅರಿಷ್ಟಸ್ಯ ಕೇಶಿನಃ=ಶಂಖಚೂಡ, ಅರಿಷ್ಟ ಹಾಗು ಕೇಶಿ ಎಂಬ ಹೆಸರಿನ ಮೂರು ಅಸುರರ ವಧಃ=ಸಂಹಾರವು.

**ಅಕ್ರೂರಾಗಮನಂ ಪಶ್ಚಾತ್ ಪ್ರಸ್ಥಾನಂ ರಾಮಕೃಷ್ಣಯೋಃ ।**
**ವ್ರಜಸ್ತ್ರೀಣಾಂ ವಿಲಾಪಶ್ಚ ಮಥುರಾಲೋಕನಂ ತತಃ ॥ ೩೩ ॥**

ಅಕ್ರೂರಾಗಮನಂ=ಕಂಸನಿಂದ ಕಳಿಸಲ್ಪಟ್ಟ ಅಕ್ರೂರನು ರಾಮಕೃಷ್ಣರನ್ನೂ ಕರೆಯಲು ಬಂದುದು ಪಶ್ಚಾತ್=ನಂತರ ರಾಮಕೃಷ್ಣಯೋಃ ಪ್ರಸ್ಥಾನಂ=ರಾಮಕೃಷ್ಣರ ಪ್ರಯಾಣ ತತಃ=ನಂತರ ವ್ರಜಸ್ತ್ರೀಣಾಂ=ಗೋಪಸ್ತ್ರೀಯರ ವಿಲಾಪಃ=ರೋದನವು ತತಃ=ನಂತರ ಮಥಾರಾಲೋಕನಂ=ಮಥುರಾಪಟ್ಟಣವನ್ನು ನೋಡುವುದು.

**ಗಜಮುಷ್ಟಿಕಚಾಣೂರಕಂಸಾದೀನಾಂ ತಥಾ ವಧಃ ।**
**ಮೃತಸ್ಯಾನಯನಂ ಸೂನೋಃ ಪುನಃ ಸಾಂದಿಪನೇರ್ಗುರೋಃ ॥ ೩೪ ॥**

ಗಜಮುಷ್ಟಿಕಚಾಣೂರಕಂಸಾದೀನಾಂ=ಕುವಲಯಾಪೀಡ ಎಂಬ ಕಂಸನ ಆನೆ ಹಾಗೂ ಮುಷ್ಟಿಕ, ಚಾಣೂರ, ಮತ್ತು ಕಂಸಾದಿಗಳ ವಧಃ=ಸಂಹಾರವು ಸಾಂದೀಪನೇಃ ಗುರೋಃ=ಗುರುಗಳಾದ ಸಾಂದೀಪನಿಆಚಾರ್ಯರ ಮೃತಸ್ಯ=ಸತ್ತು ಹೋದ ಸೂನೋಃ=ಮಗುವಿನ ಪುನಃ ಆನಯನಂ=ಮತ್ತೆ ಕರೆತಂದುದು.

**ಮಥುರಾಯಾಂ ನಿವಸತಾ ಯದುಚಕ್ರಸ್ಯ ಯತ್‌ಪ್ರಿಯಮ್ ।**
**ಕೃತಮುದ್ಧವರಾಮಾಭ್ಯಾಂ ಯುತೇನ ಹರಿಣಾ ದ್ವಿಜಾಃ ॥ ೩೫ ॥**

ಹೇ ದ್ವಿಜಾಃ=ಶೌನಕಾದಿಗಳೇ ಮಥುರಾಯಾಂ=ಮಥುರೆಯಲ್ಲಿ ನಿವಸತಾ=ವಾಸಿಸುವ ಉದ್ಧವರಾಮಾಭ್ಯಾಂ ಯುತೇನ=ಬಲರಾಮ ಉದ್ದವರಿಂದ ಕೂಡಿದ ಹರಿಣಾ=ಶ್ರೀ ಕೃಷ್ಣನಿಂದ ಯದುಚಕ್ರಸ್ಯ=ಯಾದವಸಮೂಹಕ್ಕೆ ಯತ್‌ಪ್ರಿಯಂ=ಯಾವುದು ಪ್ರಿಯವೋ ತತ್ ಕೃತಂ=ಅದು ಮಾಡಲ್ಪಟ್ಟಿತು.

**ಜರಾಸಂಧಸಮಾನೀತಸೈನ್ಯಸ್ಯ ಬಹುಶೋ ವಧಃ ।**
**ಪಾತನಂ ಯವನೇಂದ್ರಸ್ಯ ಕುಶಸ್ಥಲ್ಯಾ ನಿವೇಶನಮ್ ॥ ೩೬ ॥**

ಜರಾಸಂಧಸಮಾನಿತಸೈನ್ಯಸ್ಯ=ಜರಾಸಂಧನಿಂದ ತರಲ್ಪಟ್ಟ ಸೈನ್ಯದ ಬಹುಶಃ= ಅನೇಕಬಾರಿ(೧೭-೧೮)ವಧಃ=ಸಂಹಾರವು ಯವನೇಂದ್ರಸ್ಯ ಪಾತನಂ=ಮುಚಕುಂದನಿಂದ ಕಾಲಯವನನನ್ನು ಬೂದಿ ಮಾಡಿ ಬೀಳಿಸಿದ್ದು ಕುಶಸ್ಥಲ್ಯಾ ನಿವೇಶನಂ=ದ್ವಾರಕೆಯಲ್ಲಿ ಗೃಹನಿರ್ಮಾಣ

**ಆದಾನಂ ಪಾರಿಜಾತಸ್ಯ ಸುಧರ್ಮಾಯಾಸುರಾಲಯಾತ್ ।**
**ರುಕ್ಮಿಣ್ಯಾಃ ಹರಣಂ ಯುದ್ಧೇ ಪ್ರಮಥ್ಯ ದ್ವಿಷತೋ ಹರೇಃ ॥ ೩೭ ॥**

ಸುರಾಲಯಾತ್=ಸ್ವರ್ಗದಿಂದ ಪಾರಿಜಾತಸ್ಯ=ಪಾರಿಜಾತವೃಕ್ಷದ ಹಾಗು ಸುಧರ್ಮಾಯಾಃ=ಸುಧರ್ಮಾ ಎಂಬ ಸಭೆಯ ಆದಾನಂ=ಅಂಶದಿಂದ ತರುವದು ಯುದ್ಧೇ=ಯುದ್ಧದಲ್ಲಿ ಹರೇಃ ದ್ವಿಷತಃ=ಶ್ರೀಕೃಷ್ಣನ ದ್ವೇಷ ಮಾಡುವವರನ್ನು ಪ್ರಮಥ್ಯ=ಹೊಡೆದು ರುಕ್ಮಿಣ್ಯಾಃ ಹರಣಂ=ರುಕ್ಮಿಣಿಯನ್ನು ತಂದದ್ದು.

**ಹರಸ್ಯ ಜೃಂಭಣಂ ಯುದ್ಧೇ ಬಾಣಸ್ಯ ಭುಜಕೃಂತನಮ್ ।**
**ಪ್ರಾಗ್ಜ್ಯೋತಿಷಪತಿಂ ಹತ್ವಾ ಕನ್ಯಾನಾಂ ಹರಣಂ ಚ ಯತ್ ॥ ೩೮ ॥**

ಯುದ್ಧೇ=ಯುದ್ಧದಲ್ಲಿ ಹರಸ್ಯ=ರುದ್ರನ ಜೃಂಭಣಂ=ಸೋಲಿಸುವದು ಬಾಣಸ್ಯ=ಬಾಣಾಸುರನ ಭುಜಕೃಂತನಂ=ಕೈಗಳನ್ನು ಕತ್ತರಿಸುವದು ಪ್ರಾಗ್ಜ್ಯೋತಿಷಪತಿಂ=ನರಕಾಸುರನನ್ನು ಹತ್ವಾ=ಕೊಂದು ಕನ್ಯಾನಾಂ ಹರಣಂ=ಹದಿನಾರು ಸಾವಿರ ಕನ್ಯೆಯರನ್ನು ತಂದುದು.

**ಚೈದ್ಯಪೌಂಡ್ರಕಶಾಲ್ವಾನಾಂ ದಂತವಕ್ರಸ್ಯ ದುರ್ಮತೇಃ ।**
**ಶಂಬರೋ ದ್ವಿವಿಧಃ ಪೀಠೋ ಮುರಃ ಪಂಚಜನಾದಯಃ ॥ ೩೯॥**

ಚೈದ್ಯಪೌಂಡ್ರಕಶಾಲ್ವಾನಾಂ=ಚೈದ್ಯ-ಶಿಶುಪಾಲ, ಪೌಂಡ್ರಕ-ಪೌಂಡ್ರಕವಾಸುದೇವ, ಶಾಲ್ವಾನಾಂ-ಶಾಲ್ವರ ದುರ್ಮತೇಃ=ದುರ್ಬುದ್ಧಿಯುಳ್ಳ ದಂತವಕ್ರಸ್ಯ=ದಂತವಕ್ರನ ಶಂಬರಃ=ಶಂಬರಾಸುರನು ದ್ವಿವಿಧಃ ಪೀಠಃ ಮುರಃ ಪಂಚಜನಾದಯಃ= ದ್ವಿವಿಧ, ಪೀಠ, ಮುರ, ಪಂಚಜನ ಮೊದಲಾದ ದೈತ್ಯರು.

**ಮಾಹಾತ್ಮ್ಯಂ ಚ ವಧಸ್ತೇಷಾಂ ವಾರಾಣಸ್ಯಾಶ್ಚ ದಾಹನಮ್ ।**
**ಭಾರಾವತರಣಂ ಭೂಮೇರ್ನಿಮಿತ್ತೀಕೃತ್ಯ ಪಾಂಡವಾನ್ ॥ ೪೦ ॥**

ತೇಷಾಂ ವಧಃ=ಹಿಂದಿನ ಶ್ಲೋಕದಲ್ಲಿ ಹೇಳಿದವರ ವಧಃ=ಸಂಹಾರವು ವಾರಾಣಸ್ಯಾಃ ದಾಹನಂ=ಸುದರ್ಶನಾಗ್ನಿಯಿಂದ ಕಾಶಿಯನ್ನು ಸುಡುವದು ಮಾಹಾತ್ಮ್ಯಂ ಚ=ಈ ಮಹಿಮೆಯು ದಶಮಸ್ಕಂಧದಲ್ಲಿ ಉಕ್ತವಾಗಿದೆ. ದಶಮ ಸ್ಕಂಧದ ಸಂಗ್ರಹ ಸಂಪೂರ್ಣ.

*ಹನ್ನೊಂದನೆಯ ಸ್ಕಂಧದ ಸಂಗ್ರಹ -*

ಏಕಾದಶಸ್ಕಂಧದಲ್ಲಿ ಪಾಂಡವಾನ್=ಪಾಂಡವರನ್ನು ನಿಮಿತ್ತಿಕೃತ್ಯ=ಕಾರಣವನ್ನಾಗಿ ಮಾಡಿ ಭೂಮೇಃ=ಭೂಮಿಯ ಭಾರಾವತರಣಂ=ಭಾರವನ್ನು ಇಳಿಸಿದ್ದು

**ವಿಪ್ರಶಾಪಾಪದೇಶೇನ ಸಂಹಾರಃ ಸ್ವಕುಲಸ್ಯ ಚ ।**
**ವಸುದೇವಸ್ಯ ಸಂವಾದೋ ನಾರದೇನ ಸುರರ್ಷಿಣಾ ॥ ೪೧ ॥**

ವಿಪ್ರಶಾಪಾಪದೇಶೇನ=ಸಾಂಬಾದಿಗಳಿಂದ ವಂಚಿತರಾದ ಬ್ರಾಹ್ಮಣರ ಶಾಪದ ನೆಪದಿಂದ(ತನ್ನ ಇಚ್ಛೆಯೇ ಮುಖ್ಯ)ಸ್ವಕುಲಸ್ಯ=ತಮ್ಮ ಯಾದವಕುಲದ ಸಂಹಾರಃ= ನಾಶವು ಸುರರ್ಷಿಣಾ ನಾರದೇನ=ದೇವರ್ಷಿಗಳಾದ ನಾರದರ ವಸುದೇವಸ್ಯ ಸಂವಾದಃ=ವಸುದೇವನ ಸಂಭಾಷಣೆ

**ಉದ್ಧವಸ್ಯ ಚ ಸಂವಾದೋ ವಾಸುದೇವಸ್ಯ ಚಾದ್ಭುತಃ ।**
**ಯತ್ರಾತ್ಮವಿದ್ಯಾಹ್ಯಖಿಲಾಃ ಪ್ರೋಕ್ತಾಧರ್ಮವಿನಿರ್ಣಯಾಃ ॥**
**ತತೋ ಮರ್ತ್ಯಪರಿತ್ಯಾಗಃ ಆತ್ಮಯೋಗಾನುಭಾವತಃ ॥ ೪೨ ॥**

ಉದ್ಧವಸ್ಯ=ಉದ್ಧವನಿಗೂ ಚ=ಮತ್ತು ವಾಸುದೇವಸ್ಯ=ವಾಸುದೇವನಿಗೂ ಅದ್ಭುತಃ=ಆಶ್ಚರ್ಯಕರವಾದ ಸಂವಾದಃ=ಸಂಭಾಷಣವು ಯತ್ರ=ಯಾವ ಉದ್ಧವ ವಾಸುದೇವ ಸಂವಾದದಲ್ಲಿ ಅಖಿಲಾಃ=ಎಲ್ಲ ಆತ್ಮವಿದ್ಯಾಃ=ಪರಮಾತ್ಮ ವಿಷಯಕವಾದ ವಿದ್ಯೆಗಳು ಮತ್ತು ಧರ್ಮನಿರ್ಣಯಾಃ=ವರ್ಣಾಶ್ರಮಧರ್ಮಗಳ ನಿರ್ಣಯಗಳು ಪ್ರೋಕ್ತಾ=ಹೇಳಲ್ಪಟ್ಟಿವೆ ಆತ್ಮಯೋಗಾನುಭಾವತಃ=ತನ್ನ ಯೋಗಸಾಮರ್ಥ್ಯದಿಂದ ಮರ್ತ್ಯಪರಿತ್ಯಾಗಃ=ಮನುಷ್ಯಲೋಕವನ್ನು ಬಿಡುವುದು. ಇಷ್ಟು ಹನ್ನೊಂದನೇಯ ಸ್ಕಂಧ ಸಂಗ್ರಹ.

*ಹನ್ನೆರಡನೆಯ ಸ್ಕಂಧದ ಸಂಗ್ರಹ -*

**ಯುಗಲಕ್ಷಣವೃತ್ತಿಶ್ಚ ಕಲೌ ನೃಣಾಮುಪಪ್ಲವಃ ।**
**ಚತುರ್ವಿಧಶ್ಚ ಪ್ರಲಯ ಉತ್ಪತ್ತಿಸ್ತ್ರಿವಿಧಾ ತಥಾ ॥ ೪೩ ॥**

ಕಲೌ=ಕಲಿಯುಗದಲ್ಲಿ ನೃಣಾಂ=ಜನರಿಗೆ ಯುಗಲಕ್ಷಣವೃತ್ತಿಃ=ಯುಗಾನುಸಾರವಾದ ವರ್ತನೆಯು ಇರುವುದು ಉಪಪ್ಲವಃ=ನಾಶವು ಚತುರ್ವಿಧಃ ಪ್ರಲಯಃ=ನಿತ್ಯ, ನೈಮಿತ್ತಿಕ, ಪ್ರಾಕೃತಿಕ ಆತ್ಯಂತಿಕ ಎಂದು ನಾಲ್ಕು ವಿಧ ಪ್ರಲಯವು ತ್ರಿವಿಧಉತ್ಪತ್ತಿಃ= ಪ್ರಾಕೃತಿಕ ನೈಮಿತ್ತಿಕ ನಿತ್ಯಾ ಹೀಗೆ ಮೂರು ವಿಧ ಉತ್ಪತ್ತಿಯು.

**ದೇಹತ್ಯಾಗಶ್ಚ ರಾಜರ್ಷೇರ್ವಿಷ್ಣುದತ್ತಸ್ಯ ಧೀಮತಃ ।**
**ಶಾಖಾಪ್ರಣಯನಮೃಷೇರ್ಮಾಕಂಡೇಯಸ್ಯ ಸತ್ಕಥಾಃ ॥ ೪೪ ॥**

ಧೀಮತಃ=ಜ್ಞಾನಿಯಾದ ರಾಜರ್ಷೇಃ=ರಾಜರ್ಷಿಯಾದ ವಿಷ್ಣುದತ್ತಸ್ಯ=ಪರೀಕ್ಷಿತನ ದೇಹತ್ಯಾಗಃ=ಮರಣವು ಋಷೇಃ ಮಾರ್ಕಂಡೇಯಸ್ಯ=ಮಾರ್ಕಂಡೇಯ ಋಷಿಯ ಶಾಖಾಪ್ರಣಯನಂ=ರುದ್ರ ದೇವರ ವರದಿಂದ ವೇದಗಳ ಶಾಖಾನಿರ್ಮಾಣ ಅಂದರೆ ಅದಕ್ಕನುಗುಣವಾದ ಪುರಾಣಗಳ ರಚನೆ

**ಮಹಾಪುರುಷವಿನ್ಯಾಸಃ ಸೂರ್ಯಸ್ಯ ಜಗದಾತ್ಮನಃ ।**
**ಇತಿ ಚೋಕ್ತಂ ದ್ವಿಜಶ್ರೇಷ್ಠಾಯತ್ಪೃಷ್ಟೋಽಹಮಿಹಾಸ್ಮಿ ವಃ ॥ ೪೫ ॥**

ಹೇ ದ್ವಿಜಶ್ರೇಷ್ಠಾಃ=ಬ್ರಾಹ್ಮಣಶ್ರೇಷ್ಠರೇ ಅಹಂ=ನಾನು ಯತ್ಪೃಷ್ಟೋಽಹಮಸ್ಮಿ=ನಿಮ್ಮಿಂದ ಪ್ರಶ್ನಿಸಲ್ಪಟ್ಟಿರುವೆನೋ ಅದೆಲ್ಲವನ್ನು ವಃ=ನಿಮಗೆ ಮಹಾಪುರುಷಸ್ಯ=ಪರಮಾತ್ಮನ ವಿನ್ಯಾಸಃ=ಅಂಗೋಪಾಂಗಸ್ಥಿತಿವಿಶೇಷ ಮತ್ತು ಜಗದಾತ್ಮನಃ ಸೂರ್ಯಸ್ಯ=ಜಗದ್ವ್ಯಾಪ್ತನಾದ ಸೂರ್ಯನ ಸ್ಥಿತಿಯನ್ನೂ ಇತಿ=ಇಲ್ಲಿಯವರೆಗೆ ಉಕ್ತಂ=ಹೇಳಿರುತ್ತೇನೆ.

**ಲೀಲಾವತಾರಕರ್ಮಾಣಿ ಕೀರ್ತಿತಾನೀಹ ಸರ್ವಶಃ ।**
**ಪತಿತಃ ಸ್ಖಲಿತೋ ವಾಽರ್ತಃ ಕ್ಷುತ್ವಾ ವಾ ವಿವಶೋಽಬ್ರುವನ್ ॥**
**ಹರಯೇ ನಮ ಇತ್ಯುಚ್ಚೈರ್ಮುಚ್ಯತೇ ಸರ್ವಪಾತಕಾತ್ ॥ ೪೬ ॥**

ಇಹ=ಈ ಭಾಗವತದಲ್ಲಿ ಸರ್ವಶಃ=ಎಲ್ಲ ಕರ್ಮಾಣಿ=ಲೀಲಾರೂಪವಾದ ಅವತಾರಗಳಲ್ಲಿ ಮಾಡಿದ ಕ್ರಿಯೆಗಳು ಕೀರ್ತಿತಾನಿ=ಹೇಳಲ್ಪಟ್ಟಿವೆ. ಪತಿತಃ=ಪತಿತನು ಸ್ಖಲಿತಃ=ದೋಷಮಾಡಿದವನು ಆರ್ತಃ=ದುಃಖಿತನು ಕ್ಷುತ್ವಾ=(ಕ್ಷತಂ ಕೃತ್ವಾ) ಹಸಿದವನಾಗಿ ವಿವಶಃ=ಪರವಶನಾಗಿ ಹರಯೇ ನಮಃ ಇತಿ ಉಚ್ಚೈಃ ಬ್ರುವನ್=ಹರಯೇ ನಮಃ ಎಂದು ಗಟ್ಟಿಯಾಗಿ ಹೇಳಿದರೆ ಸರ್ವಪಾತಕಾತ್ ಮುಚ್ಯತೇ=ಎಲ್ಲ ಪಾಪಗಳಿಂದ ಮುಕ್ತನಾಗುವನು.

**ವಿಶೇಷ-** ಕೀರ್ತೀರ್ತಾನೀಹ ಸರ್ವಶಃ-ಕೀರ್ತಿತಃ ಅನೀಹಃ=ನಿಷ್ಕಾಮವಾಗಿ ಹೇಳುವವನು ಸರ್ವಶಃ ತನಗೆ ಯೋಗ್ಯವಾದ ಎಲ್ಲ ಸುಖವುಳ್ಳವನಾಗುವನು ಏವಂ=ಈ ರೀತಿ ಉಚ್ಚೈಃ=ಉತ್ತಮರಿಂದ ಪ್ರೋಚ್ಯತೇ=ಹೇಳಲ್ಪಡುವುದು ಹೀಗೂ ಅರ್ಥ.

**ಸಂಕೀರ್ತ್ಯಮಾನೋ ಭಗವಾನನಂತಃ ।**
**ಶ್ರುತಾನುಭಾವೋ ವ್ಯಸನಂ ಹಿ ಪುಂಸಾಂ ॥**
**ಪ್ರವಿಶ್ಯ ಚಿತ್ತಂ ವಿಧುನೋತ್ಯಶೇಷಮ್ ।**
**ಯಥಾ ತಮೋಽರ್ಕೋಽಭ್ರಮಿವಾತಿವಾತಃ** ॥ ೪೭ ॥

ಅನಂತಃ=ದೇಶತಃ ಕಾಲತಃ ಗುಣತಃ ಅಂತರಹಿತನಾದ(ಅಂದರೆ ವ್ಯಾಪ್ತನಾದ, ನಿತ್ಯನಾದ, ಗುಣ ಪೂರ್ಣನಾದ,) ಭಗವಾನ್=ಶ್ರೀಹರಿಯು ಸಂಕೀರ್ತ್ಯಮಾನಃ= ಸ್ತುತಿಸಲ್ಪಟ್ಟವನಾಗಿ ಶ್ರುತಾನುಭಾವಃ=ಭಕ್ತರಿಂದ ಕೇಳಲ್ಪಟ್ಟ ಮಾಹಾತ್ಮ್ಯ ಉಳ್ಳವನಾಗಿ ಪುಂಸಾಂ=ಜನರ ಚಿತ್ತಂ=ಮನಸಿನ್ನು ಪ್ರವಿಶ್ಯ=ಪ್ರವೇಶಿಸಿ ಯಥಾ=ಹೇಗೆ ಅರ್ಕಃ=ಸೂರ್ಯನು ತಮಃ=ಕತ್ತಲೆಯನ್ನು ಅತಿವಾತಃ=ಬಿರುಗಾಳಿಯು ಅಭ್ರಂ ಇವ=ಮೋಡಗಳನ್ನು ಪರಿಹರಿಸುವಂತೆ ಅಶೇಷಂ=ಎಲ್ಲ ವ್ಯಸನಂ=ದುಃಖವನ್ನು ವಿಧುನೋತಿ=ಪರಿಹರಿಸುವನು.

**ವಿಶೇಷ-** ಇಲ್ಲಿ ದುಃಖ ಮುಂತಾದ ಪದವನ್ನಿಡದೇ ವ್ಯಸನ ಎಂಬ ಪದವನ್ನು ಇಟ್ಟಿದ್ದರಿಂದ ವಿಗತಂ ಅಸನಂ ಏತದಿತರಸ್ಮಾತ್ ಪರಾಕೃತಿಃ ಯಸ್ಯ ತಾದೃಗಪಿ ವ್ಯಸನಂ ಅಂದರೆ ಶ್ರೀಹರಿಯಿಂದ ಭಿನ್ನರಾದವರಿಂದ ನಿವಾರಿಸಲಾಗದ ದುಃಖವನ್ನೂ ಎಂಬ ಅರ್ಥವನ್ನೂ ಈ ಪದದಿಂದ ಹೇಳುವ ಅಭಿಪ್ರಾಯ ಗ್ರಂಥಕಾರರಿಗೆ ಇದೆ ಎಂದು ತಿಳಿಯುವುದು.

ಎಲ್ಲ ದುಃಖವನ್ನೂ ಕಳೆಯುವವನು ಎಂಬಲ್ಲಿ ದೃಷ್ಟಾಂತ ಸೂರ್ಯನು ಕತ್ತಲೆ ಕಳೆದಂತೆ ಎಂಬುದು ಮೊದಲು ದೃಷ್ಟಾಂತ. ಬಿರುಗಾಳಿಯು ನೀರು ತುಂಬಿದ ಮೋಡಗಳನ್ನು ಹೊಡೆದೋಡಿಸುತ್ತದೆ ಎಂಬುದು ಎರಡನೆಯ ದೃಷ್ಟಾಂತ. ಮೊದಲನೆಯ ದೃಷ್ಟಾಂತದಲ್ಲಿ ಕತ್ತಲೆಯನ್ನು ಕಳೆಯುವ ಸೂರ್ಯನಂತೆ ಎನ್ನುವ ಮೂಲಕ ದುಃಖವನ್ನು ಕೊಡುವವನಲ್ಲ ಶ್ರೀಹರಿ ಎಂದು ತೋರುವುದು ಕಾರಣ ಅರುಚಿಯನ್ನು ಕಂಡು ಘಟಕ ವಿಘಟಕವಾದ ಎರಡನೆಯ ದೃಷ್ಟಾಂತದಿಂದ ಸೂಚಿಸಿರುವರು. ಗಾಳಿಯು ಎಲ್ಲೆಲ್ಲೋ ಇರುವ ಮೋಡಗಳನ್ನು ಒಂದು ಕಡೆ ಒಟ್ಟು ಗುಡಿಸುವುದು. ಅದೇ ಗಾಳಿಯೇ ಮೋಡವನ್ನು ಚದುರಿಸುವುದು. ಹಾಗೆ ಶ್ರೀಹರಿಯೇ ದುಃಖ ಕೊಡುವವನು ಅವನೇ ಪರಿಹರಿಸುವನು. ಹಾಗಾದರೆ ಎರಡನೆಯ ಗಾಳಿಯ ದೃಷ್ಟಾಂತವೇ ಸಾಕು ಮೊದಲನೆಯದು ಬೇಡ ಎಂದರೆ ಗಾಳಿಯ ದೃಷ್ಟಾಂತದ ಪ್ರಕಾರ ಮತ್ತೆ ದುಃಖ ಬರುವುದಿಲ್ಲ ಸ್ವರೂಪ ಸುಖವೇ ಆಗಿದೆ ಎಂದು ತೋರುವುದು. ಈ ಸಂಸಾರದಲ್ಲಿ-

ಯಾದರೂ ಹಾಗಿಲ್ಲ. ಮತ್ತೆ ದುಃಖ ಬರುವುದು. ಕಾರಣ ಸೂರ್ಯ ದೃಷ್ಟಾಂತವೂ ಬೇಕು.

ಕೆಲವರು ಸೂರ್ಯನು ಗುಡ್ಡದ ಗುಹೆಯಲ್ಲಿರುವ ಕತ್ತಲೆಯನ್ನು ಕಳಿಯುವುದಿಲ್ಲ ಆದ್ದರಿಂದ ಮೊದಲಿನ ದೃಷ್ಟಾಂತ ಅಷ್ಟು ಸರಿಯಲ್ಲ ಎನ್ನುವದಕ್ಕಾಗಿ ಎರಡನೇಯ ದೃಷ್ಟಾಂತ ಹೇಳಿರುವರು ಎಂದು ಅವತರಣಿಕೆ ಕೊಡುವರು. ಗಾಳಿಯು ಮೋಡಗಳಿಗೆ ವಿಘಟಕವಷ್ಟೇ ಎಂದು ತಿಳಿದಿರುವರು ಎಂದು ತಿಳಿಯಬೇಕು.(ಘಟಕವೆಂದು ತಿಳಿದಿಲ್ಲ) ಮತ್ತು (ಪ್ರವಿಶ್ಯ ಚಿತ್ತಂ ವಿಧುನೋತಿ)ಎಂದು ಹೇಳಿದ್ದರಿಂದ ಯಾರ ಮೇಲೆ ಪ್ರಸನ್ನನಾಗಿ ಪ್ರವೇಶ ಮಾಡುವನು ಅವರ ದುಃಖ ಕಳೆಯುವನು ಎಂದು ತಿಳಿಯುವುದು ಇದರಿಂದ ದೃಷ್ಟಾಂತದಲ್ಲಿಯೂ ಸೂರ್ಯನ ಕಿರಣ ಸಂಬಂಧ ಎಲ್ಲಿ ಆಗುವುದೋ ಅಲ್ಲಿಯೇ ಕತ್ತಲೆ ಹೋಗುವುದು ಆದ್ದರಿಂದ ಗುಹೆಯ ಕತ್ತಲೆ ಕಳೆಯುವುದಿಲ್ಲ ಎಂಬ ಅಸಂತೋಷದಿಂದ ದೃಷ್ಟಾಂತಾಂತರ ಎಂದು ಹೇಳಿದ್ದು ಸಂತೋಷ ಜನಕವಲ್ಲ .(ಸಮಂಜಸವಲ್ಲ) ಮತ್ತು ಭಗವಂತನು ಭಕ್ತ ಅಭಕ್ತ ಸಾಧಾರಣವಾಗಿ ದುಃಖನಾಶ ಮಾಡುತ್ತಿದ್ದರೆ(ಕಥಂಚಿತ್ ಸೂರ್ಯ ದೃಷ್ಟಾಂತ ಹೊಂದಿಸಬಹುದು) ಹಾಗೆ ಮಾಡುವುದಿಲ್ಲ ಕಾರಣ ಭಕ್ತರ ಅಶೇಷದುಃಖ ಕಳಿಯುವನು ಎಂದು ಹೇಳಬೇಕೆ ಹೊರತು ಅಶೇಷರ ದುಃಖವೆಂದು ಹೇಳಬಾರದು. ಹಾಗೆ ಹೇಳಿದಲ್ಲಿ ಹತ್ತನೇಯ ಸ್ಕಂಧ ಉತ್ತರಾರ್ಧದಲ್ಲಿ ಹೀಗೆಹೇಳಿದೆ 'ವಾಯುರ್ಯಥಾ ಘನಾನೀಕಂ ತೃಣತೂಲ ರಜಾಂಸಿ ಚ ಸಂಯೋಜ್ಯ ಕ್ಷಿಪತಿ ಭೂಯಸ್ತಥಾ ಭೂತಾನಿ ಭೂತಕೃತ್' ಎಂದು ಮತ್ತು 'ಬಂಧಕೋ ಭವಪಾಶೇನ ಭವ ಪಾಶಾಚ್ಚ ಮೋಚಕಃ' ಎಂದು ಪ್ರಮಾಣವಿದೆ ಋಗ್ಭಾಷ್ಯದಲ್ಲಿ 'ಅರ್ಕಮರ್ಕಿಣ' ಎಂಬ ಮಂತ್ರ ವ್ಯಾಖ್ಯಾನ ಮಾಡುವಾಗ ಅಲಂ ಕಂ ಯಸ್ಯ ಸಃ ಅರ್ಕಃ ಎಂದು ಹೇಳಿದ್ದರಿಂದ ಪೂರ್ಣ ಸುಖವುಳ್ಳವನು ಎಂದರ್ಥ (ರಲಯೊರಭೇದ) ಹನ್ನೊಂದನೆಯ ಸ್ಕಂದ ತಾತ್ಪರ್ಯದಲ್ಲಿ 'ಅಭ್ರಂ ಭೂತಾಭಿಭರಣಾತ್' ಎಂದು ಹೇಳಿದ್ದರಿಂದ ಭೂತಾಧಾರಕನಾದ ಹರಿಗೆ ಇವೆರಡು ವಿಶೇಷಣವೆಂದು ತಿಳಿಯಬಹುದು.

**ಮೇಲಿನ ಮಾತುಗಳ ಒಟ್ಟು ಅಭಿಪ್ರಾಯ**

ಮೇಲೆ ಹೇಳಿದ ವಿಚಾರವನ್ನು ಸಂಕ್ಷಿಪ್ತವಾಗಿ ತಿಳಿಯುವದಾದರೆ ಸೂರ್ಯನು ತನ್ನ ಕಿರಣಗಳ ಸಂಸ್ಪರ್ಶವಾದಲ್ಲಿ ಸಂಪೂರ್ಣ ಕತ್ತಲೆ ಕಳೆಯುವಂತೆ ಶ್ರೀಹರಿಯು ತನ್ನ ಪ್ರಸಾದವೆಂಬ ಕಿರಣಗಳ ಸಂಬಂಧದಿಂದ ಭಕ್ತರ ದುಃಖ ನಾಶ ಮಾಡುವನು. ಆದಗೆ

ಕತ್ತಲೆ ಕೊಡುವುದಿಲ್ಲ. ಸೂರ್ಯ ತಾನಾಗಿ ಇದ್ದ ಕತ್ತಲೆ ಕಳೆಯುವನಷ್ಟೇ ಶ್ರೀಹರಿ ಹಾಗಲ್ಲ. ದುಃಖ ಕೊಡುವವನು ಕಳೆಯುವನು ಒಬ್ಬನೆ ಎನ್ನಲು ಗಾಳಿಯು ಹೇಗೆ ಮೋಡಗಳನ್ನು ಒಟ್ಟುಗೂಡಿಸಿ ಓಡಿಸುವಂತೆ ಎಂಬ ದೃಷ್ಟಾಂತ. ಸಂಸಾರಾವಸ್ಥೆಯಲ್ಲಿ ಪುನ ದುಃಖ ಬರುವುದು ಎಂದು ತಿಳಿಸಲು ಸೂರ್ಯ ದೃಷ್ಟಾಂತ ಅವಶ್ಯಕ ಎಂದು ತಿಳಿಯಬೇಕು.

**ಮೃಷಾಗಿರಸ್ತಾಃ ಹ್ಯಸತೀರಸತ್ಕಥಾ**
**ನ ಕಥ್ಯತೇ ಯದ್‌ಭಗವಾನಧೋಕ್ಷಜಃ ।**
**ತದೇವ ಸತ್ಯಂ ತದು ಹೈವ ಮಂಗಲಂ**
**ತದೇವ ಪುಣ್ಯಂ ಭಗವದ್ಗುಣೋದಯಮ್ ॥ ೪೮॥**

ಯತ್=ಯಾವ ಮಾತುಗಳಿಂದ (ಮಾತುಗಳಲ್ಲಿ) ಭಗವಾನ್=ಷಡ್ಗುಣ್ಯೈಶ್ವರ್ಯಶಾಲಿಯಾದ ಅಧೋಕ್ಷಜಃ=ಶ್ರೀಹರಿಯು ನ ಕಥ್ಯತೇ=ಪ್ರತಿಪಾದಿಸಲ್ಪಡುವದಿಲ್ಲವೋ ತಾಃ ಗಿರಃ=ಆ ಮಾತುಗಳು ಅಸತೀಃ=ಅಮಂಗಲವಾದವು. ಅಸತ್ಕಥಾ=ಅಮಂಗಲ ಕಥಾಗಳುಳ್ಳವುಗಳು ಆದ್ದರಿಂದಲೇ ಅಮಂಗಲಗಳು ಮೃಷಾ=ನಿಷ್ಫಲವಾದವು ಭಗವದ್ಗುಣೋದಯಂ= ಭಗವಂತನ ಗುಣಗಳ ಆವಿರ್ಭಾವ ಯಾವ ವಾಕ್ಯದಲ್ಲಿದೆಯೋ ತದೇವ=ಅದುವೇ ಸತ್ಯಂ=ಹೇಳಲ್ಪಟ್ಟ ಯೋಗ್ಯವಾದ ಫಲಪ್ರದವು. ಆದ್ದರಿಂದ ಮಂಗಲವು ಉಹ ವೈ=ನಿಶ್ಚಯವು ತದೇವ ಪುಣ್ಯಂ=ಅದುವೇ ಪುಣ್ಯಕರವು.

**ತದೇವ ಪುಣ್ಯಂ ರುಚಿರಂ ನವಂ ನವಂ**
**ತದೇವ ಶಶ್ವನ್ಮನಸೋ ಮಹೋತ್ಸವಮ್ ।**
**ತದೇವ ಶೋಕಾರ್ಣವಶೋಷಣಂ ನೃಣಾಂ**
**ಯತ್ರೋತ್ತಮಶ್ಲೋಕಯಶೋಽನುಗೀಯತೇ ॥ ೪೯ ॥**

ಯತ್ರ=ಎಲ್ಲಿ ಉತ್ತಮಶ್ಲೋಕಯಶಃ=ಬ್ರಹ್ಮಾದಿಗಳಿಂದ ಕೀರ್ತ್ಯವಾದ ಕೀರ್ತಿಯುಳ್ಳ ಭಗವಂತನು ಅನುಗೀಯತೇ=ಗಾನ ಮಾಡಲ್ಪಡುವನೋ ತದೇವ=ಅದೇ ಪುಣ್ಯಂ= ಪುಣ್ಯಪ್ರದವು ರುಚಿರಂ=ಮನೋಹರವಾದುದು ನವಂ ನವಂ= ನಿತ್ಯನೂತನವಾದುದು ಮನಸಃ=ಮನಸ್ಸಿಗೆ ಶಶ್ವತ್=ನಿತ್ಯವಾದ ಮಹೋತ್ಸವಂ=ಬಹಳ ಸಂತೋಷ ಜನಕವು ನೃಣಾಂ=ಅಧಿಕಾರಿಗಳಿಗೆ ಶೋಕಾರ್ಣವಶೋಷಣಂ=ದುಃಖ ಸಮುದ್ರವನ್ನು ಒಣಗಿಸುವುದು.

*ಭಗವತ್ಕಥೆಯೇ ಪರಮಹಂಸರಾದ ಸಾಧುಗಳಿಂದ ಸೇವ್ಯವಾದ ಮಾನಸಸರೋವರವು*

**ನ ಯದ್ವಚಶ್ಚಿತ್ರಪದಂ ಹರೇರ್ಯಶೋ**
**ಜಗತ್ಪವಿತ್ರಂ ಯದಿ ಕರ್ಹಿಚಿದ್ವದೇತ್ ।**
**ತದ್ ಧ್ವಾಂಕ್ಷತೀರ್ಥಂ ನತು ಹಂಸಸೇವಿತಂ**
**ಯತ್ರಾಚ್ಯುತಸ್ತತ್ರ ಹಿ ಸಾಧವೋಽಮಲಾಃ ॥ ೫೦ ॥**

ಯದ್ವಚಃ=ಯಾವ ವಾಕ್ಯವು ಜಗತ್ಪವಿತ್ರಂ=ಜಗತ್ತಿಗೆ ಪಾವಿತ್ರವನ್ನುಂಟು ಮಾಡುವ ಹರೇಃಯಶಃ=ಪರಮಾತ್ಮನ ಕೀರ್ತಿಯನ್ನು ಕರ್ಹಿಚಿತ್=ಒಮ್ಮೆಯಾದರೂ ಯದಿ ನ ವದೇತ್=ಹೇಳದಿದ್ದಲ್ಲಿ ಚಿತ್ರಪದಂ=ಪ್ರಾಸಾನುಪ್ರಾಸ ಅಲಂಕಾರಾದಿಗಳಿಂದ ಕೂಡಿದ ಪದಗಳಿಂದ ಕೂಡಿದ್ದರೂ ತತ್=ಅದು ಧ್ವಾಂಕ್ಷತೀರ್ಥಂ=ಕಾಗಿಗಳು ಮುಳಗುವ ನೀರಿನ ಗುಂಡಿ ಇದ್ದಂತೆ (ಅದು ಹೇಗೆ ಸೇವನೀಯವಲ್ಲವೋ ಆದರಂತೆ ಸೇವ್ಯವಲ್ಲ )ಮತ್ತು ನ ತು ಹಂಸಸೇವಿತಂ=ಹಂಸಗಳು ಸೇವಿಸುವ ಮಾನಸ ಸರೋವರಕ್ಕೆ ಸಮಾನವಲ್ಲ ಸಜ್ಜನರಿಂದ ಸೇವಿತವಲ್ಲ ಯತ್ರ=ಎಲ್ಲಿ ಅಚ್ಯುತಃ=ಹರಿ ಇರುವನು ಯಾವುದು ಹರಿಯ ಕಥಾ ಆಗಿದೆಯೋ ತತ್ರ=ಅಲ್ಲಿ ಅಮಲಾಃ=ನಿರ್ದುಷ್ಟರಾದ ಸಾಧವಃ=ಸಜ್ಜನರು ಇರುವರು

**ಸವಾಗ್ವಿಸರ್ಗೋ ಜನತಾಘವಿಪ್ಲವೋ**
**ಯಸ್ಮಿನ್ ಪ್ರತಿಶ್ಲೋಕಮಬದ್ಧವತ್ಯಪಿ ॥**
**ನಾಮಾನ್ಯನಂತಸ್ಯ ಯಶೋಽಂಕಿತಾನಿ**
**ಯತ್ ಶೃಣ್ವಂತಿ ಗಾಯಂತಿ ಗೃಣಂತಿ ಸಾಧವಃ ॥ ೫೧ ॥**

ಅನಂತಸ್ಯ=ಶ್ರೀಹರಿಯ ಯಶೋಽಂಕಿತಾನಿ ನಾಮಾನಿ=ಕೀರ್ತಿಯನ್ನು ಪ್ರತಿಪಾದಿಸುವ ಪದ್ಯಗಳನ್ನು ಯತ್=ಯಾವ ಕಾರಣ ಸಾಧವಃ=ಸಜ್ಜನರು ಶೃಣ್ವಂತಿ=ಕೇಳುವರು ಗಾಯಂತಿ=ಹಾಡುವರು ಗೃಣಂತಿ=ಪರರಿಗೆ ಹೇಳುವರು ತಾನಿ=ಆ ಪದ್ಯಗಳು ಯಸ್ಮಿನ್=ಯಾವುದರಲ್ಲಿ ಪ್ರತಿಶ್ಲೋಕಂ=ಪ್ರತಿಯೊಂದು ಶ್ಲೋಕದಲ್ಲಿಯೂ ಅಬದ್ಧವತ್ಯಪಿ=ಶಬ್ದ ಶುದ್ಧಿ ಇಲ್ಲದಿದ್ದರೂ ಸಃ ವಾಗ್ವಿಸರ್ಗಃ=ಆ ವಾಕ್ಯವು ಅಪರಿಮಿತವಾದ ಅರ್ಥ ಕೊಡುವದು ಮತ್ತು ಜನತಾಘವಿಪ್ಲವಃ=ಜನರ ಪಾಪನಾಶಕವೂ.

ಭಗವದ್ಭಕ್ತಿಯ ಅವಶ್ಯಕತೆಯೇ ಇಲ್ಲ ಕಾರಣ ಅವನ ಮಹಿಮೆಯ ವರ್ಣನೆಯೂ ಆವಶ್ಯಕವಲ್ಲ. ಭಕ್ತಿಯಿಲ್ಲದಿದ್ದರೂ ಮೋಕ್ಷ ಸಾಧನವೆಂದೆ ಪ್ರಸಿದ್ಧವಾದ ಶ್ರುತ್ಯಾದಿಗಳಲ್ಲಿ ಹೇಳಿದ ನಿವೃತ್ತ ಕರ್ಮ ಭಗವದ್‌ಜ್ಞಾನಗಳಿಂದಲೇ ಮೋಕ್ಷ ಆಗುವುದರಿಂದ

ಸಂತೋಷಿಸಬೇಕು ಎಂದು ಶಂಕಿಸಿ ಭಕ್ತಿಯಿಲ್ಲದಿದ್ದರೆ ಜ್ಞಾನ ಕರ್ಮಗಳಿಂದ ಮೋಕ್ಷವಾಗಲಾರದು ಎಂದು ಹೇಳುವರು.

**ನೈಷ್ಕರ್ಮ್ಯಮಪ್ಯಚ್ಯುತ ಭಾವವರ್ಜಿತಂ**
**ನ ಶೋಭತೇ ಜ್ಞಾನ ಮಲಂ ನಿರಂಜನಮ್ ।**
**ಕುತಃ ಪುನಃ ಶಶ್ವದಭದ್ರಮೀಶ್ವರೇ**
**ನ ಚಾರ್ಪಿತಂ ಕರ್ಮ ಯದಪ್ಯಕಾರಣಮ್ ॥ ೫೨ ॥**

ಈ ಶ್ಲೋಕಕ್ಕೆ ಪ್ರಥಮ ಸ್ಕಂಧದ ಐದನೆಯ ಅಧ್ಯಾಯದ ೧೨ನೆಯ ತಾತ್ಪರ್ಯಕ್ಕನುಗುಣವಾಗಿ ಅರ್ಥವನ್ನು ಬರೆಯಲಾಗಿದೆ.

ಅಲಂ ನಿರಂಜನಂ=ಸಂಪಾದನೆ ಮಾಡುವಾಗಲೂ ದೋಷವನ್ನು ತಂದುಕೊಡದಿರುವ ಜ್ಞಾನಂ=ಶ್ರೀ ಹರಿವಿಷಯಕವಾದ(ಅಪರೋಕ್ಷ ಜ್ಞಾನ ಭಕ್ತಿ ಇಲ್ಲದೆ ಇರಲಾರದು ಕಾರಣ ಪರೋಕ್ಷ ಜ್ಞಾನವೆಂದು ಅರ್ಥ ಮಾಡಿದೆ.) ಪರೋಕ್ಷ ಜ್ಞಾನವು ನೈಷ್ಕರ್ಮ್ಯಮಪಿ=ಮೋಕ್ಷ ಕೊಡಲು ಯೋಗ್ಯವಾಗಿದ್ದರೂ ಅಚ್ಯುತಭಾವವರ್ಜಿತಂ=ಭಗವಂತನಲ್ಲಿ ಭಕ್ತಿ ಇಲ್ಲದಿದ್ದರೆ ನ ಶೋಭತೇ=ಮೋಕ್ಷ ಜನಕವಾಗಲಾರದು ಅಂದ ಮೇಲೆ ಶಶ್ವದಭದ್ರಂ=ಸಾಧನ ಕಾಲದಲ್ಲಿ (ಮಾಡುವಾಗಲು) ದೋಷದಿಂದ ಕೂಡಿದ ಯದಪಿ ಅಕಾರಣಂ=ಮೋಕ್ಷ ಸಾಧನವೆಂದು ವಿಹಿತವಲ್ಲದ ಕರ್ಮ ಚ=ಕರ್ಮವು ಈಶ್ವರೇ=ಭಗವಂತನಲ್ಲಿ ನೈವ ಅರ್ಪಿತಂ ಚೇತ್=ಭಕ್ತಿಯಿಂದ ಸಮರ್ಪಣ ಮಾಡದಿದ್ದಲ್ಲಿ ನ ಶೋಭತೇ ಇತಿ ಪುನಃ ಕುತಃ ವಕ್ತವ್ಯಂ=ಮೋಕ್ಷಜನಕವಲ್ಲವೆಂದು ಬೇರೆ ಹೇಳಬೇಕಿಲ್ಲವಷ್ಟೇ. ನಿಷ್ಕಾಮವಾಗಿ ಮಾಡಿದ್ದರಿಂದ ಮೋಕ್ಷ ಸಾಧನವಾಗಬಹುದಲ್ಲ ಎಂದರೆ ಅದಕ್ಕೂ ಉತ್ತರ ಯದಪಿ ಅಕಾರಣಂ=ಯದ್ಯಪಿ ಫಲಾನುಸಂಧಾನ ರೂಪಕಾರಣ ರಹಿತವಾಗಿದೆ ಆದರೂ ಭಕ್ತಿ ರಹಿತವಾದ್ದರಿಂದ ಮೋಕ್ಷ ಸಾಧಕವಲ್ಲ. ಜ್ಞಾನವು ಕರ್ಮಕ್ಕಿಂತ ಉತ್ತಮವೆಂದು ಪ್ರಸಿದ್ಧವಾಗಿದೆ. ಅದೂ ಕೂಡ ಭಕ್ತಿ ಇಲ್ಲದೆ ಮುಕ್ತಿ ಹೇತು ಅಲ್ಲವೆಂದ ಮೇಲೆ ಅದಕ್ಕಿಂತ ಕಡಿಮೆಯಾದ ಕರ್ಮ ಭಕ್ತಿಯಿಲ್ಲದೆ ಮೋಕ್ಷ ಜನಕವಲ್ಲವೆಂದೇ ಹೇಳುವುದು ಕೈಮುತ್ಯಸಿದ್ಧವೆಂದು ಭಾವ.

*ವರ್ಣಾಶ್ರಮಾಚಾರವುಳ್ಳ ಗೃಹಸ್ಥನು ಮುಕ್ತನಾಗುವನು ಎಂದಿರುವುದರಿಂದ ಭಕ್ತಿಯಿಲ್ಲದೇ ವರ್ಣಾಶ್ರಮಾಚಾರದಿಂದಲೇ ಮುಕ್ತಿಯಾಗಬಹುದಲ್ಲ ಎಂದರೆ ಹೇಳುವರು -*

**ಯಶಃ ಶ್ರಿಯಾಮೇವ ಪರಿಶ್ರಮಃ ಪರೋ**
**ವರ್ಣಾಶ್ರಮಾಚಾರತಪಃಶ್ರುತಾದಿಷು ।**
**ಅವಿಸ್ಮೃತಿಃ ಶ್ರೀಧರಪಾದಪದ್ಮಯೋ**
**ರ್ಗುಣಾನುವಾದಶ್ರವಣಾದಿಭಿರ್ಹರೇಃ** ॥ ೫೩ ॥

ಅಚ್ಯುತಭಾವವರ್ಜಿತವಾದರೆ (ಭಕ್ತಿ ಇಲ್ಲವಾದರೆ) ವರ್ಣಾಶ್ರಮಾಚಾರತಪಃ-ಶ್ರುತಾದಿಷು=ಸ್ವ ಸ್ವ ವರ್ಣಾಶ್ರಮಗಳಿಗೆ ವಿಹಿತವಾದ ಸದಾಚಾರ ತಪಸ್ಸು ಶ್ರವಣಾದಿಗಳಲ್ಲಿ ಪರಃ ಪರಿಶ್ರಮಃ ಸ್ಯಾತ್=ಕೇವಲ ಕಠಿಣ ಶ್ರಮವಷ್ಟೇ ಆಗುವುದು ಸಃ=ಅದು ಯಶಃ ಶ್ರಿಯಾಂ ಏವ ಸ್ಯಾತ್=ಕೇವಲ ಕೀರ್ತಿ,ಐಹಿಕಸಂಪತ್ತಿಗೆ ಕಾರಣವಾಗುವುದು ಹೊರತು ಇಷ್ಟವಾದ ಮೋಕ್ಷಕ್ಕೆ ಕಾರಣವಾಗಲಾರದು. ಹಾಗಾದರೆ ಭಕ್ತಿ ಹೇಗೆ ಬರುವುದು ಎಂದರೆ ಹರೇಃ=ಪರಮಾತ್ಮನ ಗುಣಾನುವಾದಶ್ರವಣಾದಿಭಿಃ= ಗುಣಗಳನ್ನು ಹೇಳುವುದು ಕೇಳುವುದರಿಂದ ಶ್ರೀಧರಪಾದಪದ್ಮಯೋಃ=ಭಗವಂತನ ಪಾದಕಮಲಗಳಲ್ಲಿ ಅವಿಸ್ಮೃತಿಃ ಜಾಯತೇ=ನಿರಂತರ ಸ್ಮರಣ ಉಂಟಾಗುವುದು.

**ವಿಶೇಷ-** ಲಕ್ಷ್ಮೀದೇವಿಗೆ ಆಶ್ರಯವಾದುದರಿಂದ ಪಾದಗಳು ಪದ್ಮವಾಗಿವೆ ಅವುಗಳಲ್ಲಿ ಎಂದು ಅರ್ಥ. ಶ್ರೀಧರ ಎಂಬುದು ಲುಪ್ತಷಷ್ಠಿಕವಾದದ್ದಾಗಿ ಹರಿಗೆ ವಿಶೇಷಣವೆಂದು ಮಾಡಬಹುದು ಶ್ರೀಧರಸ್ಯ ಹರೇಃ ಎಂದು.

*ಹಿಂದೆ ಹೇಳಿದ ಅವಿಸ್ಮೃತಿಯನ್ನು ಅನುವಾದ ಮಾಡಿ ಅದರ ಕಾರ್ಯ ಹೇಳುವರು.*

**ಅವಿಸ್ಮೃತಿಃ ಕೃಷ್ಣಪದಾರವಿಂದಯೋಃ**
**ಕ್ಷಿಣೋತ್ಯಭದ್ರಾಣಿ ಶಮಂ ತನೋತಿ ಚ ।**
**ಸತ್ವಸ್ಯ ಶುದ್ಧಿಂ ಪರಮಾಂ ಚ ಭಕ್ತಿಂ**
**(ಋದ್ಧಿಂ) ಜ್ಞಾನಂ ಚ ವಿಜ್ಞಾನವಿರಾಗಯುಕ್ತಮ್** ॥ ೫೪ ॥

ಕೃಷ್ಣಪದಾರವಿಂದಯೋಃ ಅವಿಸ್ಮೃತಿಃ=ಶ್ರೀ ಹರಿಯ ಪಾದಕಮಲಗಳ ನಿರಂತ ಸ್ಮರಣವು ಅಭದ್ರಾಣಿ=ಅಮಂಗಲಗಳನ್ನು ಕ್ಷಿಣೋತಿ=ನಾಶಮಾಡುವುದು ಶಮಂ= ಶಾಂತಿಯನ್ನು ತನೋತಿ=ಉಂಟುಮಾಡುವುದು ಚ=ಮತ್ತು ಸತ್ವಸ್ಯ=ಅಂತಃ ಕರಣದ ಶುದ್ಧಿಂ=ನಿರ್ಮಲತೆಯನ್ನು ಪರಮಾಂ ಋದ್ಧಿಂ=ಶ್ರೇಷ್ಠವಾದ ಸಮೃದ್ಧಿಯನ್ನು ಭಕ್ತಿಂ=ಭಕ್ತಿಯನ್ನು ವಿಜ್ಞಾನವಿರಾಗಯುಕ್ತಂ ಜ್ಞಾನಂ ಚ ತನೋತಿ=ವಿಶೇಷ ಜ್ಞಾನ, ವೈರಾಗ್ಯ ಸಹಿತವಾದ ಜ್ಞಾನವನ್ನೂ ಉಂಟುಮಾಡುವುದು.

*ಹೇ ಸೂತನೇ ನಮ್ಮನ್ನು ಗುಣಿಗಳ ಮಧ್ಯದಲ್ಲಿ ಗಣಿಸುವೆಯಾ ಎಂದರೆ ಹೇಳುವರು*

**ಯೂಯಂ ದ್ವಿಜಾಗ್ರ್ಯಾ ಬತ ಭೂರಿಭಾಗಾ**
**ಯಚ್ಛಶ್ವದಾತ್ಮನ್ಯಖಿಲಾತ್ಮ ಭೂತಮ್ ।।**
**ನಾರಾಯಣಂ ದೇವಮದೇವಮೀಶ**
**ಮಬಾಹ್ಯಭಾವಾ ಭಜತಾಧಿವೇಶ್ಯ** **।। ೫೫ ।।**

ಹೇ ದ್ವಿಜಾಗ್ರ್ಯಾಃ=ಬ್ರಾಹ್ಮಣಶ್ರೇಷ್ಠರೇ ಯತ್=ಯಾವ ಕಾರಣ ಶಶ್ವತ್=ಸರ್ವದಾ ಆತ್ಮನಿ=ಮನಸ್ಸಿನಲ್ಲಿ ಅಖಿಲಾತ್ಮಭೂತಂ=ಸರ್ವಸ್ವಾಮಿಯಾದ ಅದೇವಂ=ದೇವತೆಗಳಿಂದ ಭಿನ್ನನಾದ ದೇವಂ=ಸ್ತುತ್ಯನಾದ ಈಶಂ=ನಿಯಾಮಕನಾದ ಸರ್ವಸಮರ್ಥನಾದ ನಾರಾಯಣಂ=ಶ್ರೀ ಹರಿಯನ್ನು ಅಧಿವೇಶ್ಯ=ಇಟ್ಟುಕೊಂಡು ಅಬಾಹ್ಯಭಾವಾಃ ಸಂತಃ=ಅನನ್ಯ ಭಕ್ತರಾಗಿ ಭಜತ=ಭಜಿಸುವಿರಿ ಆದ್ದರಿಂದ ಯೂಯಂ=ನೀವು ಭೂರಿಭಾಗಾಃ=ಬಹು ಭಾಗ್ಯವಂತರು.

**ಸತ್ಯಧರ್ಮರ ಪ್ರಕಾರ-** ದೇವಂ ತನ್ನ ದಯವಾಗದೇ ದೊರೆಯದಿರುವ ಎಂದರ್ಥ. ಅಥವಾ ದೇವಮದೇವಂ ಎಂಬುವುದು ಒಂದೇ ಪದ. ದೇವಾನಾಂ ಮಾ ಯಸ್ಮಾತ್ ಸಃ ದೇವಮಃ, ದೇವಮಶ್ಚಾಸೌ ದೇವಶ್ಚ ತಂ ಎಂದು ವಿಗ್ರಹ. ದೇವತೆಗಳಿಗೆ ಜ್ಞಾನವನ್ನು ಸಂಪತ್ತನ್ನು ಕೊಡುವವನು ದೇವತೆಗಳಿಂದ ಸ್ತುತ್ಯನಾದವನೆಂದರ್ಥ.

'ಆಬಾಹ್ಯಭಾಃ' ವಾ ಎಂದು ಪದವಿಭಾಗ. ಬಾಹ್ಯಾರ್ಥವಿಷಯಿಣಿ ಭಾ ಜ್ಞಾನಂ ಯೇಷಾಂ ತೇ ಬಾಹ್ಯಭಾಃ ನ ಬಾಹ್ಯಭಾಃ ಅಬಾಹ್ಯಭಾಃ ವಾ ಶಬ್ದ ಅನುಕ್ತ ಸಮುಚ್ಚಾಯಕ. ಮೊದಲಿಗೆ ಚಕ್ಷುರಾದೌ ಅಧಿವೇಶ್ಯ ಅಂದರೆ ಚಕ್ಷುರಾದಿಗಳನ್ನೂ ಭಗವದ್ವಿಷವಕನ್ನಾಗಿ ಮಾಡಿ ಎಂದರ್ಥ.

**ಅಹಂ ಚ ಸಂಸ್ಮಾರಿತ ಆತ್ಮ ತತ್ತ್ವಂ**
**ಶ್ರುತಂ ಪುರಾ ಮೇ ಪರಮರ್ಷಿವಕ್ತ್ರಾತ್ ।**
**ಪ್ರಾಯೋಪವೇಶೇ ನೃಪತೇಃ ಪರೀಕ್ಷಿತಃ**
**ಸದಸ್ಯೃಷೀಣಾಂ ಮಹತಾಂ ಚ ಶೃಣ್ವತಾಮ್** **।। ೫೬ ।।**

ಅಹಂ ಚ ಭೂರಿಭಾಗಃ=ನಾನೂ ಬಹುಭಾಗ್ಯವಂತನೇ ಏಕೆಂದರೆ ಆತ್ಮತತ್ತ್ವಂ =ಭಗವತತ್ತ್ವವು ಸಂಸ್ಮಾರಿತಃ=ನಿಮ್ಮ ಪ್ರಶ್ನೆ ಮೂಲಕ ಸ್ಮೃತವಾಯಿತು. ಕಾರಣ ಭಾಗ್ಯಶಾಲಿ. ಪುರಾ=ಹಿಂದೆ ನೃಪತೇಃ=ರಾಜನಾದ ಪರೀಕ್ಷಿತಃ=ಪರೀಕ್ಷಿತನ ಸದಸಿ=

ಸಭೆಯಲ್ಲಿ ಪ್ರಾಯೋಪವೇಶೇ=ಪ್ರಾಯೋಪವೇಶಕ್ಕೆ ಕುಳಿತ ಕಾಲದಲ್ಲಿ ಮಹತಾಂ ಋಷಿಣಾಂ ಶೃಣ್ವತಾಂ=ದೊಡ್ಡ ದೊಡ್ಡ ಋಷಿಗಳು ಕೇಳುವಾಗ ಪರಮರ್ಷಿವಕ್ತ್ರಾತ್=ಶುಕ್ರಾಚಾರ್ಯರ ಮುಖದಿಂದ ಆತ್ಮತತ್ವಂ ಶ್ರುತಂ=ಭಗವತತ್ತ್ವವು ಕೇಳಲ್ಪಟ್ಟಿತ್ತು ಅದು ಈಗ ಸ್ಮೃತವಾಯಿತು ಎಂದು ಭಾವ.

**ಏತದ್ವಃ ಕಥಿತಂ ವಿಪ್ರಾ ಕಥನೀಯೋರುಕರ್ಮಣಃ ।**
**ಮಾಹಾತ್ಮ್ಯಂ ವಾಸುದೇವಸ್ಯ ಸರ್ವಾಶುಭವಿನಾಶನಮ್ ॥ ೫೭ ॥**

ಹೇ ವಿಪ್ರಾಃ=ಬ್ರಾಹ್ಮಣರೇ ಕಥನೀಯೋರುಕರ್ಮಣಃ=ಅವಶ್ಯವಾಗಿ ಹೇಳಬೇಕಾದ ಅನಂತ ಕಾರ್ಯವುಳ್ಳ ವಾಸುದೇವಸ್ಯ=ಶ್ರೀಕೃಷ್ಣನ ಸರ್ವಾಶುಭವಿನಾಶನಂ=ಎಲ್ಲ ಪಾಪನಾಶಕವಾದ ಏತತ್ ಮಾಹಾತ್ಮ್ಯಂ=ಈ ಚರಿತ್ರೆಯು ವಃ=ನಿಮಗೆ ಕಥಿತಂ=ಸ್ವಲ್ಪ ಮಟ್ಟಿಗೆ ಹೇಳಲ್ಪಟ್ಟಿದೆ.(ವಸ್ತುತಃ ಅದು ಅಪಾರವಾಗಿದೆ ಎಂಬುದು ಉರುಶಬ್ದದ ಭಾವ.)

**ಯಶ್ಚ ಸಂಶ್ರಾವಯೇನ್ನಿತ್ಯಂ ಯಾಮಂ ಕ್ಷಣಮನನ್ಯಧೀಃ ।**
**ಶ್ರದ್ಧಾವಾನ್ ಯಶ್ಚ ಶೃಣುಯಾತ್ ಪುನಾತ್ಯಾತ್ಮಾನಮೇವ ಚ ॥ ೫೮ ॥**

ಯಶ್ಚ=ಯಾವನು ಶ್ರದ್ಧಾವಾನ್=ಭಕ್ತಿಯುಳ್ಳವನಾಗಿ ಅನನ್ಯಧೀಃ=ಬೇರೆ ಕಡೆಗೆ ಮನಸ್ಸಿಡದೆ ನಿತ್ಯಂ=ಪ್ರತಿದಿನ ಯಾಮಂ=ಯಾಮ(ಮೂರುತಾಸು)ವನ್ನೂ ಬಿಡದೇ ಕ್ಷಣಂ=ಒಂದೊಂದು ಕ್ಷಣ, ಅಂದರೆ ಸರ್ವಕಾಲದಲ್ಲಿ ಎಂದರ್ಥ ಶ್ರಾವಯೇತ್=ಶ್ರವಣಮಾಡಿಸುತ್ತಾನೋ ಶೃಣುಯಾತ್=ಶ್ರವಣಮಾಡುವನು. ಮತ್ತು ಹೇಳುವವನಂತೆ ಶ್ರದ್ಧೆಯಿಂದ ಅನನ್ಯ ಮನಸ್ಕನಾಗಿ ಕೇಳುವನೋ ಹೇಳುವವನ ಹಾಗು ಕೇಳುವವನ ಆತ್ಮಾನಂ ಪುನಾತಿ=ಮನಸನ್ನು ಪವಿತ್ರಗೊಳಿಸುವನು ಎಲ್ಲಕ್ಕೂ ಮೂಲವಾದ ಮನಸ್ಸು ಪವಿತ್ರವಾದರೆ ಎಲ್ಲವೂ ಪಾವನವಾದಂತೆಯೇ 'ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ' ಎಂದಿದೆಯಷ್ಟೇ.

*ಭಾಗವತ ಕೇಳಲಿಚ್ಛಿಸುವವರಿಗೆ ಕಾಲ ವಿಶೇಷ ಹೇಳುವರು -*

**ದ್ವಾದಶ್ಯಾಮೇಕಾದಶ್ಯಾಂ ವಾ ಶೃಣ್ವನ್ನಾಯುಷ್ಯವಾನ್ ಭವೇತ್ ।**
**ಪಠತ್ಯನಶ್ನನ್ ಪ್ರಯತಃ ಪೂತೋ ಭವತಿ ಪಾತಕೀ ॥ ೫೯ ॥**

ದ್ವಾದಶ್ಯಾಂ=ದ್ವಾದಶಿಯಲ್ಲಿ ಏಕಾದಶ್ಯಾಂ ವಾ=ಏಕಾದಶಿಯಲ್ಲಿ ಯಾಗಲಿ ಶೃಣ್ವನ್=ಹರಿ ಮಹಾತ್ಮ್ಯ ಕೇಳುವವನು ಆಯುಷ್ಯವಾನ್ ಭವತಿ=ಆಯುಷ್ಯಾಭಿ

ವೃದ್ಧಿಯುಳ್ಳವನಾಗುವನು ಪರಲೋಕದಲ್ಲಿ ನಿತ್ಯಾಯುಷ್ಯರೂಪ ಮುಕ್ತಿಯುಳ್ಳವನಾಗುವನು ಅನಶ್ನನ್=ಊಟ ಮಾಡದೇ ಉಪವಾಸದಿಂದ ಪ್ರಯತಃ=ಇಂದಿಯನಿಗ್ರಹವುಳ್ಳವನಾಗಿ, ಪ್ರಯತ್ನಪೂರ್ವಕವಾಗಿ ಪಠನ್=ಪಠಣಮಾಡುವವನು ಪಾತಕೀ=ಪಾಪಿಯಾಗಿದ್ದರೂ ಪೂತೋ ಭವತಿ=ಪವಿತ್ರನಾಗುವನು.

*ದೇಶ ವಿಶೇಷಗಳನ್ನು ಹೇಳುವರು -*

**ಪುಷ್ಕರೇ ಮಥುರಾಯಾಂ ಚ ದ್ವಾರವತ್ಯಾಂ ಯತಾತ್ಮವಾನ್ ।**
**ಉಪೋಷ್ಯ ಸಂಹಿತಾಮೇತಾಂ ಪಠಿತ್ವಾ ಮುಚ್ಯತೇ ಭಯಾತ್ ॥ ೬೦ ॥**

ಪುಷ್ಕರೇ=ವರಾಹಾವತಾರಸ್ಥಾನವಾದ ಪುಷ್ಕರಕ್ಷೇತ್ರದಲ್ಲಿ ಮಥುರಾಯಾಃ= ಮಥುರಾದಲ್ಲಿ ದ್ವಾರವತ್ಯಾಂ=ದ್ವಾರಕಾದಲ್ಲಿ ಯತಾತ್ಮವಾನ್=ನಿಗ್ರಿಹಿತೇಂದ್ರಿಯನಾಗಿ ಉಪೋಷ್ಯ=ಉಪವಾಸ ಮಾಡಿ (ವಾಸ ಮಾಡಿ) ಏತಾಂ ಸಂಹಿತಾಂ ಪಠಿತ್ವಾ= ಭಾಗವತ ಸಂಹಿತೆಯನ್ನು ಪಠನ ಮಾಡಿ ಭಯಾತ್ ಮುಚ್ಯತೇ=ಸಂಸಾರ ಭಯದಿಂದ ಮುಕ್ತನಾಗುವನು.

**ವಿಶೇಷ-** ಯತಾತ್ಮಾ ಎಂದರೆ ಅರ್ಥವಾಗುತ್ತಿರಲು ಯತಾತ್ಮವಾನ್ ಎಂದದ್ದರಿಂದ ಯತಾತ್ಮಾನಃ ಅಸ್ಯ ಸಹ ಸಂತೀತಿ ಯತಾತ್ಮವಾನ್) ಅಂದರೆ ಅನೇಕ ಜನ ಸಂಯಮಿಗಳು ಇವನೊಡನೆ ಇದ್ದರೆಂದು ಅರ್ಥ ತಿಳಿಸಲು ಎಂದು ಸೂಚಿತವಾಗುವುದು

**ದೇವತಾ ಮುನಯ ಸಿದ್ಧಾಃ ಪಿತರೋ ಮನವೋ ನೃಪಾಃ ।**
**ಯಚ್ಛಂತಿ ಕಾಮಾನ್ ಬಹುಲಾನ್ ಶೃಣ್ವತೋ ಯೇಽತ್ರ ಕೀರ್ತಿತಾಃ ॥ ೬೧ ॥**

ಅತ್ರ=ಈ ಭಾಗವತದಲ್ಲಿಯೇ ಕೀರ್ತಿತಾಃ=ಯಾರು ಹೇಳಲ್ಪಟ್ಟಿರುವರೋ ತೇ=ಆ ದೇವತಾಃ=ದೇವತೆಗಳು ಮುನಯಃ=ಋಷಿಗಳು ಸಿದ್ಧಾಃ=ಸಿದ್ಧರು ಪಿತರಃ=ಪಿತೃಗಳು ಮನವಃ=ಮನುಗಳು ನೃಪಾಃ=ರಾಜರುಗಳು ಶೃಣ್ವತಃ=ಈ ಸಂಹಿತೆಯನ್ನು ಕೇಳುವವರಿಗೆ ಬಹುಲಾನ್ ಕಾಮಾನ್=ಅನೇಕ ಅಭೀಷ್ಟಗಳನ್ನು ಯಚ್ಛಂತಿ=ಕೊಡುವರು.

**ಋಚೋ ಯಜೂಂಷಿ ಸಾಮಾನಿ ದ್ವಿಜೋಽಧಿತ್ಯಾನುವಿಂದತೇ ।**
**ಮಧುಕುಲ್ಯಾ ಪಯಃಕುಲ್ಯಾ ಘೃತಕುಲ್ಯಾಶ್ಚ ತತ್ಫಲಮ್ ॥ ೬೨ ॥**

ದ್ವಿಜಃ=ಬ್ರಾಹ್ಮಣನು ಋಚಃ=ಋಗ್ವೇದವನ್ನು ಯಜೂಂಷಿ=ಯಜುರ್ವೇದವನ್ನು ಸಾಮಾನಿ=ಸಾಮವೇದವನ್ನು ಅಧೀತ್ಯ=ಅಧ್ಯಯನ ಮಾಡಿ ಯತ್ಫಲಂ ಅನುವಿಂದತೇ=

ಯಾವ ಫಲವನ್ನು ಪಡೆಯುವನೋ ತತ್ಫಲಂ=ಆ ಫಲವನ್ನೂ ಅನುವಿಂದತೇ=ಹೊಂದುವನು. ಅಲ್ಲದೇ ಮಧುಕುಲ್ಯಾಃ ಪಯಃಕುಲ್ಯಾಃ ಘೃತಕುಲ್ಯಾಃ=ಜೇನುತುಪ್ಪ ಹಾಲು, ತುಪ್ಪಗಳ ನದಿಗಳನ್ನು ಅನುವಿಂದತೇ=ಹೊಂದುವನು ಸುಖ ವಿಶೇಷ ಹೊಂದುವನು ಎಂದರ್ಥ.

*ಕೇವಲ ಐಹಿಕ ಫಲವಷ್ಟೇ ಅಲ್ಲ ಮುಕ್ತಿಯೂ ಆಗುವುದು ಎಂದು ಹೇಳುವರು.*

**ಪುರಾಣಸಂಹಿತಾಮೇತಾಮಧೀತ್ಯ ಪ್ರಯತೋ ದ್ವಿಜಃ ।**
**ಪ್ರೋಕ್ತಂ ಭಗವತಾ ವಿಷ್ಣೋಸ್ತತ್ಪದಂ ಪರಮಂ ವ್ರಜೇತ್ ॥ ೬೩ ॥**

ಭಗವತಾ ಪ್ರೋಕ್ತಂ=ವೇದವ್ಯಾಸರಿಂದ ಹೇಳಲ್ಪಟ್ಟ ಏತಾಂ ಪುರಾಣಸಂಹಿತಾಂ=ಈ ಭಾಗವತ ಸಂಹಿತಾವನ್ನು ಪ್ರಯತಃ ದ್ವಿಜಃ=ಜಿತೇಂದ್ರಿಯನಾದ ಬ್ರಾಹ್ಮಣನು ಅಧೀತ್ಯ=ಅಧ್ಯಯನ ಮಾಡಿ ವಿಷ್ಣೋಃ=ಪರಮಂ ಪದಂ ವ್ರಜೇತ್=ಭಗವಂತನ ಉತ್ತಮ ಸ್ಥಾನವಾದ ವೈಕುಂಠವನ್ನು ಹೊಂದುವನು. ವೇದಾದಿಗಳಕ್ಕಿಂತ ಹೆಚ್ಚಿನ ಫಲಪ್ರದ-ವಾದುದರಿಂದ ಅವಶ್ಯ ಪಠನೀಯವೆಂದು ಭಾವ

*ಏನನ್ನೂ ಇಚ್ಛಿಸದಿರುವವರಿಗೆ ಫಲವನ್ನು ಹಿಂದೆ ಹೇಳಿ ಕಿಂಚಿದಿಚ್ಛೆ ಇರುವ ತ್ರೈವರ್ಣಿಕರಿಗೆ ಐಹಿಕಫಲ ಹಾಗು ಶೂದ್ರನಿಗೂ ಫಲಹೇಳುವರು.*

**ವಿಪ್ರೋಽಧೀತ್ಯಾಪ್ನುಯಾತ್ ಪ್ರಜ್ಞಾಂ ರಾಜನ್ಯೋಽಬ್ಧಿಮೇಖಲಾಮ್ ।**
**ವೈಶ್ಯೋ ನಿಧಿಪತಿತ್ವಂ (ಧನಾಧಿಪತ್ಯಂ) ಚ ಶೂದ್ರಃ ಶುದ್ಧ್ಯೇತ ಪಾತಕಾತ್ ॥ ೬೪ ॥**

ವಿಪ್ರಃ=ಬ್ರಾಹ್ಮಣನು ಅಧೀತ್ಯ=ಅಧ್ಯಯನ ಮಾಡಿ ಪ್ರಜ್ಞಾಂ=ಜ್ಞಾನವನ್ನು, ರಾಜನ್ಯಃ=ಕ್ಷತ್ರಿಯನು ಅಂಬುಧಿಮೇಖಲಾಂ ಮಹೀಂ=ಸಮುದ್ರವೇ ಪರಿಧಿಯಾಗಿವುಳ್ಳ ಭೂಮಿಯನ್ನೂ, ವೈಶ್ಯಃ=ವೈಶ್ಯನು ನಿಧಿಪತಿತ್ವಂ=ಧನಿಕತೆಯನ್ನು ಆಪ್ನುಯಾತ್=ಹೊಂದುವನು ಎಂದು ಪ್ರತ್ಯೇಕ ಅನ್ವಯ ಶೂದ್ರಃ=ಶೂದ್ರನು ಶ್ರವಣಮಾಡುವುದರಿಂದ ಪಾತಕಾತ್ ಶುದ್ಧ್ಯೇತ=ಪಾಪಗಳನ್ನು ಕಳೆದುಕೊಂಡು ಶುದ್ಧನಾಗುವನು.

*ಉಳಿದ ಪುರಾಣಗಳು ಇಷ್ಟು ಭಗನ್ಮಹಿಮೆಗಳಿಂದ ಭರಿತವಲ್ಲ, ಆದ್ದರಿಂದ ಅವುಗಳಿಗಿಂತ ಅತಿಶಯತವಾಗಿ ಭಗವನ್ಮಾಹಾತ್ಮ್ಯ ಇಲ್ಲಿ ವಿಶದವಾಗಿ ಉಕ್ತವಾಗಿದೆ ಎಂದು ಹೇಳುವರು.*

**ಕಲಿಮಲಸಂಸ್ಕೃತಿಕಾಲನೋಽಖಿಲೇಶೋ**
**ಹರಿರಿತರತ್ರ ನ ಗೀಯತೇ ಹ್ಯಭೀಕ್ಷ್ಣಂ ।**

**ಇಹ ತು ಪುನರ್ಭಗವಾನಶೇಷಮೂರ್ತಿಃ**
**ಪರಿಪಠಿತೋಽನುಪದಂ ಕಥಾಪ್ರಸಂಗೈಃ** ॥ ೬೫ ॥

ಕಲಿಮಲಸಂಸ್ಕೃತಿಕಾಲನೋಽಖಿಲೇಶಃ=ಕಲಿಯ ದೋಷ ಮತ್ತು ಸಂಸಾರ ಇವರೆಡನ್ನೂ ನಾಶ ಮಾಡುವ ಸರ್ವೇಶ್ವರನಾದ ಹರಿಃ=ಶ್ರೀಹರಿಯು ಇತರತ್ರ=ಬೇರೆ ಪುರಾಣಗಳಲ್ಲಿ ಅಭೀಕ್ಷ್ಣಂ=ತಾತ್ಪರ್ಯ ಪೂರ್ವಕವಾಗಿ ಪುನಃ ಪುನಃ=ಮತ್ತೆ ಮತ್ತೆ ನ ಗೀಯತೇ=ಹೇಳಲ್ಪಡುವುದಿಲ್ಲ. ಹಾಗಾದರೆ ಹೇಗೆ ಹೇಳಲ್ಪಡುವನು ಎಂದರೆ ಬೇರೆಯವರ ಕಥೆ ಹೇಳುವಾಗ ಪ್ರಾಸಂಗಿಕವಾಗಿ ಅಮುಖ್ಯವಾಗಿ ಈಯತೇ ಜ್ಞಾಯತೇ=ತಿಳಿಯಲ್ಪಡುವನು ಇಹ ತು=ಭಾಗವತದಲ್ಲಿಯಾದರೂ ಅಶೇಷಮೂರ್ತಿಃ ಭಗವಾನ್=ಸಮಸ್ತ ಪ್ರಪಂಚವೇ ಪ್ರತಿಮೆಯಾಗಿವುಳ್ಳ ಭಗವಂತನು ಅನುಪದಂ ಪರಿಪಠಿತಃ=ಪ್ರತಿ ಒಂದು ಪದದಿಂದಲೂ ಮುಖ್ಯವಾಗಿ ಪ್ರತಿ ಪಾದಿತನಾಗಿದ್ದಾನೆ ಆದ್ದರಿಂದ ಎಲ್ಲ ಪುರಾಣವನ್ನೂ ಮೀರಿಸುವಂತಹದ್ದು ಇದು. ಅನುಪದಂ=ಮಹಾಧಿ ಕಾರಿಗಳಿಗೆ ಪ್ರತಿ ಅಕ್ಷರದಲ್ಲಿಯೂ ಪ್ರತಿಪಾದಿತನು. ಎಂದು ಭಾವ.

*ಸೂತರು ಕೊನೆಗೆ ಗುರುಗಳಿಗೆ ನಮಸ್ಕರಿಸುವರು -*

**ಸ್ವಸುಖನಿಭೃತಚೇತಾಸ್ತದ್ವ್ಯುದಸ್ತಾನ್ಯಭಾವೋಽ**
**ಪ್ಯಜಿತರುಚಿರಲೀಲಾಕೃಷ್ಟಸಾರಸ್ತದೀಯಮ್ ।**
**ವ್ಯತನುತ ಕೃಪಯಾ ಯಸ್ತತ್ತ್ವದೀಪಂ ಪುರಾಣಂ**
**ತಮಖಿಲವೃಜಿನಘ್ನಂ ವ್ಯಾಸಸೂನುಂ ನತೋಽಸ್ಮಿ** ॥ ೬೬॥

ಸ್ವಸುಖನಿಭೃತಚೇತಾಃ=ಸ್ವತಂತ್ರಸುಖರೂಪನಾದ ಶ್ರೀಹರಿಯಲ್ಲಿ ಲಗ್ನವಾದ ಮನಸ್ಸುಳ್ಳ ತದ್ವ್ಯುದಸ್ತಾನ್ಯಭಾವಃ=ಭಗವನ್ಮನಸ್ಕತೆಯಿಂದ ನಿರಾಕೃತವಾದ ಅನ್ಯಮನಸ್ಕತೆಯುಳ್ಳ (ಅಂದರೆ ಭಗವಂತನಲ್ಲಿ ಭಕ್ತಿ ಇತರವಿಷಯಗಳಲ್ಲಿ ವಿರಕ್ತಿಯುಳ್ಳ) ಅಜಿತರುಚಿರಲೀಲಾ-ಕೃಷ್ಟಸಾರಃ=ಶ್ರೀಹರಿಯ ಮನೋಹರವಾದ ಕ್ರೀಡಾಗಳಿಂದ ಆಕರ್ಷಿಸಲ್ಪಟ್ಟ ಸ್ಥೈರ್ಯವುಳ್ಳ (ದ್ರವೀಕೃತಹೃದಯವರೆಂದು ಭಾವ) ಯಃ=ಯಾರು ಕೃಪಯಾ=ದೀನರ ಮೇಲೆ ದಯೆಯಿಂದ ತದೀಯಂ ತತ್ತ್ವದೀಪಂ=ಭಗವಂತನ ಯಥಾರ್ಥವಾದ ಸ್ವರೂಪವನ್ನು ತಿಳಿಸುವ ಅಖಿಲವೃಜಿನಘ್ನಂ=ಸರ್ವಪಾಪನಾಶಕವಾದ ಪುರಾಣಂ= ಭಾಗವತವನ್ನು ವ್ಯತನುತ=ವ್ಯಾಖ್ಯಾನಮಾಡಿ ವಿಸ್ತರಿಸಿದನೋ ತಂ=ಅಂಥ ವ್ಯಾಸಸೂನುಂ =ಶುಕಾಚಾರ್ಯರನ್ನು ನತೋಽಸ್ಮಿ=ನಮಸ್ಕರಿಸುತ್ತಿದ್ದೇನೆ.

**ವಿಶೇಷ-** ಅಖಿಲವೃಜಿನಘ್ನಂ=ತಮ್ಮ ದರ್ಶನಾದಿಗಳಿಂದ ಎಲ್ಲ ಜನರ ಪಾಪಕಳೆಯುವ ವ್ಯಾಸಸೂನುಂ=ಎಂದು ಅನ್ವಯ ಮಾಡಬಹುದು. ಗುರುಗಳ ಹೆಸರು ಹೇಳಬಾರದೆಂದು ವ್ಯಾಸಸೂನುಂ ಎಂದಿದ್ದಾರೆ.

*ಉಪದಿಷ್ಟ ಭಗವಂತನನ್ನು ನಮಿಸುವ ರೀತಿ.*

**ತಮಹಮಜಮನಂತಮಾತ್ಮತಂತ್ರಂ**
**ಜಗದುದಯಸ್ಥಿತಿಸಂಯಮಾತ್ಮಶಕ್ತಿಮ್ ।**
**ದ್ಯುಪತಿಭಿರಜಶಕ್ರಶಂಕರಾದ್ಯೈ-**
**ರ್ದುರವಸಿತಸ್ತವ ಮಚ್ಯುತಂ ನತೋಽಸ್ಮಿ** ॥ ೬೭॥

ಅಹಂ=ನಾನು ಅಜಂ=ಜನ್ಮರಹಿತನಾದ ಅನಂತಂ=ದೇಶಕಾಲಗುಣಗಳಿಂದ ಅಪರಿಚ್ಛಿನ್ನನಾದ ಆತ್ಮತಂತ್ರಂ=ಸ್ವತಂತ್ರನಾದ ಜಗದುದಯಸ್ಥಿತಿಸಂಯಮಾತ್ಮಶಕ್ತಿಂ= ಪ್ರಪಂಚದ ಸೃಷ್ಟಿ-ಸ್ಥಿತಿ-ನಿಯಮನ ವಿಷಯದಲ್ಲಿ ಸ್ವರೂಪ ಶಕ್ತಿಯುಳ್ಳ ದ್ಯುಪತಿಭಿಃ= ಸತ್ಯಲೋಕ-ಸ್ವರ್ಗ-ಕೈಲಾಸಗಳಿಗೆ ಪತಿಗಳಾದ ಅಜಮನಂತಮಾತ್ಮತಂತ್ರಂ= ಬ್ರಹ್ಮ,ಇಂದ್ರ,ಶಂಕರ,ಮೊದಲಾದವರಿಂದ ದುರವಸಿತಸ್ತವಂ=ಅಪರಿಸಮಾಪ್ತವಾದ ಅನಿಶ್ಚಿತವಾದ ಸ್ತೋತ್ರವುಳ್ಳ ಅಚ್ಯುತಂ=ಯಾವವಿಧಚ್ಯುತಿಯೂ ಇಲ್ಲದ ತಂ= ಶ್ರೀಹರಿಯನ್ನು ನತೋಽಸ್ಮಿ=ನಮಸ್ಕರಿಸುವೆನು.

**ವಿಶೇಷ-** ಬ್ರಹ್ಮದೇವರು ಹಾಗು ಇಂದ್ರ ಇಬ್ಬರೂ ದ್ಯುಪತಿಗಳೆಂದು ಪ್ರಸಿದ್ಧರು. ಸತ್ಯಲೋಕ ಸ್ವರ್ಗಗಳಿಗೆ ದ್ಯುಸಂಜ್ಞೆ ಇದೆ. ಅಷ್ಟಮೂರ್ತಿತ್ವಾತ್ ಸೂರ್ಯೇ ಪ್ರೋಕ್ತತ್ವಾಚ್ಚ ರುದ್ರಸ್ಯ ಎಂದಿರುವುದರಿಂದ ಆದಿತ್ಯಸ್ಥನಾದ್ದರಿಂದ ದ್ಯುಪತಿ ಆಗುವನು ರುದ್ರನು.

ಅಹಂ ಅಜತೀತಿ ಅಹಮಜಃ ತಂ ಅಹಂಕಾರಶೂನ್ಯನಾದವನನ್ನು ಎಂದರ್ಥ. ತಮಹಂ ಅಜಂ, ತಮಂ ಅಜ್ಞಾನಂ ಹಂತೀತಿ ತಮಹಃ (ತಮಂತು ತಮಸಾ ಸಾರ್ಥಂ) ಆದಿಪದದಿಂದ ತೆಗೆದುಕೊಂಡ ದೇವತೆಗಳು ತ್ರಾಣಮಾಡುವುದರಿಂದ ದ್ಯುಪತಿಗಳಾಗುವರು. ಇಂದ್ರನಿಗಿಂತ ಉತ್ತಮರಾದ ರುದ್ರದೇವರನ್ನು ಶಕ್ರನ ನಂತರ ಹೇಳಿದ್ದು ಪರತಂತ್ರತೆಯಲ್ಲಿ ಸಮಾನರೆಂಬ ಅಭಿಪ್ರಾಯದಿಂದ ಮತ್ತು ಕೃಷ್ಣಾವತಾರದಲ್ಲಿ ಸದಾಶಿವನಿಗಿಂತಲೂ ಸದಾ ಅಧಿಕ ಸೇವೆ ಮಾಡಿದವನು ಇಂದ್ರನಾದ ಅರ್ಜುನನು. ಕಾರಣ ಅನಂತರ ಶಂಕರನನ್ನು ಹೇಳಿದ್ದು ಎಂದು ತಿಳಿಯಬೇಕು.

**ಉಪಚಿತನವಶಕ್ತಿಭಿಃ ಸ್ವಆತ್ಮ-**
**ನ್ಯುಪರಚಿತಸ್ಥಿರಜಂಗಮಪಾಲನಾಯ ।**
**ಭಗವತ ಉಪಲಬ್ಧಿಮಾತ್ರಧಾಮ್ನೇ**
**ಸುರಋಷಭಾಯ ನಮಃ ಸನಾತನಾಯ ॥ ೬೮ ॥**

ಉಪಚಿತನವಶಕ್ತಿಭಿಃ=ತಮ್ಮ ತಮ್ಮ ಕಾರ್ಯ ಮಾಡಲು ಉನ್ಮುಖವಾದ ನವಶಕ್ತಿಭಿಃ= ಮೂಲಪ್ರಕೃತಿ, ಮಹತ್ತತ್ತ್ವ ಅಹಂಕಾರತತ್ತ್ವ, ಮನಸ್ಸು, ಪಂಚಭೂತಗಳು ಹಾಗು ವಿಮಲಾ,ಉತ್ಕರ್ಷಿಣಿ ಮುಂತಾದ ಒಂಭತ್ತುಶಕ್ತಿಗಳಿಂದ ಸ್ವಆತ್ಮನಿ=ಸ್ವಾಧಾರವಾಗಿ ಉಪರಚಿತಸ್ಥಿರಜಂಗಮಪಾಲನಾಯ=ಸೃಷ್ಟಿಸಲ್ಪಟ್ಟ ಸ್ಥಾವರ ಜಂಗಮಗಳ ರಕ್ಷಣೆಗಾಗಿ ಉಪಲಬ್ಧಿಮಾತ್ರಧಾಮ್ನೇ=ಕೇವಲ ಜ್ಞಾನಾತ್ಮಕ ದೇಹವುಳ್ಳ ಸುರಋಷಭಾಯ= ದೇವತಾಶ್ರೇಷ್ಠನಾದ ಸನಾತಾನಾಯ=ಅನಾದಿಯಾದ ವೇದವೇದ್ಯನಾದ ಭಗವತೇ ನಮಃ=ಶ್ರೀಹರಿಗೆ ನಮಸ್ಕಾರವು.

**ವಿಶೇಷ-** ಉಪಲಬ್ಧಿಶ್ಚ ಮಾತಾ ಚ ಅಧಾಮಾ ಚ ತಸ್ಮೈ ಎಂದು ವಿಗ್ರಹ ಮಾಡಿ ಜ್ಞಾನಾತ್ಮಕನು ಜ್ಞಾತೃವೂ ತನ್ನಿಂದ ಭಿನ್ನವಾದ ಆಧಾರರಹಿತನೂ ಆದವನಿಗೆ ಎಂದು ಹೀಗೂ ಅರ್ಥ. ಇದರಿಂದ ಲೋಕವಿಲಕ್ಷಣ ಎಂದು ತಿಳಿಯುವದು.ಜ್ಞಾನಂ ಜ್ಞೇಯಂ ಪರಿಜ್ಞಾತಾ ಎಂದಿದೆ.

**ಭಾಗವತಕ್ಕೆ ಜಯ ಎಂಬ ಹೆಸರು ಬಂದದ್ದು-**

ಜ್ಞಾನಂ ಜ್ಞೇಯಂ ಪರಿಜ್ಞಾತಾ ಎಂದಿದೆ. ಜನ್ಮಾದ್ಯಸ್ಯ ಯತಃ ಎಂಬಲ್ಲಿಯ ಜಕಾರ, ಇಲ್ಲಿ ಕೊನೆಯ ಯಕಾರ ಜೋಡಿಸಿದರೆ ಜಯ ಎಂದಾಗುವದು ಅದು ಈ ಗ್ರಂಥದ ಹೆಸರು ಎಂದು ಸಾಂಪ್ರದಾಯಿಕರು ಹೇಳುವುದುಂಟು 'ಜನ್ಮಾದ್ಯಸ್ಯ ಯತೋಽನ್ವಯಾತ್' ಎಂಬಲ್ಲಿ ಜನ್ಮ ಇತ್ಯಸ್ಯ ಆದ್ಯಃ ಜನ್ಮಾದ್ಯಃ ತಸ್ಯ ಜನ್ಮಾದ್ಯಸ್ಯ=ಜಕಾರಸ್ಯ ಅಂದರೆ ಜನ್ಮಶಬ್ದದ ಆದಿವರ್ಣವಾದ ಜಕಾರಕ್ಕೆ ಯತಃ=ಯಕಾರೇಣ (ಯಕಾರಸ್ಯ)ಅನ್ವಯಾತ್ =ಯೋಜನೆ ಮಾಡುವದರಿಂದ ಜಯ ಎಂಬ ಪ್ರಾತಿಪದಿಕ ನಿಷ್ಪನ್ನವಾಗುವುದು ಎಂದು ಅಂತರಂಗದಲ್ಲಿ ಗ್ರಂಥಕಾರರು ಅಭಿಪ್ರಾಯಪಟ್ಟಿರುವರು ಎಂದು ತಿಳಿಯಬೇಕು.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ವೈಯ್ಯಾಸಿಕ್ಯಾಂ ಅಷ್ಟಾದಶಸಾಹಸ್ರ್ಯಾಂ ಸಂಹಿತಾಯಾಂ ದ್ವಾದಶಸ್ಕಂಧೇ ಸೂತೋಕ್ತೌ ದ್ವಾದಶೋಽಧ್ಯಾಯಃ ॥**

**॥ ಇಲ್ಲಿಗೆ ಹನ್ನೆರಡನೇ ಅಧ್ಯಾಯವು ಸಮಾಪ್ತವಾಯಿತು ॥**

## ಅಥ ತ್ರಯೋದಶೋಽಧ್ಯಾಯಃ

ಹದಿಮೂರನೇ ಅಧ್ಯಾಯದಲ್ಲಿ ಹದಿನೆಂಟು ಪುರಾಣಗಳಲ್ಲಿ ಮೂಡಿಬಂದ ಶ್ಲೋಕಗಳ ಒಟ್ಟು ಸಂಖ್ಯೆಯನ್ನು, ಕೊನೆಯಲ್ಲಿ ಈ ಭಾಗವತವನ್ನು ಉಪದೇಶಿಸಿದ ಶುಕಾಚಾರ್ಯರಿಗೆ ನಮಸ್ಕಾರವನ್ನು, ಭಗವಂತನ ನಾಮಸ್ಮರಣೆಯ ಮಹತ್ವವನ್ನು ತಿಳಿಸಿರುತ್ತಾರೆ.

**ಯಂ ಬ್ರಹ್ಮಾ ವರುಣೇಂದ್ರರುದ್ರಮರುತಃ ಸ್ತುನ್ವಂತಿ ದಿವ್ಯೈಸ್ತವ್ಯೆ**
**ರ್ವೇದೈಸ್ಸಾಂಗಪದಕ್ರಮೋಪನಿಷದೈರ್ಗಾಯಂತಿ ಯಂ ಸಾಮಗಾಃ**
**ಧ್ಯಾನಾವಸ್ಥಿತತದ್ಗತೇನ ಮನಸಾ ಪಶ್ಯಂತಿ ಯಂ ಯೋಗಿನೋ**
**ಯಸ್ಯಾಂ ತಂ ನ ವಿದುಃ ಸುರಾಃ ಸುರಗಣಾಃ ದೇವಾಯ ತಸ್ಮೈ ನಮಃ ॥೧॥**

ಯಂ=ಯಾವ ಶ್ರೀಹರಿಯನ್ನು ಬ್ರಹ್ಮಾ=ಬ್ರಹ್ಮದೇವನು ವರುಣೇಂದ್ರರುದ್ರಮರುತಃ ವರುಣನು ಇಂದ್ರನು ಇವರಿಂದ ಸಹಿತನಾದ ರುದ್ರನು ಮರತ್ತುಗಳು ದಿವ್ಯೈಃಸ್ತವ್ಯೈಃ=ದಿವ್ಯವಾದ ಸ್ತುತಿಯಿಂದ ಕೂಡಿದ ಅಥವಾ ಸ್ತೋತ್ರರೂಪಗಳಾದ ಸಾಂಗಪದಕ್ರಮೋಪನಿಷದೈಃ ವೇದೈಃ=ಅಂಗಗಳಿಂದ ಸಹಿತವಾದ ಪದಕ್ರಮಗಳುಳ್ಳ ಉಪನಿಷತ್‌ಗಳಿಂದ(ಅಕಾರಾಂತ)ವೇದಗಳಿಂದ ಸ್ತುನ್ವಂತಿ=ಸ್ತೋತ್ರಮಾಡುವರು ಸಾಮಗಾಃ ಗಾಯಂತಿ=ಸಾಮವೇದಗಳಿಂದ ಗಾನಮಾಡುವರು ಧ್ಯಾನಾವಸ್ಥಿತ-ತದ್ಗತೇನ=ದೃಢವಾಗಿ ಧ್ಯಾನಾಸಕ್ತವಾದ ಭಗವದ್ವಿಷಯಕವಾದ ಮನಸಾ=ಮನಸ್ಸಿನಿಂದ ಯೋಗಿನಃ=ಯೋಗಿಗಳು ಯಂ=ಯಾರನ್ನು ಪಶ್ಯಂತಿ=ನೋಡುವರೋ ಸುರಾಃ ಸುರಗಣಾಃ=ಸ್ತೋತ್ರಮಾಡುವ ದೇವಾಸುರಸಮೂಹಗಳು ಯಸ್ಯ=ಯಾವನ ಅಂತಂ=ಅಂತವನ್ನು ತಿಳಿಯಲಿಲ್ಲವೋ ತಸ್ಮೈ=ಅಂಥವನಿಗೆ ನಮಃ=ನಮಸ್ಕಾರವು.

**ಪೃಷ್ಠಭ್ರಾಮ್ಯದಮಂದಮಂದರಗಿರಿಗ್ರಾವಾಗ್ರಕಂಡೂಯನಾ-**
**ನ್ನಿದ್ರಾಲೋಕಮಠಾಕೃತೇರ್ಭಗವತಃ ಶ್ವಾಸಾನಿಲಾಃ ಪಾಂತು ವಃ ।**
**ಯತ್ಸಂಸ್ಕಾರಕಲಾನುವರ್ತನವಶಾದ್ ವೇಲಾನಿಭೇನಾಂಭಸಾಂ -**
**ಯಾತಾ ಯಾತಮತಂದ್ರಿತಂ ಜಲನಿಧೇರ್ನಾದ್ಯಾಪಿ ವಿಶ್ರಾಮ್ಯತಿ ॥ ೨ ॥**

ಪೃಷ್ಠಭ್ರಾಮ್ಯದಮಂದಮಂದರಗಿರಿಗ್ರಾವಾಗ್ರಕಂಡೂಯನಾತ್=ಪೃಷ್ಟ-ಬೆನ್ನ ಮೇಲೆ ಭ್ರಾಮ್ಯತ್-ತಿರುಗುವ ಅಮಂದ-ದೊಡ್ಡದಾದ ಮಂದರಗಿರಿ-ಮಂದರ ಪರ್ವತದ ಗ್ರಾವಾಗ್ರ-ಕಲ್ಲುಗಳ ತುದಿಯಿಂದ ಕಂಡೂಯನಾತ್-ತುರಿಸುವದರಿಂದ ಆಗುವ ಸುಖವಿಶೇಷದಿಂದ ನ್ನಿದ್ರಾಲೋಕಮಠಾಕೃತೇಃ=ನಿದ್ರಾಲೋ-ನಿದ್ದೆ ಮಾಡುವ ಸ್ವಭಾವವುಳ್ಳ ಕಮಠಾಕೃತೇಃ-ಕೂರ್ಮರೂಪಿಯಾದ ಭಗವತಃ-ಶ್ರೀಹರಿಯ ಯತ್ಸಂಸ್ಕಾರಕಲಾನು ವರ್ತನವಶಾದ್=ಯತ್ಸಂಸ್ಕಾರ-ಯಾವ ಶ್ವಾಸಾನಿಲಗಳ ಪುನಃ ಪುನಃ-ಮೇಲೆ ಬರುವದೆಂಬ ಸಂಸ್ಕಾರದ ಕಲಾ-ಕಲಾಲೇಶದ ಅನುವರ್ತನ-ಪರಿಭ್ರಮಣದ ವಶಾದ್-ಅಧೀನವಾಗಿ ಅತತಿ ಇತಿ ಆತ್-ಚಲಿಸುವ ವೇಲಾನಿಲೇನ= ವೇಲಾ-ಕ್ಷೋಭೆಯಿಂದುಂಟಾದ ಅನಿಲೇನ-ಗಾಳಿಯಿಂದ ಜಲನಿಧೇಃ=ಸಮುದ್ರದ ಅಂಭಸಾಂ= ನೀರುಗಳ ಅತಂದ್ರಿತಂ=ಆಲಸ್ಯವಿಲ್ಲದ ಯಾತಾಯಾತಂ=ತೆರೆಗಳ ಗಮನಾಗಮನವು ಅದ್ಯಾಪಿ=ಈಗಲೂ ನ ವಿಶ್ರಾಮ್ಯತಿ=ವಿರಾಮ ಹೊಂದಿಲ್ಲವೋ ಅಥ= ಶ್ವಾಸಾನಿಲಾಕೂರ್ಮಸ್ಪೃಷ್ಟವಾದ ಗಾಳಿಯು ವಃ=ನಿಮ್ಮನ್ನು ಪಾಂತು=ರಕ್ಷಿಸಲಿ.

**ವಿಶೇಷ-** ನಾನು ನನ್ನ ಬುದ್ಧಿ ಎಂಬ ಮಂದರದಿಂದ ಮಥನಮಾಡಿ ನನ್ನ ಯೋಗ್ಯತಾನುಸಾರ ಉತ್ತರ ಹೇಳಿದ್ದೇನೆ ಕೇಳಿದಂಥ ನೀವೂ ಸಹ ಬುದ್ಧಿಯಿಂದ ಮಂಥನ ಮಾಡಿ ಜನರಿಗೆ ಹೇಳಬೇಕು. ಎಂಬ ಅಭಿಪ್ರಾಯವನ್ನು 'ಪಾಂತು ವಃ' ಎನ್ನುವದರಿಂದ ಅವರ ಸಂಬಂಧವನ್ನು ಸೂಚಿಸಿರುವರು ಸೂತರು. ಆದ್ದರಿಂದ ಮಧ್ಯದಲ್ಲಿ ಅಸಂಗತವಾಗಿ ಏನೋ ಹೇಳಿದರು ಎಂಬ ಶಂಕೆಗೆ ಅವಕಾಶವಿಲ್ಲ.

**ಪುರಾಣಸಂಖ್ಯಾಸಂಭೂತಿಮಸ್ಯ ವಾಚ್ಯಪ್ರಯೋಜನೇ ।**
**ದಾನಂ ದಾನಸ್ಯ ಮಾಹಾತ್ಮ್ಯಂ ಪಾಠಾದೇಶ್ಚ ನಿಬೋದತ ॥ ೩ ॥**

ಪುರಾಣಸಂಖ್ಯಾಸಂಭೂತಿಂ=ಪುರಾಣಗಳ ಗ್ರಂಥ ಸಂಖ್ಯೆ ಮತ್ತು ಅವುಗಳ ಸಂಭೂತಿಂ-ಉತ್ಪತ್ತಿ ಅಥವಾ ಸಮಾಹಾರ(ಸಮುದಾಯ)ವನ್ನು ಅಸ್ಯ= ಶ್ರೀಮದ್ಭಾಗವತದ ವಾಚ್ಯಪ್ರಯೋಜನೇ=ವಿಷಯ ಮತ್ತು ಪ್ರಯೋಜನಗಳನ್ನು ದಾನಂ=ದಾನವನ್ನು

ದಾನಸ್ಯ=ದಾನದ ಮಾಹಾತ್ಮ್ಯಂ=ಮಹತ್ವವನ್ನೂ ಪಾಠಾದೇಃ=ಹೇಳುವುದು ಕೇಳುವದರ ಮಾಹಾತ್ಮ್ಯಂ=ಮಹಾತ್ಮ್ಯವನ್ನು ನಿಭೋದತ=ನನ್ನಿಂದ ತಿಳಿಯಿರಿ.

**ವಿಶೇಷ-** ಹೀಗೆ ಹೇಳುವ ಮೂಲಕ ತಮಗೆ ಹೇಳುವ ಉದ್ದೇಶವಿದೆ ಎಂದು ಸೂಚಿಸುವರು.

**ಬ್ರಾಹ್ಮಂ ದಶಸಹಸ್ರಾಣಿ ಪಾದ್ಮಂ ಪಂಚೋನಷಷ್ಟಿಕಮ್ ।**
**ಶ್ರೀವೈಷ್ಣವಂ ತ್ರಯೋವಿಂಶಚ್ಚತುರ್ವಿಂಶತಿ ಶೈವಕಮ್**
**ದಶಾಷ್ಟೌ ಶ್ರೀಭಾಗವತಂ ನಾರದ ಪಂಚವಿಂಶತಿಃ ॥ ೪ ॥**

ಬ್ರಾಹ್ಮಂ=ಬ್ರಹ್ಮಪುರಾಣವು ದಶಸಹಸ್ರಾಣಿ=ಹತ್ತುಸಾವಿರ ಪಾದ್ಮಂ=ಪದ್ಮಪುರಾಣವು ಪಂಚೋನಷಷ್ಟಕಂ=ಐದು ಕಡಿಮೆ ಅರವತ್ತು ಅಂದರೆ ಐವತ್ತೈದು ಸಾವಿರವು ಶ್ರೀವೈಷ್ಣವಂ=ವಿಷ್ಣು ಪುರಾಣವು ತಯೋವಿಂಶತ್=ಇಪ್ಪತ್ತುಮೂರುಸಾವಿರ ಶೈವಕಂ= ಶಿವಪುರಾಣವು ಚತುರ್ವಿಂಶತಿ=ಇಪ್ಪತ್ನಾಲ್ಕು ಸಾವಿರ ಶ್ಲೋಕಾತ್ಮಕವಾಗಿದೆ. ಶ್ರೀಮದ್ಭಾಗವತಂ=ಶ್ರೀಮದ್ಭಾಗವತವು ದಶಾಷ್ಟೌ=ಹದಿನೆಂಟು ಸಾವಿರ ನಾರದಂ=ನಾರದ ಪುರಾಣವು ಪಂಚವಿಂಶತಿಃ=ಇಪ್ಪತ್ತೈದು ಸಾವಿರಶ್ಲೋಕಾತ್ಮಕವಾಗಿದೆ.

**ಮಾರ್ಕಾಂಡೇಯಂ ನವಾಗ್ನೇಯಂ ದಶಪಂಚ ಚತುಶ್ಶತಮ್ ।**
**ಚತುದರ್ಶ ಭವಿಷ್ಯಂ ಸ್ಯಾತ್ತಥಾ ಪಂಚಶತಾನಿ ಚ ॥ ೫ ॥**

ಮಾರ್ಕಾಂಡೇಯಂ=ಮಾರ್ಕಂಡೇಯ ಪುರಾಣವು ನವ=ಒಂಬತ್ತು ಸಾವಿರ ಆಗ್ನೇಯಂ=ಆಗ್ನೇಯ ಪುರಾಣವು ದಶಪಂಚಚತುಶ್ಶತಂ=ಹದಿನೈದು ಸಾವಿರದ ನಾಲ್ಕು ನೂರು ಭವಿಷ್ಯಂ=ಭವಿಷ್ಯಪುರಾಣವು ಚತುದರ್ಶ ತಥಾ ಪಂಚಶತಾನಿ=ಹದಿನಾಲ್ಕು ಸಾವಿರದ ಐದುನೂರು ಶ್ಲೋಕಾತ್ಮಕವಾದವುಗಳು.

**ದಶಾಷ್ಟೌ ಬ್ರಹ್ಮವೈವರ್ತಂ ಲಿಂಗಮೇಕಾದಶೈವ ತು ।**
**ಚತುರ್ವಿಂಶತಿ ವಾರಾಹಮೇಕಾಶೀತಿಸಹಸ್ರಕಮ್ ॥ ೬ ॥**

**ಸ್ಕಾಂದಂ ಶತಂ ತಥಾಚೈಕಂ ವಾಮನಂ ದಶಕೀರ್ತಿತಮ್ ॥ ೭ ॥**

ಬ್ರಹ್ಮವೈವರ್ತಂ=ಬ್ರಹ್ಮವೈವರ್ತಪುರಾಣವು ದಶಾಷ್ಟೌ=ಹದಿನೆಂಟು ಸಾವಿರ ಲಿಂಗಂ= ಲಿಂಗಪುರಾಣವು ಏಕಾದಶ=ಹನ್ನೊಂದುಸಾವಿರ ವಾರಾಹಂ=ವಾರಾಹಪುರಾಣವು ಚತುರ್ವಿಂಶತಿ=ಇಪ್ಪತ್ನಾಲ್ಕುಸಾವಿರ ತಥಾ=ಹಾಗೆ ಸ್ಕಾಂದಂ=ಸ್ಕಾಂದಪುರಾಣವು

ಏಕಾಶೀತಿಸಹಸ್ರಕಂ=ಎಂಭತ್ತೊಂದು ಸಾವಿರದ ನೂರು ವಾಮನಂ=ವಾಮನಪುರಾಣವು ದರ್ಶಕೀರ್ತಿತಂ=ಹತ್ತುಸಾವಿರಶ್ಲೋಕಾತ್ಮಕವಾದವುಗಳು ಎಂದು ಪರಿಗಣಿತವಾಗಿರುತ್ತವೆ.

**ವಿಶೇಷ-** ಸ್ಕಾಂದಪುರಾಣದ ಶ್ಲೋಕಗಳ ಸಂಖ್ಯೆಯನ್ನು ವಿವರಿಸುವಾದ ಶ್ರೀಸತ್ಯಧರ್ಮತೀರ್ಥರು ಸ್ಕಾಂದಪುರಾಣದಲ್ಲಿ ಒಟ್ಟು ಇರುವ ಶ್ಲೋಕಗಳು ಒಂದು ಲಕ್ಷ ಎಂಭತ್ತೊಂದು ಸಾವಿರ.(ಅದರ ವಿವರಣೆ ಅವರ ವ್ಯಾಖ್ಯಾನದಲ್ಲಿ ಹೀಗೆ ಮೂಡಿಬಂದಿದೆ ಏಕಾಶೀತಿಸಹಸ್ರಕಂ ತಥಾ ಏಕಶತಂ ಸಹಸ್ರಂ ಆಹತ್ಯ ಲಕ್ಷೋಪರಿ ಏಕಾಶೀತಿ ಸಹಸ್ರಂ ಸ್ಕಂದಂ ಎಂದು.) ವಾಮನಂ ದಶಕೀರ್ತಿತಂ ವಾಮನಪುರಾಣವು ಹತ್ತು ಸಾವಿರ.

**ಕೌರ್ಮಂ ಸಪ್ತದಶ ಖ್ಯಾತಂ ಮಾತ್ಸ್ಯಂ ತಚ್ಚ ಚತುರ್ದಶ ।**
**ಏಕೋನವಿಂಶತ್ ಸೌಪರ್ಣಂ ಬ್ರಹ್ಮಾಂಡಂ ದ್ವಾದಶೈವ ತು ॥ ೮ ॥**

ಕೌರ್ಮಂ=ಕೂರ್ಮಪುರಾಣವು ಸಪ್ತದಶ ಖ್ಯಾತಂ=ಹದಿನೇಳು ಸಾವಿರವು ಮಾತ್ಸ್ಯಂ=ಮಾತ್ಸ್ಯಪುರಾಣವು ಚತುರ್ದಶ=ಹದಿನಾಲ್ಕು ಸಾವಿರವು ಸೌಪರ್ಣಂ= ಗರುಡಪುರಾಣವು ಏಕೋನವಿಂಶತ್=ಹತ್ತೊಂಬತ್ತು ಸಾವಿರವು ಬ್ರಹ್ಮಾಂಡಂ= ಬ್ರಹ್ಮಾಂಡಪುರಾಣವು ದ್ವಾದಶೈವ=ಹನ್ನೆರಡು ಸಾವಿರ ಶ್ಲೋಕಾತ್ಮಕವಾದವುಗಳು.

**ಏವಂ ಪುರಾಣಸಂದೋಹಶ್ಚತುರ್ಲಕ್ಷಉದಾಹೃತಃ ।**
**ತತ್ರಾಷ್ಟಾದಶಸಾಹಸ್ರಂ ಶ್ರೀಭಾಗವತಮಿಷ್ಯತೇ ॥ ೯ ॥**

ಏವಂ=ಈ ರೀತಿ ಪುರಾಣಸಂದೋಹಃ=ಪುರಾಣ ಸಮೂಹವು ಚತುರ್ಲಕ್ಷಃ= ನಾಲ್ಕುಲಕ್ಷವೆಂದು ಉದಾಹೃತಃ=ಹೇಳಲ್ಪಟ್ಟಿದೆ. ತತ್ರ=ಅದರಲ್ಲಿ ಅಷ್ಟಾದಶಸಾಹಸ್ರಂ= ಹದಿನೆಂಟುಸಾವಿರ ಶ್ರೀಭಾಗವತಮಿಷ್ಯತೇ=ಶ್ರೀಮದ್ಭಾಗವತವು ಎಂದು ಅಂಗೀಕರಿಸಲ್ಪಡುವದು.

**ವಿಶೇಷ-** ಹಿಂದೆ 'ದಶಾಷ್ಟೌ ಶ್ರೀಭಾಗವತಂ' ಎಂದು ಹೇಳಿದ್ದರೂ ಇಲ್ಲಿ ಮತ್ತೆ ಅಷ್ಟಾದಶ ಸಹಸ್ರಂ ಶ್ರೀಭಾಗವತಮಿಷ್ಯತೇ ಎಂದು ಪುನಃ ಹೇಳಿದ್ದರಿಂದ ಇತರ ಪುರಾಣಗಳಂತೆ ಭಾಗವತದಲ್ಲಿ ಸಂಖ್ಯಾವ್ಯತ್ಯಾಸವಿಲ್ಲವೆಂದು ಬೀಗಮುದ್ರೆ ಹಾಕಿದಂತಾಯಿತು. ಉಳಿದ ಪುರಾಣ ವಿಷಯದಲ್ಲಿ ಲಿಂಗಪುರಾಣದಲ್ಲಿ -

**ತಸ್ಮಾತ್ ಸಂಕ್ಷೇಪತೋ ವಕ್ಷ್ಯೇ ನ ಶ್ರುತಂ ವಿಸ್ತರೇಣ ಯತ್ ।**
**ಚತುರ್ಲಕ್ಷೇಣ ಸಂಕ್ಷಿಪ್ತಂ ಕೃಷ್ಣದ್ವೈಪಾಯನೇನ ತು ॥**

**ಗ್ರಂಥೈಕಾದಶಸಾಹಸ್ರಂ ಕಥಿತೋ ಲಿಂಗಸಂಭವಃ ।**
**ತಥಾ ಲೈಂಗಮೇಕಾದಶಂ ಪ್ರೋಕ್ತಂ ಮಯಾ ವ್ಯಾಸಾತ್ ಶ್ರುತಂ ಚ ತತ್ ॥**

ಎಂದು ಹೇಳಿರುವುದರಿಂದ ಕೆಲವೆಡೆ ಸಂಖ್ಯಾ ವ್ಯಾತ್ಯಾಸ ಕಾಣುವುದು ಅಂತು ಕೆಲವು ಕಡೆ ಹೆಚ್ಚು ಕೆಲವು ಕಡೆ ಕಡಿಮೆ ಮಾಡಿ ನಾಲ್ಕು ಲಕ್ಷಕ್ಕೆ ಸರಿ ಮಾಡಬೇಕು. ಅದರಂತೆ ಭಾಗವತದಲ್ಲಿ

**ಇದಂ ಭಗವತಾ ಪೂರ್ವಂ ಬ್ರಹ್ಮಣೇ ನಾಭಿಪಂಕಜೇ ।**
**ಸ್ಥಿತಾಯ ಭವಭೀತಾಯ ಕಾರುಣ್ಯಾತ್ ಸಂಪ್ರಕಾಶಿತಮ್ ।**
**ಆದಿಮಧ್ಯಾವಸಾನೇಷು ವೈರಾಗ್ಯಾಖ್ಯಾನಸಂಯುತಮ್ ॥ ೧೦ ॥**

ಇದಂ=ಈ ಭಾಗವತಸಂಹಿತೆಯು ಪೂರ್ವಂ=ಹಿಂದೆ ನಾಭಿಪಂಕಜೇ=ನಾಭಿಕಮಲದಲ್ಲಿ ಸ್ಥಿತಾಯ=ಇರುವ ಭವಭೀತಾಯ=ಸಂಸಾರದಿಂದ ಭಯಪಡುವ ಬ್ರಹ್ಮಣೇ= ಬ್ರಹ್ಮದೇವರಿಗೆ ಕಾರುಣ್ಯಾತ್=ದಯೆಯಿಂದ ಆದಿಮಧ್ಯಾವಸಾನೇಷು=ಮೊದಲಿಗೆ ಮಧ್ಯದಲ್ಲಿ ಕೊನೆಗೆ ವೈರಾಗ್ಯಾಖ್ಯಾನಸಂಯುತಂ=ವೈರಾಗ್ಯ ಜನಕ ಕಥೆಗಳಿಂದ ಕೂಡಿದವುಗಳನ್ನು ಸಂಪ್ರಕಾಶಿತಂ=ತಿಳಿಸಿದೆ.

**ಹರಿಲೀಲಾಕಥಾವ್ರಾತಾಮೃತಾನಂದಿತಸತ್ಸುರಮ್ ।**
**ಸರ್ವವೇದಾಂತಸಾರಂ ಯದ್ ಬ್ರಹ್ಮಾತ್ಮೈಕತ್ವಲಕ್ಷಣಮ್ ॥ ೧೧ ॥**

ಹರಿಲೀಲಾಕಥಾವ್ರಾತಾಮೃತಾನಂದಿತಸತ್ಸುರಂ=ಶ್ರೀಹರಿಯ ಲೀಲೆಗಳ ಕಥಾಸಮುದಾಯಗಳೆಂಬ ಅಮೃತದಿಂದ ಸಂತೋಷಪಡಿಸಲ್ಪಟ್ಟ ಸಜ್ಜನರು ಮತ್ತು ದೇವತೆಗಳುಳ್ಳ ಸರ್ವವೇದಾಂತಸಾರಂ=ಎಲ್ಲ ಉಪನಿಷತ್ತುಗಳಲ್ಲಿ ಅಡಗಿದ ಬ್ರಹ್ಮಾತ್ಮೈಕತ್ವಲಕ್ಷಣಂ=ಅದ್ವಿತೀಯತ್ವ ಎಂಬ ಲಕ್ಷಣವುಳ್ಳವನು

**ವಿಶೇಷ-** ಬ್ರಹ್ಮಾತ್ಮೈಕತ್ವಲಕ್ಷಣಮ್ ಎಂಬಲ್ಲಿ ಆತ್ಮನಾಂ=ಜೀವರಿಗೆ ಏಕಂ= ಮುಖ್ಯನಾದವನು ಬ್ರಹ್ಮ=ಪರಬ್ರಹ್ಮನು. ತಸ್ಯ ಭಾವಃ ಬ್ರಹ್ಮಾತ್ಮೈಕತ್ವಂ । ತದೇವಲಕ್ಷಣಂ- ಅಂದರೆ ಜೀವರಿಗೆ ಬ್ರಹ್ಮನೇ ಪ್ರಧಾನನೆಂದು ತಿಳಿಸುವ ಯದ್ವಸ್ತು ಅದ್ವಿತೀಯಂ ಯಾವುದು ನಿತ್ಯಾಪ್ರತಿಹತವೋ ಮತ್ತು ಸಮಾಧಿಕರಹಿತವೋ ತನ್ನಿಷ್ಠಂ ತದ್ವಿಷಯಕವಾದ, ಮೋಕ್ಷವೇ ಮುಖ್ಯಪ್ರಯೋಜವಾಗಿವುಳ್ಳದ್ದು ಭಾಗವತ.

**ಪ್ರೌಷ್ಠಪದ್ಯಾಂ ಪೌರ್ಣಮಾಸ್ಯಾಂ ಹೇಮಸಿಂಹಸಮನ್ವಿತಮ್ ।**
**ದದಾತಿ ಯೋ ಭಾಗವತಂ ಸ ಯಾತಿ ಪರಮಾಂಗತಿಮ್ ॥ ೧೨ ॥**

ಪ್ರೌಷ್ಠಪದ್ಯಾಂ=ಭಾದ್ರಪದಮಾಸದಲ್ಲಿ ಪೌರ್ಣಮಾಸ್ಯಾಂ=ಹುಣ್ಣಿಮೆಯ ದಿವಸ ಹೇಮಸಿಂಹಸಮನ್ವಿತಂ=ಬಂಗಾರದ ಸಿಂಹಾಸನದಲ್ಲಿಟ್ಟು ಅಥವಾ ಬಂಗಾರದಿಂದ ಅಲಂಕೃತವಾದ್ದರಿಂದ ಶ್ರೇಷ್ಠವಾದ ಅಥವಾ ಸಮನುಭಿಃ ಇತಂ ಸಮನ್ವಿತಂ= ದಾನಕೊಡುವಾಗ ಹೇಳಬೇಕಾದ ಮಂತ್ರಗಳಿಂದ ಸಹಿತವಾಗಿ ಯಃ=ಯಾವನು ಭಾಗವತಂ=ಭಾಗವತಪುಸ್ತಕವನ್ನು ದದಾತಿ=ದಾನಮಾಡುವನೋ ಸಃ=ಅವನು ಪರಮಾಂ ಗತಿಂ=ಉತ್ತಮಗತಿಯನ್ನು ಯಾತಿ=ಹೊಂದುವನು.

**ರಾಜಂತೇ ತಾವದನ್ಯಾನಿ ಪುರಾಣಾನಿ ಸತಾಂ ಗಣೇ ।**
**ಯಾವನ್ನ ದೃಶ್ಯತೇ ಸಾಕ್ಷಾತ್ ಶ್ರೀಮದ್ಭಾಗವತಂ ಪರಮ್ ॥ ೧೩ ॥**

ಯಾವತ್=ಎಲ್ಲಿಯವರೆಗೆ ಸಾಕ್ಷಾತ್=ಮುಖ್ಯವಾದ ಪರಂ=ಶ್ರೇಷ್ಠವಾದ ಶ್ರೀಮದ್ಭಾಗವತಂ=ಶ್ರೀಮದ್ಭಾಗವತವು ನ ದೃಶ್ಯತೇ=ಕಾಣಿಸಿಕೊಳ್ಳುವದಿಲ್ಲವೋ ತಾವತ್=ಅಲ್ಲಿಯವರೆಗೆ ಅನ್ಯಾನಿ ಪುರಾಣಾನಿ=ಬೇರೆ ಪುರಾಣಗಳು ಸತಾಂ ಗಣೇ=ಸಜ್ಜನರ ಸಮೂಹದಲ್ಲಿ ರಾಜಂತೇ=ಶೋಭಿಸುವವು.

ವಿಶೇಷ- ಈ ಭಾಗವತ ಕಂಡ ಮೇಲೆ ಎಲ್ಲ ಪುರಾಣಗಳ ಸಾರಾಂಶ ತಿಳಿದು ಬಿಡುವುದು. ಉಳಿದವು ಪ್ರತ್ಯೇಕವಾಗಿ ಒಂದೊಂದು ಅರ್ಥವನ್ನು ತಿಳಿಸುವವು. ಆದ್ದರಿಂದ ಅವುಗಳಲ್ಲಿ ಅನಾದರವೆಂದು ಭಾವ.

**ಸರ್ವವೇದಾಂತಸಾರಂ ಹಿ ಶ್ರೀಭಾಗವತಮಿಷ್ಯತೇ ।**
**ತದ್ರಸಾಮೃತತೃಪ್ತಸ್ಯ ನಾನ್ಯತ್ರ ಸ್ಯಾತ್ ರತಿಃ ಕ್ವಚಿತ್ ॥ ೧೪ ॥**

ಶ್ರೀಮದ್ಭಾಗವತಂ=ಶ್ರೀಮದ್ಭಾಗವತವು ಸರ್ವವೇದಾಂತಸಾರಂ=ಎಲ್ಲ ಸಿದ್ಧಾಂತಗಳಲ್ಲಿ ಶ್ರೇಷ್ಠವಾದದ್ದು ಎಂದು ಇಷ್ಯತೇ=ಇಚ್ಛಿಸಲ್ಪಡುತ್ತದೆ.(ಇಚ್ಛಾಪೂರ್ವಕವಾಗಿ ಅಂಗೀಕೃತವಾಗಿದೆ)ಭಾಗವತವು ಎಲ್ಲ ಉಪನಿಷದ್ರಹಸ್ಯ ವಿಷಯಗಳಿಂದ ಕೂಡಿದ್ದು ಎಂದು ಅಂಗೀಕರಿಸಲ್ಪಟ್ಟಿದೆ. ತದ್ರಸಾಮೃತತೃಪ್ತಸ್ಯ=ಭಾಗವತ ಕಥಾರಸವೆಂಬ ಅಮೃತದಿಂದ ತೃಪ್ತನಾದವನಿಗೆ ಕ್ವಚಿದನ್ಯತ್ರ ರತಿಃ ನ ಸ್ಯಾತ್=ಬೇರೆ ಎಲ್ಲಿಯೂ ಆಸಕ್ತಿಯುಂಟಾಗಲಾರದು.

**ನಿಮ್ನಗಾನಾಂ ಯಥಾಗಂಗಾ ದೇವಾನಾಮಚ್ಯುತೋ ಯಥಾ ।**
**ವೈಷ್ಣವಾನಾಂ ಯಥಾಶಂಭುಃ ಪುರಾಣಾನಾಮಿದಂ ತಥಾ ॥ ೧೫ ॥**

ನಿಮ್ನಗಾನಾಂ=ನದಿಗಳಲ್ಲಿ ಯಥಾಗಂಗಾ=ಗಂಗಾ ಹೇಗೆ ಶ್ರೇಷ್ಠವೋ ದೇವಾನಾಂ ದೇವತೆಗಳಲ್ಲಿ ಯಥಾ=ಹೇಗೆ ಅಚ್ಯುತಃ=ಶ್ರೀಹರಿಯು ಸರ್ವೋತ್ತಮನೋ ವೈಷ್ಣವಾನಾಂ=ವಿಷ್ಣು ಭಕ್ತರಲ್ಲಿ ಯಥಾಶಂಭುಃ=ಶಿವನು ಹೇಗೆ ಉತ್ತಮನೋ ತಥಾ=ಹಾಗೆ ಪುರಾಣಾನಾಂ ಇದಂ=ಪುರಾಣಗಳಲ್ಲಿ ಭಾಗವತ ಇದು ಶ್ರೇಷ್ಠವಾದುದು.

**ಕ್ಷೇತ್ರಾಣಾಂ ಚೈವ ಸರ್ವೇಷಾಂ ಯಥಾಕಾಶೀ ಹ್ಯನುತ್ತಮಾ ।**
**ತಥಾಪುರಾಣವ್ರಾತಾನಾಂ ಶ್ರೀಮದ್ಭಾಗವತಂ ದ್ವಿಜಾಃ ॥ ೧೬ ॥**

ಸರ್ವೇಷಾಂ ಕ್ಷೇತ್ರಾಣಾಂ=ಎಲ್ಲ ಕ್ಷೇತ್ರಗಳಲ್ಲಿ ಯಥಾಕಾಶೀ ಅನುತ್ತಮಾ=ಕಾಶೀಕ್ಷೇತ್ರಕ್ಕೆ ಮಿಗಿಲಾದದ್ದಿಲ್ಲವೋ ತಥಾ=ಹಾಗೆ ಪುರಾಣವ್ರಾತಾನಾಂ=ಪುರಾಣಗಳ ಸಮೂಹಗಳಲ್ಲಿ ಶ್ರೀಮದ್ಭಾಗವತಂ=ಶ್ರೀಮದ್ಭಾಗವತವು ಅನುತ್ತಮವಾದುದು.

**ಶ್ರೀಮದ್ಭಾಗವತಂ ಪುರಾಣಮಮಲಂ ಯದ್ವೈಷ್ಣವಾನಾಂ ಪ್ರಿಯಮ್**
**ಯಸ್ಮಿನ್ ಪಾರಮಹಂಸ್ಯಮೇಕಮಮಲಂ ಜ್ಞಾನಂ ಪರಂ ಗೀಯತೇ ।**
**ಯತ್ರಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಮಾವಿಷ್ಕೃತಂ**
**ತತ್ ಶೃಣ್ವನ್ ವಿಪಠನ್ ವಿಚಾರಣಪರೋ ಭಕ್ತ್ಯಾ ವಿಮುಚ್ಯೇನ್ನರಃ ॥ ೧೭ ॥**

ಯತ್=ಯಾವುದು ವೈಷ್ಣವಾನಾಂ=ವಿಷ್ಣುಭಕ್ತರಿಗೆ ಪ್ರಿಯಂ=ಪ್ರಿಯವಾದುದೋ ಯಸ್ಮಿನ್=ಯಾವ ಭಾಗವತದಲ್ಲಿ ಪಾರಮಹಂಸ್ಯಂ=ಪರಮ ಹಂಸರಿಗೆ ಯೋಗ್ಯವಾದ ಏಕಂ=ಮುಖ್ಯವಾದ ಅಮಲಂ=ನಿರ್ದುಷ್ಟವಾದ ಪರಂ ಜ್ಞಾನಂ ಗೀಯತೇ=ಶ್ರೇಷ್ಠವಾದ ಜ್ಞಾನ ಸಾಧನವು ಹೇಳಲ್ಪಡುವದೋ ಯತ್ರ=ಎಲ್ಲಿ ಜ್ಞಾನವಿರಾಗಭಕ್ತಿಸಹಿತಂ ನೈಷ್ಕರ್ಮ್ಯಂ=ಶ್ರೀಹರಿಯ ಪ್ರೀತಿಸಂಪಾದನೆ ಕಾರಣವಾದ ಜ್ಞಾನ ಭಕ್ತಿ ವೈರಾಗ್ಯದಿಂದ ಕೂಡಿದ ಮೋಕ್ಷವು ಆವಿಷ್ಕೃತಂ=ತಿಳಿಸಲ್ಪಟ್ಟಿದೆ ತತ್=ಅಂತಹ ಅಮಲಂ=ನಿರ್ದುಷ್ಟವಾದ ಭಾಗವತವನ್ನು ಭಕ್ತ್ಯಾ=ಭಕ್ತಿಯಿಂದ ಶೃಣ್ವನ್=ಕೇಳುವವನು ವಿಪಠನ್=ಪಠನ ಮಾಡುವವನು ವಿಚಾರಪರಃ=ಮನನ ಮಾಡುವ ನರಃ=ಅಧಿಕಾರಿಯು ಮುಚ್ಯತೇ=ಮುಕ್ತನಾಗುವನು.

**ಕಸ್ಮೈಯೇನ ವಿಭಾಸಿತೋಽಯಮತುಲೋ ಜ್ಞಾನಪ್ರದೀಪಃ ಪುರಾ**
**ತದ್ರೂಪೇಣ ಚ ನಾರದಾಯ ಮುನಯೇ ಕೃಷ್ಣಾಯ ತದ್ರೂಪಿಣಾ ।**
**ಯೋಗೀಂದ್ರಾಯ ತದಾತ್ಮನಾಽಥ ಭಗವದ್ರಾತಾಯ ಕಾರುಣ್ಯತ**
**ಸ್ತಚ್ಛುದ್ಧಂ ವಿಮಲಂ ವಿಶೋಕಮಮೃತಂ ಸತ್ಯಂ ಪರಂ ಧೀಮಹಿ ॥ ೧೮ ॥**

ಯೇನ=ಯಾರಿಂದ ಅಯಂ=ಈ ಅತುಲಃ=ಅಸದೃಶವಾದ ಜ್ಞಾನಪ್ರದೀಪಃ= ಜ್ಞಾನಸಾಧನವಾದ ಅಥವಾ ಜ್ಞಾನವೆಂಬ ದೀಪವು ಪುರಾ=ಹಿಂದೆ ಕಸ್ಮೈ=ಯಾರಿಗೆ ವಿಭಾಸಿತಃ=ಪ್ರಕಾಶಿತವಾಯಿತು(ಎಂದು ಪ್ರಶ್ನೆ) ಕಸ್ಮೈ=ಚತುರ್ಮುಖನಿಗೆ ತದ್ರೂಪೇಣ= ('ಬ್ರಹ್ಮಣಿ ಬ್ರಹ್ಮರೂಪೇಣ' ಎಂದು ಹೇಳಿದಂತೆ) ಬಹ್ಮರೂಪದಿಂದ 'ತದ್ರೂಪೇಣ ದೇವಋಷಿಣಾಂ ಚ ನಾರದಃ' ಎಂದು ಹೇಳಿದ ಪ್ರಕಾರ ನಾರದನಲ್ಲಿರುವ ವಿಭೂತಿ ರೂಪದಿಂದ ನಾರದಾಯ ಮುನಯೇ=ನಾರದ ಮಹರ್ಷಿಗಳಿಗೆ ವಿಭಾಸಿತಂ= ಪ್ರಕಾಶಿತವು. ಕೃಷ್ಣಾಯ=ವೇದವ್ಯಾಸರಿಗೆ ತದ್ರೂಪಿಣಾ=ನಾರದ ರೂಪದಿಂದ ತದ್ರೂಪವತೇ ಯೋಗೀಂದ್ರಾಯ=ಭಗವಂತನ ಜ್ಞಾನೋಪಾಯ ತಿಳಿದವರಲ್ಲಿ ಶ್ರೇಷ್ಠರಾದ ಶುಕ್ರಾಚಾರ್ಯರಿಗೆ ತದಾತ್ಮನಾ=ವ್ಯಾಸ ರೂಪದಿಂದ ಅಥ=ನಂತರ ಕಾರುಣ್ಯತಃ=ಅವಶಿಷ್ಠವಾದ ಆಯುಷ್ಯ ಸಾಮರ್ಥ್ಯಗಳನ್ನು ಸಾಧನ ಮಾಡಿ ಸಾರ್ಥಕ ಮಾಡಲಿಲ್ಲವೆಂದು ಮನೋವ್ಯಥೆಗೀಡಾದ ಪರೀಕ್ಷಿತನ ಮೇಲೆ ತನಗೆ ಉಂಟಾದ ದಯೆಯಿಂದ ಭಗವದ್ರಾತಾಯ=ಪರೀಕ್ಷಿತನಿಗೆ ಶುಕ ರೂಪದಿಂದ ವಿಭಾಸಿತಂ= ಉಪದಿಷ್ಟವಾಯಿತೋ ತಂ=ಅಂಥ ಶುದ್ಧಂ=ಜಡಾಮಿಶ್ರನಾದ ವಿಮಲಂ=ವಿಶೇಷ ಧಾರಕನಾದ (ಮಲಮಲ್ಲಧಾರಣೇ ಎಂಬ ಧಾತು)ವಿಶೋಕಂ=ದುಃಖರಹಿತನಾದ ಅಮೃತಂ=ನಿತ್ಯ ಮುಕ್ತನಾದ ಸತ್ಯಂ=ಸ್ವತಂತ್ರ್ಯನಾದ ಪರಂ=ಸರ್ವೋತ್ತಮನಾದ ಶ್ರೀ ಹರಿಯನ್ನು ಧೀಮಹಿ=ಧ್ಯಾನ ಮಾಡೋಣ. ಉಪಕ್ರಮದಲ್ಲಿ ಹೇಳಿದ್ದರ ಸಂಪುಟೀಕರಣ ಮಾಡಿದಂತಾಯಿತು.

**ನಮಸ್ತಸ್ಮೈ ಭಗವತೇ ವಾಸುದೇವಾಯ ಸಾಕ್ಷಿಣೇ ।**
**ಯ ಇದಂ ಕೃಪಯಾ ಕಸ್ಮೈ ವ್ಯಾಚಚಕ್ಷೇ ಮುಮುಕ್ಷವೇ ॥ ೧೯ ॥**

ಮುಮುಕ್ಷವೇ=ಮೋಕ್ಷೇಚ್ಛುವಾದ(ಹರಿದರ್ಶನಕ್ಕಾಗಿ) ಕಸ್ಮೈ=ಬ್ರಹ್ಮನಿಗೆ ಕೃಪಯಾ= ದಯೆಯಿಂದ ಯಃ=ಯಾರು ವ್ಯಾಚಕ್ಷತೇ=ಹೇಳಿದನೋ ತಸ್ಮೈ=ಅಂಥ ಸಾಕ್ಷಿಣೇ= ಸರ್ವಸಾಕ್ಷಿಯಾದ ಭಗವತೇ=ಷಡ್ಗುಣೈಶ್ವರ್ಯಸಂಪನ್ನನಾದ ವಾಸುದೇವಾಯ= ಶ್ರೀಕೃಷ್ಣನಿಗೆ ನಮಃ=ನಮಸ್ಕಾರವು.

**ಯೋಗೀಂದ್ರಾಯ ನಮಸ್ತಸ್ಮೈ ಶುಕಾಯ ಬ್ರಹ್ಮರೂಪಿಣೇ ।**
**ಸಂಸಾರಸರ್ಪದಷ್ಟಂ ಯೋ ವಿಷ್ಣುರಾತಮಮೂಮುಚತ್ ॥ ೨೦ ॥**

ಸಂಸಾರಸರ್ಪದಷ್ಟಂ=ಸಂಸಾರವೆಂಬ ಸರ್ಪದಿಂದ ಕಚ್ಚಲ್ಪಟ್ಟ ವಿಷ್ಣುರಾತಂ= ಪರೀಕ್ಷಿತನನ್ನು ಯಃ=ಯಾವನು ಅಮೂಮುಚತ್=ಉಪದೇಶದಿಂದ ಮೋಚನ

ಮಾಡಿದನೋ ತಸ್ಮೈ=ಅಂಥ ಬ್ರಹ್ಮರೂಪಿಣೇ=ಶ್ರೀಹರಿ ವಿಶೇಷ ಸನ್ನಿಧಾನ ಪಾತ್ರರಾದ ಯೋಗೀಂದ್ರಾಯ=ಯೋಗಿಶ್ರೇಷ್ಠರಾದ ಶುಕಾಯ=ಶುಕಾಚಾರ್ಯರಿಗೆ ನಮಃ=ನಮಸ್ಕಾರವು.

**ಭವೇ ಭವೇ ಯಥಾಭಕ್ತಿಃ ಪಾದಯೋಸ್ತವ ಜಾಯತೇ ।**
**ತಥಾ ಕುರುಷ್ವ ಯೋಗೇಶ ನಾಥಸ್ತ್ವಂ ಮೇ ಯತಃ ಪ್ರಭೋ ॥ ೨೧ ॥**

ಹೇ ಪ್ರಭೋ=ಸಮರ್ಥರಾದ ಶುಕಾಚಾರ್ಯರೇ ಯತಃ=ಯಾವ ಕಾರಣ ನನಗೆ ತ್ವಂ=ನೀವು ನಾಥಃ=ಸ್ವಾಮಿಗಳಾಗಿದ್ದೀರಿ. ಆದ್ದರಿಂದ ಹೇ ಯೋಗೇಶ=ಉಪಾಯಜ್ಞರೇ ಭವೇ ಭವೇ=ಪ್ರತಿ ಜನ್ಮದಲ್ಲಿ ತವ=ನಿನ್ನ ಪಾದಯೋಃ=ಪಾದಾರವಿಂದದಲ್ಲಿ ಭಕ್ತಿಃ=ಭಕ್ತಿಯು ಜಾಯತೇ=ಉಂಟಾಗುವಂತೆ ತಥಾ=ಹಾಗೆ ಕುರುಷ್ವ=ಮಾಡಿರಿ.

**ನಾಮಸಂಕೀರ್ತನಂ ಯಸ್ಯ ಸರ್ವಪಾಪಪ್ರನಾಶನಮ್ ।**
**ಪ್ರಣಾಮೋ ದುಃಖಶಮನಸ್ತಂ ನಮಾಮಿ ಹರಿಂ ಪರಮ್ ॥ ೨೨ ॥**

ಯಸ್ಯ=ಯಾವ ಪರಮಾತ್ಮನ ನಾಮಸಂಕೀರ್ತನಂ=ನಾಮ ಸ್ಮರಣ ಹಾಗು ಸಂಕೀರ್ತನೆಗಳು ಸರ್ವಪಾಪಪ್ರಣಾಶನಂ=ಸಕಲಪಾಪಪರಿಹಾರಕವು ಪ್ರಣಾಮಃ= ನಮಸ್ಕಾರವು ದುಃಖಶಮನಃ=ದುಃಖ ನಾಶಕವು ತಂ=ಅಂತಹ ಪರಂ= ಸರ್ವೋತ್ತಮನಾದ ಹರಿಂ=ಶ್ರೀಹರಿಯನ್ನು ನಮಾಮಿ=ನಮಸ್ಕರಿಸುವೆನು.

**ಐದನೇಯ ಅಧ್ಯಾಯ 23ನೇ ಶ್ಲೋಕದ(ಪುಟ ಸಂ-108) ವ್ಯಾಖ್ಯಾನದಲ್ಲಿಯೇ ತಾತ್ಪರ್ಯವು ಕೊನೆಗೊಂಡಿರುತ್ತದೆ. ಗ್ರಂಥಸಮಾಪ್ತಿಯ ದೃಷ್ಟಿಯಿಂದ ಮಂಗಲಪದ್ಯವನ್ನು ಇಲ್ಲಿ ನಿಬಂಧನೆಮಾಡಲಾಗಿದೆ.**

ನಿತ್ಯಾದೋಷಸ್ವರೂಪಾಯ ಗುಣಪೂರ್ಣಾಯ ಸರ್ವದಾ ।
ನಾರಾಯಣಾಯ ಹರಯೇ ನಮಃ ಪ್ರೇಷ್ಠತಮಾಯ ಮೇ ॥ ೨೩ ॥

ಭಗವಂತನು ನಿರ್ದುಷ್ಟಸ್ವರೂಪನಾಗಿದ್ದಾನೆ. ಸರ್ವದಾ ಸಕಲಗುಣಗಳಿಂದ ಪೂರ್ಣನಾದ ಭಗವಂತನು ನನಗೆ ಪರಮಾಪ್ತನಾಗಿರುತ್ತಾನೆ. ಅಂತಹ ಪರಮಾಪ್ತನಾದ ನಾರಾಯಣನಿಗೆ ನಮಸ್ಕಾರಗಳು. ಅವನ ಪ್ರೇರಣೆಯಿಂದಲೇ ನಾನು ಈ ಗ್ರಂಥವನ್ನು ರಚಿಸಿರುವೆನು. ಈ ಕರ್ಮದಿಂದ ಪರಮಾತ್ಮನು ಪ್ರೀತನಾಗಲಿ.

**॥ ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ವೈಯ್ಯಾಸಿಕ್ಯಾಂ ಅಷ್ಟಾದಶಸಾಹಸ್ರ್ಯಾಂ ಸಂಹಿತಾಯಾಂ ದ್ವಾದಶಸ್ಕಂಧೇ ಸೂತೋಕ್ತೌ ತ್ರಯೋದಶೋऽಧ್ಯಾಯಃ ॥**

**॥ ಇಲ್ಲಿಗೆ ಹನ್ನೆರಡನೇ ಸ್ಕಂಧವು ಸಮಾಪ್ತವಾಯಿತು ॥**

## ಶ್ಲೋಕಾರ್ಧಾನುಕ್ರಮಣಿಕಾ

## ಖ



## ಗ



## ಘ



## ಚ

### ನ

## ಬ

## ಯ

## ರ



## ಲ

ವ

ಮಾರ್ಕಂಡೇಯರು ಸುತ್ತಲೂ ನೋಡುತ್ತಿದ್ದಾರೆ. ಯಾವ ಪ್ರಾಣಿಗಳೂ ಇಲ್ಲ.
ಸುತ್ತಮುತ್ತ ಜಲದ ರಾಶಿ. ಭೋರ್ಗರೆಯುವ ಸಮುದ್ರ. ಸಮುದ್ರಗಳೆಲ್ಲ ಒಂದಾಗಿವೆ.
ಒಂದೆಡೆ ಮಕರ ಮೊದಲಾದ ಜಲಚರಗಳಿಂದ ಉಪದ್ರವ ಮತ್ತೊಂದೆಡೆ ಹಸಿವೆ
ನೀರಡಿಕೆಗಳಿಂದ ತಲ್ಲಣಿಸಿದ್ದಾರೆ. ಒಬ್ಬಂಟಿಗರಾಗಿದ್ದಾರೆ. ಮೂಕರಾಗಿದ್ದಾರೆ.
ಕಗ್ಗತ್ತಲಿನಿಂದ ಕುರುಡರಾಗಿದ್ದಾರೆ. ದೈಹಿಕ ಪ್ರಯತ್ನಗಳೆಲ್ಲ ಕುಂಠಿತವಾಗಿವೆ.
ಆಕಾಶ ಭೂಮಿ ಯಾವುದೂ ಕಾಣಿಸುತ್ತಿಲ್ಲ.

ಕೊನೆಗೆ ಅವರಿಗೊಂದು ವಟವೃಕ್ಷ ಕಾಣಿಸಿತು. ವಿಶಾಲವಾದ ಆ ವೃಕ್ಷವು ಫಲ-ಪುಷ್ಪ-
ಚಿಗುರೆಲೆಗಳಿಂದ ಶೋಭಾಯಮಾನವಾಗಿದೆ. ಆ ವೃಕ್ಷದ ಶಾಖೆಯಲ್ಲಿ ಆಲದೆಲೆಯ
ಮೇಲೆ ಮಲಗಿದ ಶಿಶುವನ್ನು ಕಂಡಿದ್ದಾರೆ.

ಆ ಶಿಶು ತನ್ನ ಪ್ರಭೆಯಿಂದ ಪ್ರಲಯದ ಕಗ್ಗತ್ತಲನ್ನೂ ಅನಾಯಾಸವಾಗಿ ನಿವಾರಿಸುತ್ತಿದೆ.
ಆ ಬಾಲಕನ ದೇಹದ ಕಾಂತಿಯಿಂದ ಮರಕತಮಣಿಯ ಸೊಬಗು ಹೆಚ್ಚಾಗಿದೆ.
ಮುಖ ಕಾಂತಿಸಂಪನ್ನವಾಗಿದೆ. ಶಂಖದ ಕತ್ತು. ವಿಶಾಲವಾದ ಎದೆ. ಅಂದವಾದ ನಾಸಿಕಾ.
ಲಕ್ಷ್ಮೀದೇವಿಗೂ ಶಕ್ತಿಯನ್ನು ನೀಡುವ ಹುಬ್ಬುಗಳು. ಅವಯವವೆಲ್ಲ ಸೌಂದರ್ಯದ
ಖನಿಯಾಗಿದೆ. ಕೋಮಲವಾದ ಕೈಗಳಿಂದ ಚರಣಾಂಬುಜವನ್ನು ಮುಖದಲ್ಲಿರಿಸಿದ್ದಾನೆ.